# ದತ್ತಾ

(ಶರಚ್ಚಂದ್ರರ ಕಾದಂಬರಿ)

ಅನುವಾದಕರು :

**ದಿ|| ಡಾ|| ಎಚ್. ಕೆ. ವೇದವ್ಯಾಸಾಚಾರ್ಯ,** ಎಂ.ಎ., ಪಿ.ಎಚ್‌ಡಿ.

ಪ್ರಕಾಶಕರು :

**ಡಿ. ವಿ. ಕೆ. ಮೂರ್ತಿ**

**ಕೃಷ್ಣಮೂರ್ತಿಪುರಂ : ಮೈಸೂರು**

# ದತ್ತಾ

## ೧

ಹೂಗ್ಲಿ ಶಾಖಾ ಶಾಲೆಯ ಹೆಡ್‌ಮಾಸ್ಟರು ಶಾಲೆಯ ಮೂರು ರತ್ನಗಳೆಂದು ಆಗ ಹೊಗಳುತ್ತಿದ್ದ, ಮೂರು ವಿದ್ಯಾರ್ಥಿಗಳೂ ಬೇರೆಬೇರೆ ಹಳ್ಳಿಗಳಿಂದ ಪ್ರತಿದಿನವೂ ಒಂದು ಹರದಾರಿಯ ಹಾದಿ ನಡೆದು ಬರುತ್ತಿದ್ದರು. ಮೂವರಲ್ಲಿಯೂ ಹೆಚ್ಚಾದ ಸ್ನೇಹವಿತ್ತು. ಅವರು ಮೂವರೂ ರಸ್ತೆಯ ಪಕ್ಕದಲ್ಲಿದ್ದ ಒಣಗಿದ ಆಲದಮರದ ಕೆಳಗೆ ಸೇರಿ ಅಲ್ಲಿಂದ ಒಟ್ಟಿಗೆ ಹೋಗದಿದ್ದ ದಿನವೇ ಇಲ್ಲವೆನ್ನಬಹುದು. ಮೂವರ ಮನೆಗಳೂ ಹೂಗ್ಲಿಯ ಪಶ್ಚಿಮಕ್ಕೆ ಇದ್ದವು. ಸರಸ್ವತಿ–ಸೇತುವೆಯನ್ನು ದಾಟಿ ದಿಘಡಾಹಳ್ಳಿಯಿಂದ ಜಗದೀಶ ಬರುತ್ತಿದ್ದ. ವನಮಾಲಿ ಮತ್ತು ರಾಸಬಿಹಾರಿ ಪಕ್ಕದ ಕೃಷ್ಣಾಪುರ ಮತ್ತು ರಾಧಾಪುರದಿಂದ ಬರುತ್ತಿದ್ದರು. ಇವರಲ್ಲಿ ಜಗದೀಶ ಎಲ್ಲರಿಗಿಂತಲೂ ಬುದ್ಧಿವಂತ. ಆದರೂ ಎಲ್ಲರಿಗಿಂತಲೂ ಬಡವ. ಮದುವೆ ಮುಂಜಿ ಮಾಡಿಸಿ ಪೌರೋಹಿತ್ಯದಿಂದ ಅವನ ತಂದೆ ಸಂಸಾರ ನಡೆಸುತ್ತಿದ್ದರು. ವನಮಾಲಿ ಶ್ರೀಮಂತರ ಮನೆಯ ಹುಡುಗ. ಅವನ ತಂದೆಯನ್ನು ಜನರು ಕೃಷ್ಣಾಪುರದ ಜಮೀನುದಾರರೆನ್ನುತ್ತಿದ್ದರು. ರಾಸಬಿಹಾರಿಯೂ ಅನುಕೂಲಸ್ಥರ ಮನೆಯವ. ಜಮೀನು-ಸಮೀನು, ಮನೆಮಠಗಳೆಲ್ಲ ಅವನಿಗಿದ್ದವು. ಇಷ್ಟಾದರೂ ಆ ಹುಡುಗರು ಆ ಪಟ್ಟಣದಲ್ಲಿ ಮನೆಯನ್ನು ಬಾಡಿಗೆಗೆ ತೆಗೆದುಕೊಂಡಿರದೆ, ಮಳೆ–ಗಾಳಿ–ಬಿಸಿಲಿನಲ್ಲಿ ದೂರ ನಡೆದು ಶಾಲೆಗೆ ಬರುತ್ತಿದ್ದರು. ಇದು ಹುಡುಗರಿಗೆ ಕಷ್ಟವೆಂದು ಅವರ ತಂದೆತಾಯಂದಿರಿಗೆ ಅನಿಸಲಿಲ್ಲ. ಅಲ್ಲದೆ ಇಷ್ಟು ಕಷ್ಟವನ್ನೂ ಪಡದಿದ್ದರೆ, ವಾಗ್ದೇವಿಯ ಅನುಗ್ರಹವಾಗುವುದಾದರೂ ಹೇಗೆಂದು ಅವರೂ ಸುಮ್ಮನಿದ್ದರು. ಹೀಗೇ ಹುಡುಗರು ಎಂಟ್ರೆನ್ಸ್ ಮುಗಿಸಿದರು. ಅವರು ಮೂವರೂ ಆ ಒಣಗಿದ ಆಲದ ಮರದಡಿಯಲ್ಲಿ ಕುಳಿತು, ಅದರ ಸಾಕ್ಷಿಯಾಗಿ ನಿತ್ಯವೂ ಪ್ರತಿಜ್ಞೆ ಮಾಡುತ್ತಿದ್ದರು. ನಾವು ಮೂವರೂ ಎಂದೂ ಅಗಲುವುದಿಲ್ಲ, ಎಂದೂ ಲಗ್ನವಾಗುವುದಿಲ್ಲ, ವಕೀಲರಾಗಿ ಮೂವರೂ ಒಂದೇ ಮನೆಯಲ್ಲಿದ್ದು, ಹಣ ಸಂಪಾದಿಸಿ ದೇಶಕಾರ್ಯಕ್ಕೆ ಅದನ್ನು ವಿನಿಯೋಗಿಸೋಣ.

ಆದರೆ ಇದು ಹುಡುಗುತನದ ಕಲ್ಪನೆ ಮಾತ್ರ. ಸತ್ಯವಾದದ್ದು ಎಂದಾದರೂ ಮುಂದೆ ಬಂದು ನಿಲ್ಲತಕ್ಕದ್ದೇ. ಅದರ ಸ್ವರೂಪವೇ ಬೇರೆಯಾಯಿತು.

ಸ್ನೇಹದ ಬಂಧನ ಬಿ.ಎ. ಕ್ಲಾಸಿನಲ್ಲೇ ಸಡಲಿತು. ಆಗ ಕಲಿಕತ್ತೆಯಲ್ಲಿ ಕೇಶವಚಂದ್ರಸೇನನ ಪ್ರತಾಪ ಹೆಚ್ಚಾಗಿತ್ತು. ಉಪನ್ಯಾಸದ ಸಡಗರ ಬಹಳವಾಗಿತ್ತು. ಇದರ ಪ್ರಭಾವ ಹೆಚ್ಚಾಗಿ ಈ ಮೂವರು ಹಳ್ಳಿಯ ಹುಡುಗರೂ ಅದರಲ್ಲಿ ಕೊಚ್ಚಿಹೋದರು. ಆದರೆ ಅದರ ವೇಗದಲ್ಲಿ ಸಿಕ್ಕ ವನಮಾಲಿ ಮತ್ತು ರಾಸಬಿಹಾರಿ ಬ್ರಹ್ಮಸಮಾಜದ ದೀಕ್ಷೆ ತೊಟ್ಟರು. ಆದರೆ ಜಗದೀಶ ಹಾಗೆ ಮಾಡದೆ ಮಧ್ಯದಲ್ಲಿ ಸಿಕ್ಕುಬಿದ್ದ. ಅವರಿಬ್ಬರನ್ನು ಮೀರಿಸಿದ ಮೇಧಾವಿಯಾದರೂ ಅವನ ಮನಸ್ಸು ತುಸು ಬಿಗಿ, ಅಲ್ಲದೆ ಅವನ ತಂದೆ ಇನ್ನೂ ಜೀವಂತರಾಗಿದ್ದರು. ಉಳಿದಿಬ್ಬರಿಗೆ ಹಾಗಿರಲಿಲ್ಲ. ವನಮಾಲಿಯ ತಂದೆ ಕೆಲವು ದಿನಗಳ ಕೆಳಗೆ ತೀರಿಹೋಗಿದ್ದುದರಿಂದ ಅವನೇ ಈಗ ಕೃಷ್ಣಾಪುರದ ಜಮೀನುದಾರನಾದ. ರಾಸಬಿಹಾರಿಯಂತೂ ರಾಧಾಪುರದ ಆಸ್ತಿಪಾಸ್ತಿಗಳ ಏಕಛತ್ರಾಧಿಪತಿಯಾಗಿದ್ದ. ಆದ್ದರಿಂದ ಅವರಿಬ್ಬರು ಸ್ವಲ್ಪದಿನಗಳಲ್ಲೇ ಬ್ರಹ್ಮಸಮಾಜದಲ್ಲಿ ಲಗ್ನವಾಗಿ ತಮ್ಮ ಉಚ್ಚಶಿಕ್ಷಿತ ಪತ್ನಿಯರೊಂದಿಗೆ ಊರಿಗೆ ಬಂದರು. ಆದರೆ ಬಡ ಜಗದೀಶನಿಗೆ ಈ ಸುಯೋಗ ಲಭಿಸಲಿಲ್ಲ. ಅವನು ವಯಸ್ಸಿಗೆ ಸರಿಯಾಗಿ ಲಾ ಪರೀಕ್ಷೆಯಲ್ಲಿ ತೇರ್ಗಡೆಯಾಗಿ ಹನ್ನೊಂದು ವಯಸ್ಸಿನ ಒಬ್ಬ ಬ್ರಾಹ್ಮಣ ಕನ್ಯೆಯನ್ನು ಮದುವೆಯಾದ. ಅನಂತರ ಸಂಪಾದನೆಗಾಗಿ ಅವನು ಅಲಹಾಬಾದಿಗೆ ತೆರಳಬೇಕಾಗಿ ಬಂದಿತು. ಉಳಿದಿಬ್ಬರಿಗೆ ಕಲಿಕತ್ತೆಯಲ್ಲಿ ಅತ್ಯಂತ ಸುಲಭವೆನಿಸಿದ ಕೆಲಸ ಹಳ್ಳಿಗಳಲ್ಲಿ ಬಹಳ ಕಷ್ಟವಾಗಿ ತೋರಿತು. ಅವರ ಹೆಂಡಂದಿರು ಮುಸುಗಿಲ್ಲದೆ, ಕಾಲಿಗೆ ಮೆಟ್ಟನ್ನು ಹಾಕಿಕೊಂಡು ಹೊರಗೆ ಹೋಗುತ್ತಿದ್ದರು. ಈ ತಮಾಷೆಯನ್ನು ನೋಡಲು ಹಳ್ಳಿಗರು ಗುಂಪುಕೂಡುತ್ತಿದ್ದರು. ಸ್ವಲ್ಪ ದಿನಗಳಲ್ಲಿಯೇ ಹಳ್ಳಿಯಲ್ಲೆಲ್ಲ ಗುಸಗುಸ ಪಿಸಪಿಸ ಶುರುವಾಗಿ ಅವರು ಹಳ್ಳಿಯಲ್ಲಿರುವುದೇ ಕಷ್ಟವಾಗಿ ಹೋಯಿತು. ವನಮಾಲಿ ಹಳ್ಳಿಯನ್ನು ಬಿಟ್ಟು ಕಲಿಕತ್ತೆಗೆ ಬಂದು ಅಲ್ಲೇ ಇರತೊಡಗಿದ. ಅಲ್ಲದೆ ಜಮೀನುದಾರಿಯ ಜೊತೆಗೆ ವ್ಯಾಪಾರವನ್ನೂ ಆರಂಭಿಸಿದ. ಆದರೆ ರಾಸಬಿಹಾರಿಯ ವರಮಾನ ಸ್ವಲ್ಪವೇ. ಆದ್ದರಿಂದ ಅವನು ಇದನ್ನು ಬಾಯಿ ಮುಚ್ಚಿ ಸಹಿಸಿಕೊಳ್ಳಲೇ ಬೇಕಾಯಿತು. ಅವನು ಆ ಹಳ್ಳಿಯಲ್ಲಿ ಬಹಿಷ್ಕೃತನಾಗಿಯೇ ಇರತೊಡಗಿದ.

ಒಬ್ಬ ಅಲಹಾಬಾದು, ಒಬ್ಬ ಕಲಿಕತ್ತ, ಒಬ್ಬ ರಾಧಾಪುರದಲ್ಲಿರುತ್ತಿದ್ದುದ ರಿಂದ ಇವರ ಹಿಂದಿನ ಪ್ರತಿಜ್ಞೆಗಳೆಲ್ಲ ಮಣ್ಣುಪಾಲಾಗಿ ಇವರು ಸಾಕ್ಷಿಯಾ ಗಿಟ್ಟುಕೊಂಡಿದ್ದ ಒಣ ಆಲದಗಿಡ ಯಾರನ್ನೂ ದೂರದೆ, ಮನಸ್ಸಿನಲ್ಲೇ ನಗತೊಡಗಿತು.

ಹೀಗೆ ಬಹಳ ದಿನಗಳು ಕಳೆದುವು. ಈ ಮಧ್ಯದಲ್ಲಿ ಗೆಳೆಯರಿಗೆ ಪರ ಸ್ಪರ ಭೇಟಿಯಾಗದಿದ್ದರೂ, ಆ ಬಾಲ್ಯದ ಸ್ನೇಹವಿನ್ನೂ ಅಳಿಸಿ ಹೋಗಿರ ಲಿಲ್ಲ. ಜಗದೀಶನಿಗೆ ಗಂಡು ಮಗ ಹುಟ್ಟಿದಕೂಡಲೆ ಅವನು ಹಲಹಾಬಾದಿ ನಿಂದ ಈ ಸುವಾರ್ತೆಯನ್ನು ವನಮಾಲಿಗೆ ತಿಳಿಸಿ ಒಂದು ಪತ್ರ ಬರೆದ— "ನಿನಗೊಬ್ಬಳು ಮಗಳು ಹುಟ್ಟಿದರೆ ಅವಳನ್ನು ನನ್ನ ಸೊಸೆಯನ್ನಾಗಿ ಮಾಡಿಕೊಂಡು ಹುಡುಗತನದಲ್ಲಿ ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತ ಮಾಡಿ ಕೊಳ್ಳುತ್ತೇನೆ. ನಿನ್ನ ದಯೆಯಿಂದಲೇ ನಾನಿಂದು ವಕೀಲನಾಗಿ ಸುಖವಾ ಗಿದ್ದೇನೆಂಬುದನ್ನು ಎಂದಿಗೂ ಮರೆಯಲಾರೆ."

ಅದಕ್ಕೆ ವನಮಾಲಿ ಉತ್ತರ ಬರೆದ—"ಬಹಳ ಸಂತೋಷ. ನಿನ್ನ ಮಗ ಚಿರಂಜೀವಿಯಾಗಲಿ. ನನಗೆ ಮಗಳು ಹುಟ್ಟುವ ಭರವಸೆ ಇಲ್ಲ. ಆದರೆ ಎಂದಾದರೂ ಭಗವಂತನ ಅನುಗ್ರಹದಿಂದ ಅದಾದರೆ ನಿನ್ನ ಹುಡುಗ ನಿಗೆ ಲಗ್ನ ಮಾಡಿಕೊಡುತ್ತೇನೆ." ಈ ಕಾಗದವನ್ನೋದಿ ವನಮಾಲಿ ಮನಸ್ಸಿ ನಲ್ಲೇ ನಕ್ಕುಬಿಟ್ಟ. ರಾಸಬಿಹಾರಿಗೆ ಗಂಡುಮಗನಾದಾಗಲೂ ಹೀಗೆ ಕಾಗದ ಬರೆದ. ವ್ಯಾಪಾರದಿಂದ ವನಮಾಲಿ ಬಹಳ ದೊಡ್ಡ ಹಣವಂತ ನಾದ್ದರಿಂದ ಈಗೆಲ್ಲರೂ ಅವನ ಮಗಳನ್ನು ಸೊಸೆಯಾಗಿ ಮಾಡಿಕೊಳ್ಳಲು ಬಯಸುತ್ತಾರೆ.

೨

ಆಮೇಲೆ—ನಾಲ್ಕಾರು ತಿಂಗಳ ಮಾತಲ್ಲ—ಇಪ್ಪತ್ತೈದು ವರ್ಷಗ ಳಾದಮೇಲಿನ ಕತೆ. ಈಗ ವನಮಾಲಿ ಮುದುಕ. ಕೆಲವು ವರ್ಷಗಳಿಂದ ರೋಗದಿಂದ ನರಳುತ್ತಾ ನರಳುತ್ತಾ ಅವನು ಹಾಸಿಗೆ ಹಿಡಿದಿದ್ದ. ಇನ್ನು ಗುಣವಾಗುವುದು ಶ್ರಮಸಾಧ್ಯವೆಂದು ಅವನು ತಿಳಿದುಕೊಂಡ. ಅವನು ಭಗವತ್ಪರಾಯಣ ಮತ್ತು ಧರ್ಮಭೀರು. ಆದ್ದರಿಂದ ಸಾವೆಂದರೆ ಅವನಿ ಗೇನೂ ಭಯವಿಲ್ಲ. ಆದರೆ ತನ್ನ ಒಬ್ಬಳೇ ಮಗಳಾದ ವಿಜಯಳ ಲಗ್ನ ಮಾಡುವ ಅವಕಾಶ ಸಿಗಲಿಲ್ಲವೆಂಬುದೊಂದೇ ಅವನಿಗೆ ಯೋಚನೆಯಾಗಿತ್ತು.

ಅಂದು ಸಂಜೆ ಅವನು ತನ್ನ ಮಗಳ ಕೈಹಿಡಿದು ಹೇಳಿದ— "ನನಗೆ ಗಂಡು ಮಕ್ಕಳಿಲ್ಲವೆಂದು ಸ್ವಲ್ಪವೂ ಯೋಚನೆಯಿಲ್ಲ. ನೀನೇ ನನ್ನ ಸರ್ವಸ್ವ. ನಿನಗಿನ್ನೂ ಹದಿನೆಂಟು ವರುಷ ತುಂಬಿರದಿದ್ದರೂ ಇಷ್ಟು ದೊಡ್ಡ ಆಸ್ತಿಯ ಭಾರವನ್ನು ನಿನ್ನ ಮೇಲೆ ಹಾಕಿಹೋಗಲು ನಾನು ಎಳ್ಳಷ್ಟೂ ಹಿಂಜರಿಯು ವುದಿಲ್ಲ. ನಿನಗೆ ತಾಯಿ, ಅಣ್ಣ–ತಮ್ಮಂದಿರು, ದೂರದ ಮಾವ, ಕಕ್ಕ ಯಾರೂ ಇಲ್ಲ. ಆದರೂ ಆಸ್ತಿಯೆಲ್ಲ ಸುರಕ್ಷಿತವಾಗಿರುತ್ತೆಂದು ನನಗೆ ಧೈರ್ಯವಾಗಿದೆ. ಆದರೆ ಮಗು, ನಾನೊಂದು ಮಾತನ್ನು ಮಾತ್ರ ಹೇಳಿ ಹೋಗುತ್ತೇನೆ. ಜಗದೀಶ ,ಏನಾದರೂ ಮಾಡಲಿ ಹೇಗಾದರೂಯಿರಲಿ ಅವನು ನನ್ನ ಬಾಲ್ಯ ಸ್ನೇಹಿತ. ಅವನು ಸಾಲಕ್ಕಾಗಿ ಅವನ ಮನೆ–ಮಠ ಗಳನ್ನು ಮಾತ್ರ ತೆಗೆದುಕೊಳ್ಳಬೇಡ. ಅವನಿಗೊಬ್ಬ ಮಗನಿದ್ದಾನೆ. ನಾನವ ನನ್ನು ಕಣ್ಣಿಂದ ನೋಡದಿದ್ದರೂ, ಅವನು ಬಹಳ ಒಳ್ಳೆಯವನೆಂದು ಕೇಳಿ ದ್ದೇನೆ. ತಂದೆಯ ತಪ್ಪಿಗಾಗಿ ಮಗನನ್ನು ಮಾತ್ರ ನಿರಾಶ್ರಿತನನ್ನಾಗಿ ಮಾಡ ಬೇಡ ಮಗು. ಇದೇ ನನ್ನ ಕೊನೆಯ ಸಂದೇಶ."

ಉಕ್ಕಿ ಬಂದ ದುಃಖದಿಂದ ದನಿ ಭಾರವಾಗಿ ವಿಜಯ ಹೇಳಿದಳು— "ನಿನ್ನ ಸಂದೇಶವನ್ನು ನಾನೆಂದಿಗೂ ಮರೆಯುವುದಿಲ್ಲವಪ್ಪ. ಜಗದೀಶ ಬಾಬುಗಳಿರುವವರೆಗೂ ಅವರನ್ನು ನಿನ್ನಂತೆ ತಿಳಿಯುತ್ತೇನೆ. ಆದರೆ ಅವರ ಕಾಲ ಮುಗಿದ ಮೇಲೆ ಅವರ ಆಸ್ತಿಯನ್ನೆಲ್ಲ ಅವರ ಮಗನಿಗೇಕೆ ವ್ಯರ್ಥವಾಗಿ ಬಿಡಲಿ? ಅವರನ್ನು ನೀನೂ ಕಣ್ಣಾರೆ ಕಂಡಿಲ್ಲ. ನಾನೂ ನೋಡಿಲ್ಲ. ಅವರು ವಿದ್ಯಾವಂತರಾದರೆ, ತಂದೆಯ ಸಾಲವನ್ನು ಖಂಡಿತವಾಗಿ ತೀರಿಸು ತ್ತಾರೆ.

ವನಮಾಲಿ ಮಗಳ ಮುಖವನ್ನೊಮ್ಮೆ ನೋಡಿ ಹೇಳಿದ—" ಸಾಲ ವೇನು ಕಡಿಮೆ ಇದೆಯೇ ವಿಜಯಾ? ಅವನಿನ್ನೂ ಹುಡುಗ. ತೀರಿಸ ದಿದ್ದರೆ........?"

"ತೀರಿಸಲು ಶಕ್ತಿಯಿಲ್ಲದವನು ಕುಪುತ್ರನಪ್ಪ. ಅಂತಹವರಿಗೆ ಸಹಾಯ ಮಾಡುವುದು ಉಚಿತವಲ್ಲ."

ವನಮಾಲಿಗೆ ತನ್ನ ಸುಶಿಕ್ಷಿತ ಕನ್ಯೆಯ ಸ್ವಭಾವ ಚೆನ್ನಾಗಿ ಗೊತ್ತು. ಆದ್ದರಿಂದ ಅವನು ಮಾತನ್ನು ಹೆಚ್ಚಾಗಿ ಬೆಳಸದೆ ಒಂದು ನಿಟ್ಟುಸಿರು ಬಿಟ್ಟು ಹೇಳಿದ—" ಎಲ್ಲ ಕರ್ತವ್ಯದಲ್ಲೂ ದೇವರ ಕಡೆ ದೃಷ್ಟಿಯಿಟ್ಟು, ಮಾಡಬೇ

ಕಾದದ್ದನ್ನು ಮಾಡು ವಿಜಯ. ಎಲ್ಲ ವಿಚಾರಕ್ಕೂ ಹೀಗೆ ಮಾಡೆಂದು ನಾನು ನಿನ್ನನ್ನು ಬಂಧಿಸಿಹೋಗಲು ಇಷ್ಟವಿಲ್ಲ ಮಗು."

ಇಷ್ಟು ಹೇಳಿ ಒಂದು ಕ್ಷಣ ಸುಮ್ಮನಿದ್ದು ಅವನು ಮತ್ತೆ ಮುಂದು ವರಿಸಿದ—"ಈ ಜಗದೀಶ ನಿಜವಾದ ಮನುಷ್ಯನಾಗಿದ್ದಾಗ, ನೀನು ಹುಟ್ಟುವುದಕ್ಕೆ ಮೊದಲೇ ತನ್ನ ಮಗನಿಗೆ ನಿನ್ನನ್ನು ಕೊಡಬೇಕೆಂದು ಕೇಳಿದ್ದ. ನಾನೂ ಮಾತು ಕೊಟ್ಟಿದ್ದೆ ವಿಜಯ" ಎಂದು ಅವನು ಕುತೂಹಲ ದೃಷ್ಟಿ ಯಿಂದ ಅವಳ ಮುಖ ನೋಡಿದ.

ವಿಜಯ ಇನ್ನೂ ಮಗುವಾಗಿರುವಾಗಲೇ ವನಮಾಲಿಯ ಹೆಂಡತಿ ತೀರಿಕೊಂಡಿದ್ದಳು. ಆದ್ದರಿಂದ ಅವಳಿಗೆ ವನಮಾಲಿಯೇ ತಂದೆ ತಾಯಿ ಯಾಗಿದ್ದ. ವಿಜಯ ಅವನೊಂದಿಗೆ ಸಂಕೋಚವಿಲ್ಲದೆ ತಾಯಿಯೊಂದಿಗೆ ನಡೆದುಕೊಳ್ಳುವಷ್ಟೇ ಸಲಿಗೆಯಿಂದಿದ್ದಳು. ಅವಳು "ಅಪ್ಪ, ನೀನು ಬರಿಯ ಬಾಯಿಮಾತನ್ನು ಮಾತ್ರ ಹೇಳಿದ್ದಿ. ಮನಸ್ಸಿನಿಂದ ಒಪ್ಪಿರಲಿಲ್ಲ" ಎಂದಳು.

"ಅದೇಕೆ ವಿಜಯ?"

"ಮನಸಾರೆ ಒಪ್ಪಿದ್ದರೆ, ಒಂದು ಸಲವಾದರೂ ಅವರನ್ನು ಕಣ್ಣಿಂದ ನೋಡಬಯಸುತ್ತಿರಲಿಲ್ಲವೇ?"

"ಅವನು ತಾಯಿಯಂತೆ ದುರ್ಬಲನೆಂದೂ, ಅವನು ಹೆಚ್ಚು ದಿನ ಬದುಕಲಾರನೆಂದೂ ವೈದ್ಯರು ಅಭಿಪ್ರಾಯಪಡುತ್ತಾರೆಂದು ರಾಸಬಿಹಾರಿ ಹೇಳಿದ್ದರಿಂದ, ಅವನು ಹತ್ತಿರ ಬಂದಿದ್ದರೂ, ಅವನನ್ನು ಎದುರಿಗೆ ಕರೆಸಿ ನೋಡಲು ನನಗೆ ಇಷ್ಟಬರಲಿಲ್ಲ. ಆಗ ಅವನು ಕಲಿಕತ್ತದಲ್ಲೇ ಎಲ್ಲೋ ಇದ್ದು ಬಿ. ಎ. ಓದುತ್ತಿದ್ದ. ಆಮೇಲೆ ನನ್ನ ಆರೋಗ್ಯ ಚೆನ್ನಾಗಿರಲಿಲ್ಲ ವಾದ್ದರಿಂದ ಆ ವಿಚಾರವನ್ನು ಯೋಚಿಸಲಿಲ್ಲ. ಆದರೆ ನನ್ನದು ತಪ್ಪಾಯಿ ತೆಂದು ನನಗೆ ಈಗ ಅನಿಸುತ್ತದೆ. ನಿನಗೆ ಈಗ ನಿಜವಾಗಿ ಹೇಳುತ್ತಿದ್ದೇನೆ ವಿಜಯ. ಆ ಜಗದೀಶನಿಗೆ ನಿನ್ನ ಸಂಬಂಧವಾಗಿ ಮನಃಪೂರ್ವಕವಾಗಿಯೇ ಮಾತು ಕೊಟ್ಟಿದ್ದೆ." ಸ್ವಲ್ಪ ಹೊತ್ತು ಸುಮ್ಮನಿದ್ದು ಅವನು ಮತ್ತೆ ಹೇಳಿದ —"ಇಂದು ಜಗದೀಶನನ್ನು ಎಲ್ಲರೂ ಜೂಜುಗಾರ, ಕುಡುಕ, ಅಪ್ರಯೋ ಜಕ, ಅಯೋಗ್ಯನೆಂದು ತಿಳಿದಿದ್ದಾರೆ. ಆದರೆ ಹಿಂದೆ ಅವನೇ ನಮ್ಮೆಲ್ಲರಿ ಗಿಂತ ಉತ್ತಮನಾಗಿದ್ದ. ವಿದ್ಯಾ ಬುದ್ಧಿಯ ವಿಚಾರ ನಾನು ಹೇಳುತ್ತಿಲ್ಲ

ವಿಜಯ. ಅದು ಬಹಳ ಜನಗಳಿಗಿರುತ್ತೆ. ಆದರೆ ಅವನ ಹಾಗೆ ಹೃದಯ ದಿಂದ ಪ್ರೀತಿಸುವವರನ್ನು ನಾನು ಬೇರ್ಯಾರನ್ನೂ ನೋಡಲಿಲ್ಲ ವಿಜಯ. ಈ ಪ್ರೇಮವೇ ಅವನಿಗೆ ಮೃತ್ಯುವಾಯಿತು. ಅವನ ಅನೇಕ ದೋಷಗಳನ್ನು ನಾನು ಬಲ್ಲೆ. ಆದರೆ ಅವನ ಹೆಂಡತಿ ಹೋದಮೇಲೆ ಅವನು ಹುಚ್ಚಾದ ದ್ದನ್ನು ನೋಡಿ, ನನಗೆ ನನ್ನ ಹೆಂಡತಿಯ ನೆನಪಾಗಿ ಅವನ ವಿಷಯದಲ್ಲಿ ಅತ್ಯಂತ ಗೌರವ ಉಂಟಾಯಿತು." ಅವನ ಹೆಂಡತಿ ಲಕ್ಷ್ಮಿಯಂತಿದ್ದಳು. ಅವಳು ಸಾಯುವ ಕಾಲದಲ್ಲಿ ನರೇಂದ್ರನನ್ನು ಹತ್ತಿರ ಕರೆದು ಇಷ್ಟೇ ಹೇಳಿ ದಳು "ಮಗು ದೇವರಲ್ಲಿ ನಿನಗೆ ಯಾವಾಗಲೂ ಅಚಲ ವಿಶ್ವಾಸವಿರಲೆಂದು ಮಾತ್ರ ನಾನು ಆಶೀರ್ವಾದ ಮಾಡುತ್ತೇನೆ." ತಾಯಿಯ ಕೊನೆಯ ಆಶೀ ರ್ವಾದ ವ್ಯರ್ಥವಾಗುವುದಿಲ್ಲವೆಂದು ಕೇಳಿದ್ದೇನೆ. ನರೇಂದ್ರ ಇಷ್ಟು ಚಿಕ್ಕ ವಯಸ್ಸಿನಲ್ಲೇ ಅವನ ತಾಯಿಯಂತೆ ದೇವರಲ್ಲಿ ಅಚಲವಾದ ಶ್ರದ್ಧೆ ಇಟ್ಟಿ ದ್ದಾನೆ. ಇದರಲ್ಲಿ ಜಯಶೀಲನಾದಮೇಲೆ ಅವನಿಗೆ ಪ್ರಪಂಚದಲ್ಲಿ ಇನ್ನು ಉಳಿದಿರುವುದೇನು ಮಗು?"

"ಹಾಗಾದರೆ ಪ್ರಪಂಚದಲ್ಲಿ ಇದೇ ಎಲ್ಲಕ್ಕಿಂತಲೂ ಮಿಗಿಲಾದ ಪ್ರಾಪ್ತಿಯೇ ಅಪ್ಪ?"

ಮರಣೋನ್ಮುಖನಾದ ಆ ವೃದ್ಧನ ಕಣ್ಣುಗಳಲ್ಲಿ ನೀರೂರಿತು. ಅವನು ಎರಡು ಕೈಗಳಿಂದಲೂ ಮಗಳನ್ನು ಬಾಚಿ ಅಪ್ಪಿ ಹೇಳಿದ–"ಹೌದು ಮಗು. ಇದೇ ಎಲ್ಲಕ್ಕಿಂತ ಮಿಗಲಾದುದು. ಪ್ರಪಂಚದ ಒಳಗೆ, ಹೊರಗೆ........ ಬ್ರಹ್ಮಾಂಡದಲ್ಲೆಲ್ಲ ಇದಕ್ಕೆ ಸರಿಯಾದ ಪ್ರಾಪ್ತಿ ಬೇರೆ ಇಲ್ಲ ವಿಜಯ. ನಿನಗೆ ಈ ಪ್ರಾಪ್ತಿಯಾಗುತ್ತದೋ ಇಲ್ಲವೋ, ಅದನ್ನು ಸಾಧಿಸಿದವರ ಚರಣಗಳಲ್ಲಿ ನಿನ್ನನ್ನು ಅರ್ಪಿಸಿಕೊ....ಇದೇ ಸಾಯುವ ಸಮಯದಲ್ಲಿ ನನ್ನ ಕೊನೆಯ ಆಶೀರ್ವಾದ ವಿಜಯ."

ಅಂದು ವಿಜಯ ತಂದೆಯ ಎದೆಯ ಮೇಲೆ ಅಂಗತ್ತಲಾಗಿ ಮಲಗಿ ದ್ದಳು. ತಂದೆಯ ಹೃದಯಾಂತರಾಳದಿಂದ ಸುಮಧುರ ಮನೋಹರವಾದ ದೃಷ್ಟಿ ತನ್ನ ಅಂತರಂಗವನ್ನು ಪ್ರೇಮಪೂರ್ವಕವಾಗಿ ನೋಡುತ್ತಿದ್ದಂತೆ ಅವಳಿಗೆ ಭಾಸವಾಯಿತು. ಈ ಆಶ್ಚರ್ಯಕರವಾದ ಹೊಸ ಅನುಭವ ಒಂದು ಕ್ಷಣ ಅವಳನ್ನು ಮೋಹಮುಗ್ಧಳನ್ನಾಗಿ ಮಾಡಿತು. ವನಮಾಲಿ ಹೇಳಿದ—"ಹುಡುಗನ ಹೆಸರು ನರೇಂದ್ರ. ಅವನಿಗೆ ಡಾಕ್ಟರ್ ಪರೀಕ್ಷೆ

ಯಾಗಿದೆಯೆಂದೂ, ಆದರೆ ಅವನು ಡಾಕ್ಟರ ವೃತ್ತಿಯನ್ನು ಮಾಡುವುದಿಲ್ಲ ವೆಂದೂ ಅವನ ತಂದೆ ಹೇಳಿದ. ಅವನು ಈ ದೇಶದಲ್ಲಿದ್ದಿದ್ದರೆ, ಒಮ್ಮೆ ಅವನನ್ನು ಕರೆಸಿ ಕಣ್ಣು ತುಂಬ ಅವನನ್ನು ನೋಡುತ್ತಿದ್ದೆ."

"ಈಗ ಅವನೆಲ್ಲಿದ್ದಾರೆ? "

"ಬರ್ಮಾದಲ್ಲಿ ಅವರ ಮಾವನ ಹತ್ತಿರ ಇದ್ದಾನೆ. ಈಗ ಜಗದೀಶ ಹೇಳಿದ ಎಲ್ಲ ವಿಷಯಗಳನ್ನೂ ಬಿಡಿಸಿ ಹೇಳುವ ತ್ರಾಣ ನನ್ನಲ್ಲಿಲ್ಲ. ಆದರೂ ಅವನ ಕೆಲವು ಮಾತುಗಳಿಂದ, ನರೇಂದ್ರ ತನ್ನ ತಾಯಿಯ ಎಲ್ಲ ಸದ್ಗುಣ ಗಳನ್ನೂ ಪಡೆದಿದ್ದಾನೆಂದು ತೋರುತ್ತೆ. ಅವನು ಎಲ್ಲಿ ಹೇಗಿದ್ದರೂ. ದೇವರು ಅವನನ್ನು ಚೆನ್ನಾಗಿಟ್ಟಿರಲಿ."

ಸಂಜೆಯಾಯಿತು. ದೀಪ ಹಚ್ಚಲು ಬಂದಿದ್ದ ಆಳು ವಿಲಾಸಬಾಬು ಬಂದ ಸುದ್ದಿ ತಿಳಿಸಿ ಹೋದ. "ಹಾಗಾದರೆ ನೀನಿನ್ನು ಕೆಳಗೆ ಹೋಗು ವಿಜಯ, ನಾನು ಸ್ವಲ್ಪ ವಿಶ್ರಾಂತಿ ತೆಗೆದುಕೊಳ್ಳುತ್ತೇನೆ." ವನಮಾಲಿ ಹೇಳಿದ.

ತಂದೆಯ ತಲೆದಿಂಬನ್ನು ಸರಿಮಾಡಿ, ಶಾಲನ್ನು ಕಾಲಮೇಲೆ ಸರಿ ಯಾಗಿ ಹೊದಿಸಿ, ಬೆಳಕನ್ನು ಕಣ್ಣಿಗೆ ಮರೆಯಾಗುವಂತೆ ಮಾಡಿ, ವಿಜಯ ಕೆಳಗಡೆ ಹೊರಟಾಗ ತಂದೆಯ ಹೃದಯದಿಂದ ಒಂದು ಆಳವಾದ ನಿಟ್ಟು ಸಿರು ಹೊರಟಿತು. ವಿಲಾಸ ಬಂದ ಸುದ್ದಿ ಕೇಳಿ ಮಗಳ ಮುಖ ನಸು ಗೆಂಪೇರಿದ್ದರಿಂದ ತಂದೆಗೆ ಬಹಳ ವ್ಯಥೆಯಾಯಿತು.

ವಿಲಾಸಬಿಹಾರಿ ರಾಸಬಿಹಾರಿಯ ಮಗ. ಅವನು ಕಲಿಕತ್ತೆಯಲ್ಲಿ ಎಫ್. ಎ. ಓದುತ್ತಿದ್ದ. ಈಗ ಬಿ. ಎ. ಕ್ಲಾಸಿನಲ್ಲಿದ್ದ. ವನಮಾಲಿ ಸಮಾಜದಿಂದ ದೂರವಾದಮೇಲೆ ಹೆಚ್ಚಾಗಿ ಊರಿಗೆ ಹೋಗುತ್ತಿರಲಿಲ್ಲ. ತನ್ನ ವ್ಯಾಪಾರದ ಅಭಿವೃದ್ಧಿಯಿಂದ ಅವನು ತನ್ನ ಜಮೀನುದಾರಿಯನ್ನು ಬೆಳೆಸಿಕೊಂಡಿದ್ದರೂ ಅದರ ಭಾರವನ್ನೆಲ್ಲ ತನ್ನ ಬಾಲ್ಯ ಸ್ನೇಹಿತ ರಾಸಬಿಹಾ ರಿಗೆ ವಹಿಸಿದ್ದ. ಆ ಸಂಬಂಧದಲ್ಲೇ ವಿಲಾಸಬಿಹಾರಿ ಈ ಮನೆಗೆ ಹೆಚ್ಚಾಗಿ ಬಂದು ಹೋಗುತ್ತಿದ್ದ. ಅದು ಬರಬರುತ್ತಾ ಕಾರಣಾಂತರದಿಂದ ಹೆಚ್ಚಾ ಯಿತು.

೩

ವನಮಾಲಿಯು ತೀರಿಹೋಗಿ ಎರಡು ತಿಂಗಳಾದುವು. ಅವನ

ಕಲಿಕತ್ತೆಯ ಭಾರಿ ಬಂಗಲೆಯಲ್ಲಿ ಈಗ ವಿಜಯ ಒಂಟಿಯಾಗಿದ್ದಳು. ಅವಳ ಆಸ್ತಿಪಾಸ್ತಿಗಳನ್ನು ರಾಸಬಿಹಾರಿ ನೋಡಿಕೊಳ್ಳುತ್ತಿದ್ದುದರಿಂದ ಅವರೇ ಅವಳಿಗೆ ಪೋಷಕರಂತಾದರು. ಆದರೆ ಅವರು ಹಳ್ಳಿಯಲ್ಲೇ ಇರುತ್ತಿದ್ದುದರಿಂದ, ವಿಲಾಸಬಿಹಾರಿಗೆ ವಿಜಯಳ ಯೋಗಕ್ಷೇಮವೆಲ್ಲ ಸೇರಿತ್ತು. ಅವನೇ ಅವಳಿಗೆ ನಿಜವಾದ ಪೋಷಕನಾಗಿದ್ದ.

ಆ ಕಾಲದಲ್ಲಿ ಬ್ರಾಹ್ಮ–ಪರಿವಾರದಲ್ಲಿ 'ಸತ್ಯ' 'ಸುನೀತಿ' 'ಸುರುಚಿ' ಶಬ್ದಗಳಿಗೆ ಬಹಳ ಮೋಹವಿತ್ತು. ಏಕೆಂದರೆ ಹಿಂದೂ ಯುವಕರು ವಿಲಾಯಿತಿಗೆ ಓದಲು ಹೋಗಿ, ತಮ್ಮ ತಂದೆ–ತಾಯಂದಿರಿಗೆ, ದೇವರಿಗೆ, ತಮ್ಮ ಸಮಾಜಕ್ಕೆ ವಿರೋಧವಾಗಿ ಬ್ರಹ್ಮಸಮಾಜದ ರಿಜಿಸ್ಟರಿನಲ್ಲಿ ತಮ್ಮ ಹೆಸರನ್ನು ಸೇರ್ಪಡೆಮಾಡಿಸುತ್ತಿದ್ದರು. ಆಗ ಅವರಿಗೆ ಈ ಶಬ್ದಗಳೇ ಊರುಗೋಲಿನಂತೆ ಸಹಾಯಕವಾಗುತ್ತಿತ್ತು. ತಮಗೆ ಸತ್ಯವೆಂದು ತಿಳಿದದ್ದನ್ನು ತಾವು ಮಾಡುತ್ತೇವೆಂದು ಅವರು ಹೇಳುತ್ತಿದ್ದರು. ತಂದೆ–ತಾಯಂದಿರು ಇದಕ್ಕಾಗಿ ಕಣ್ಣೀರಿಡುತ್ತಿದ್ದರೂ ಅದಕ್ಕಾಗಿ ಚಿಂತಿಸಬೇಕಾದ ಅಗತ್ಯವಿಲ್ಲ; ಆ ದೌರ್ಬಲ್ಯಗಳನ್ನೆಲ್ಲ ಪ್ರಯತ್ನದಿಂದ ನಿರ್ಮೂಲಮಾಡದ ಹೊರತು ತಾವು 'ಬೆಳಕ'ನ್ನು ಕಾಣುವುದು ಸಾಧ್ಯವಿಲ್ಲವೆಂದು ಅವರು ಹೇಳುತ್ತಿದ್ದರು. ವಿಜಯಳು ಅರಗಿಳಿಯಂತೆ ಈ ಪಾಠಗಳನ್ನೆಲ್ಲ ಕಲಿತಿದ್ದಳು.

ಇಂದು ವಿಲಾಸಬಾಬು ಜಗದೀಶ ಸತ್ತ ಸುದ್ದಿ ಹೇಳಲು ಬಂದಿದ್ದ. ಜಗದೀಶ ವಿಜಯಳ ತಂದೆಯ ಆಪ್ತ ಮಿತ್ರನಾದರೂ, ಅವನು, ಕುಡಿದು ಮಹಡಿಯಿಂದ ಕೆಳಗೆ ಬಿದ್ದು ಸತ್ತನೆಂದು ಕೇಳಿ ವಿಜಯಳಿಗೆ ತಮ್ಮ ಸಮಾಜದ 'ಸುನೀತಿ'ಯ ನೆನಪಾಗಿ, ತಿರಸ್ಕಾರದಿಂದ ತುಟಿ ಕಚ್ಚಿದಳು. ವಿಲಾಸ ಹೇಳಿದ—"ಜಗದೀಶಮುಖರ್ಜಿ ನಮ್ಮ ತಂದೆಗೂ ಬಾಲ್ಯಸ್ನೇಹಿತ. ಆದರೆ ಅವರು ಅವನ ಮುಖವನ್ನೇ ನೋಡುತ್ತಿರಲಿಲ್ಲ. ಅವನು ಎರಡು ಬಾರಿ ತಂದೆಯವರಲ್ಲಿ ಸಾಲ ಕೇಳಲು ಬಂದ. ಆದರೆ ಎರಡು ಸಲವೂ ಅವರು ಅವನನ್ನು ಬಾಗಿಲಿನಿಂದ ಹೊರಗೆ ತಳ್ಳಿಸಿದರು. ಈ ಅನಾಚಾರಿಗಳಿಗೆ ಆಶ್ರಯಕೊಟ್ಟರೆ ಮಂಗಳಮಯನಾದ ಭಗವಂತನ ಪಾದಗಳಲ್ಲಿ ಅಪರಾಧ ಮಾಡಿದಂತೆ ಎಂದು ಅವರು ಯಾವಾಗಲೂ ಹೇಳುತ್ತಿರುತ್ತಾರೆ."

"ಸರಿಯಾಗಿಯೇ ಹೇಳುತ್ತಾರೆ" ವಿಜಯ ತನ್ನ ಸಮ್ಮತಿಯನ್ನಿತ್ತಳು. ಇದರಿಂದ ಪ್ರೋತ್ಸಾಹ ದೊರೆತಂತಾಗಿ ವಿಲಾಸ ಮುಂದುವರಿಸಿದ–"ಸ್ನೇಹಿತ

ನಾಗಲೀ, ಯಾರಾದರಾಗಲೀ ದೌರ್ಬಲ್ಯದಿಂದ ಬ್ರಹ್ಮಸಮಾಜದ ಆದರ್ಶ ವನ್ನು ಕೀಳು ಮಾಡುವುದು ಸರಿಯಲ್ಲ. ನ್ಯಾಯವಾಗಿ ಜಗದೀಶನ ಆಸ್ತಿ ಯೆಲ್ಲ ಇನ್ನು ನಮ್ಮದೇ. ಅವನ ಮಗ ಸಾಲ ತೀರಿಸಿದರೆ ಸರಿ, ಇಲ್ಲದಿದ್ದರೆ ಈಗಲೇ ನಾವು ಅವನ ಆಸ್ತಿಯನ್ನೆಲ್ಲ ಸ್ವಾಧೀನಪಡಿಸಿಕೊಳ್ಳಬೇಕು. ವಾಸ್ತವವಾಗಿಯೂ ಬಿಡುವುದಕ್ಕೆ ನಮಗೆ ಏನೂ ಅಧಿಕಾರವಿಲ್ಲ. ಏಕೆಂದರೆ ನಾವು ಆ ದುಡ್ಡಿನಿಂದ ಬಹಳ ಸತ್ಕಾರ್ಯ ಮಾಡಬಹುದು. ಸಮಾಜಕ್ಕೆ ಸೇರಿದ ಯಾರಾದರೂ ಹುಡುಗರನ್ನು ವಿಲಾಯತಿಗೆ ಕಳುಹಿಸಬಹುದು. ಧರ್ಮ ಪ್ರಚಾರ ಮಾಡಬಹುದು, ಇನ್ನೂ ಅನೇಕ ಸತ್ಕಾರ್ಯಗಳಿಗಾಗಿ ಉಪಯೋಗಿಸಬಹದು. ಇದನ್ನು ಏಕೆ ಮಾಡಬಾರದು? ಹೇಳಿ. ಅಲ್ಲದೆ ಜಗದೀಶನಾಗಲೀ ಅವನ ಮಗನಾಗಲೀ, ನಮ್ಮ ಸಮಾಜಕ್ಕೆ ಸೇರಿದವರಲ್ಲ. ಆದ್ದರಿಂದ ಅವರ ಮೇಲೆ ಯಾವ ರೀತಿಯಾಗಿಯೂ ದಯೆ ತೋರಬೇಕಾದ ಅಗತ್ಯವಿಲ್ಲ. ನಿಮ್ಮ ಒಪ್ಪಿಗೆಯಾದರೆ ಸಾಕು. ತಂದೆಯವರು ಎಲ್ಲ ಸರಿ ಯಾಗಿ ವ್ಯವಸ್ಥೆ ಮಾಡುತ್ತಾರೆ. ಅದನ್ನು ಹೇಳುವುದಕ್ಕಾಗಿಯೇ ನಾನೀಗ ಬಂದದ್ದು."

ತೀರಿಹೋದ ತಂದೆಯ ಕೊನೆಯ ಮಾತುಗಳನ್ನು ನೆನೆಸಿಕೊಂಡು ವಿಜಯ ಯೋಚಿಸುತ್ತ ಕುಳಿತಳು. ಕೂಡಲೆ ಅವಳಿಗೆ ಏನು ಹೇಳುವುದಕ್ಕೂ ತೋರಲಿಲ್ಲ. ಅವಳ ಈ ಸಂಕೋಚದ ಮನೋಭಾವನೆಯನ್ನು ನೋಡಿ, ವಿಲಾಸ ತಾನು ಹೇಳಿದ್ದನ್ನು ಮತ್ತೂ ಜೋರಿನಿಂದ ಒತ್ತಿ ಹೇಳಿದ-"ಉಹುಂ. ನೀವು ಹಿಂದೆ ಮುಂದೆ ನೋಡುವುದಕ್ಕೆ ನಾನು ಅವಕಾಶ ಕೊಡುವುದಿಲ್ಲ. ಮನೋದೌರ್ಬಲ್ಯ ಮಹಾ ಪಾಪ. ಅವನ ಮನೆಯನ್ನು ನಿಮ್ಮ ಹೆಸರಿಗೆ ಬರೆದು ಹಿಂದೆಂದೂ ನಡೆಯದಂತೆ ಮಾಡಬೇಕೆಂದು ನಾನು ಮನಸ್ಸಿನಲ್ಲಿ ನಿಶ್ಚಯಿಸಿದ್ದೇನೆ. ಹಳ್ಳಿಯಲ್ಲಿ ಬ್ರಹ್ಮ ಮಂದಿರದ ಪ್ರತಿಷ್ಠೆಮಾಡಿ, ಹಳ್ಳಿಯ ಮೂರ್ಖರಿಗೆ ಧರ್ಮದ ಶಿಕ್ಷಣವನ್ನು ಕೊಡುತ್ತೇನೆ........ನೀವೊಮ್ಮೆ ಆಲೋ ಚಿಸಿ ನೋಡಿ. ಆ ಹಳ್ಳಿಗರ ಮೂಢತನದ ಬೇಗೆಯನ್ನು ತಾಳಲಾರದೆ ನಿಮ್ಮ ತಂದೆಯವರು ಊರು ಬಿಟ್ಟು ಬಂದರು. ಅವರ ಮಗಳೆನಿಸಿದ ಮೇಲೆ ಅದರ ಶುದ್ಧವಾದ ಸೇಡನ್ನು ಈ ರೀತಿ ಉಪಕಾರದಿಂದ ತೀರಿಸಿಕೊಳ್ಳುವುದು ನಿಮಗೆ ಉಚಿತವಲ್ಲವೇ? ನೋಡಿ, ಯೋಚಿಸಿ ಉತ್ತರ ಹೇಳಿ."

ವಿಜಯ ವಿಚಲಿತಳಾದಳು. ವಿಲಾಸ ಸ್ವಲ್ಪ ಬಿಗುವಿನಿಂದಲೇ

ಹೇಳಿದ—"ದೇಶದಲ್ಲೆಲ್ಲ ಎಷ್ಟು ಹೆಸರುವಾಸಿಯಾಗುತ್ತೆ, ಎಷ್ಟು ವೈಭವವಾಗುತ್ತೆಂಬುದನ್ನು ಯೋಚಿಸಿ. ಹಿಂದುಗಳು ಇದನ್ನು ಒಪ್ಪಲೇ ಬೇಕು. ಬ್ರಹ್ಮಸಮಾಜದಲ್ಲಿ ಮನುಷ್ಯರಿದ್ದಾರೆ, ಹೃದಯವಿದೆ, ಸ್ವಾರ್ಥತ್ಯಾಗವಿದೆಯೆಂಬುದನ್ನು ಒಪ್ಪಿಸುವ ಭಾರ ನನ್ನಮೇಲಿರಲಿ. ನಿಮ್ಮ ತಂದೆಯನ್ನು ದೇಶದಿಂದ ಹೊರಗೆ ಕಳುಹಿಸಿದವರ ಕಲ್ಯಾಣಕ್ಕಾಗಿ ನೀವೇ ಮುಂದೆ ಬಂದಿರುವುದಕ್ಕಿಂತ ಸ್ವಾರ್ಥತ್ಯಾಗ ಬೇರೆ ಏನಿದೆ? ಇದರಿಂದ ದೇಶದಲ್ಲೆಲ್ಲ ಎಂತಹ ನೈತಿಕ ಪರಿಣಾಮವಾಗುತ್ತೆ ನೀವೇ ಹೇಳಿ" ಎಂದು ವಿಹಾರಿ ಮುಂದಿದ್ದ ಮೇಜನ್ನು ಜೋರಾಗಿ ತಟ್ಟಿದ. ಇದನ್ನು ಕೇಳುತ್ತಾ ವಿಜಯಳು ಮುಗ್ಧಳಾದಳು. ಇಂತಹ ಮಹತ್ಕೀರ್ತಿಯ ಆಸೆಯನ್ನು ಗೆಲ್ಲಲು ಹದಿನೆಂಟು ವರುಷದ ವಿಜಯಳಿಗೆ ಅಸಾಧ್ಯವಾಯಿತು. ಅವಳು ಪೂರಾ ಒಪ್ಪಿಗೆಯಿತ್ತು ಹೇಳಿದಳು—"ಅವರ ಮಗನ ಹೆಸರು ನರೇಂದ್ರನಂತೆ. ಅವನು ಎಲ್ಲಿದ್ದಾನೆಂಬುದು ಗೊತ್ತಿದೆಯೇ?"

"ಗೊತ್ತಿದೆ. ಅವನ ತಂದೆ ಹೋದಮೇಲೆ ಅಲ್ಲಿಗೆ ಬಂದು ಅವನ ಶ್ರಾದ್ಧಮಾಡಿ, ಈಗ ಅಲ್ಲೇ ಇದ್ದಾನೆ."

"ನಿಮ್ಮೊಂದಿಗೆ ಮಾತುಕತೆಯಾಡುತ್ತಾನೆಂದು ತೋರುತ್ತೆ."

"ಮಾತುಕತೆಯೇ? ಛೆ! ನೀವು ನನ್ನನ್ನೇನೆಂದು ತಿಳಿದಿರಿ" ಎಂದು ಅವನು ವಿಜಯಳನ್ನು ಅಪ್ರತಿಭಳನ್ನಾಗಿ ಮಾಡಿ ಹೇಳಿದ—"ಜಗದೀಶನ ಮಗನೊಂದಿಗೆ ಮಾತನಾಡುವ ಅಗತ್ಯವೇ ಇಲ್ಲವೆಂದು ನನಗನಿಸುತ್ತದೆ. ಆವತ್ತೆಂದೋ ರಸ್ತೆಯಲ್ಲಿ ಹುಚ್ಚನಂತಿದ್ದ ಒಬ್ಬ ಹೊಸಬನನ್ನು ನೋಡಿದೆ. ಅವನು ನರೇಂದ್ರಮುಖರ್ಜಿಯೆಂದು ಯಾರೋ ಹೇಳಿದರು."

ವಿಜಯ ಕುತೂಹಲದಿಂದ ಕೇಳಿದಳು—"ಹುಚ್ಚನಂತೆಯೇ? ಅವರು ಡಾಕ್ಟರಂತೆ ಹೌದೇ?"

ವಿಲಾಸ ತಿರಸ್ಕಾರದಿಂದ ಮೈಯಲ್ಲಾಡಿಸಿ ಹೇಳಿದ—"ಹುಚ್ಚನೇ.... ಡಾಕ್ಟರಂತೆ? ನನಗೆ ನಂಬಿಕೆಯಿಲ್ಲ. ತಲೆಯಮೇಲೆ ಉದ್ದನೆಯ ಕೂದಲು ನೋಡಿದರೆ ರೋಗಿಯಂತೆ ಕಾಣುತ್ತಾನೆ. ಮೈ ಎಲಬನ್ನು ದೂರದಿಂದಲೇ ಎಣಿಸಬಹುದು....ಇದೇ ರೂಪ! ಕಡ್ಡಿಯಲ್ಲಿ ಮಾಡಿದ ಸಿಪಾಯಿ ಇದ್ದಂತೆ! ಥೂ........"

ತನ್ನ ರೂಪಕ್ಕೆ ಹೆಮ್ಮೆಪಡಲು ವಿಲಾಸನಿಗೆ ಸರಿಯಾದ ಅವಕಾಶ

ಸಿಕ್ಕಹಾಗಾಯಿತು. ಏಕೆಂದರೆ ಅವನು ದಷ್ಟಪುಷ್ಟನಾಗಿದ್ದ. ಅವನಿನ್ನೂ ಏನೋ ಹೇಳಬೇಕೆಂದಿದ್ದ. ಆದರೆ ವಿಜಯ ಅಷ್ಟರಲ್ಲೇ ಅವನನ್ನು ತಡೆದು ಹೇಳಿದಳು—"ವಿಲಾಸಬಾಬು, ಜಗದೀಶಬಾಬುಗಳ ಮನೆಯನ್ನು ನಾವು ಸ್ವಾಧೀನಪಡಿಸಿಕೊಂಡರೆ ಹಳ್ಳಿಯಲ್ಲೆಲ್ಲ ಅಪವಾದ ಬರುವುದಿಲ್ಲವೇ ?"

"ಖಂಡಿತವಾಗಿಯೂ ಇಲ್ಲ. ಆ ಕುಡುಕನ ವಿಚಾರದಲ್ಲಿ ಸಹಾನುಭೂತಿಯನ್ನು ತೋರಿಸುವ ಒಬ್ಬ ವ್ಯಕ್ತಿಯೂ ಆ ಸುತ್ತಮುತ್ತಲೆಲ್ಲೂ ಇಲ್ಲ. ಅವನಿಗಾಗಿ ಮಿಡುಕುವವರು ಪರಗಣ ಜಿಲ್ಲೆಯಲ್ಲೇ ಯಾರೂ ಇಲ್ಲ" ಎಂದು ನಕ್ಕು ಮತ್ತೆ ಹೇಳಿದ—"ಹಾಗಿಲ್ಲದಿದ್ದರೂ, ನಾನಿರುವವರೆಗೂ ನೀವು ಆ ಆಲೋಚನೆಯನ್ನೇ ಮಾಡಬೇಡಿ. ಸ್ವಲ್ಪದಿನಗಳ ಮಟ್ಟಿಗಾದರೂ ನೀವು ನಿಮ್ಮೂರಿಗೆ ಬರುವುದು ನಿಮ್ಮ ಕರ್ತವ್ಯ."

"ಅದೇಕೆ? ನಾನಾವಾಗಲೂ ಅಲ್ಲಿಗೆ ಹೋಗಿಲ್ಲವಲ್ಲ." ವಿಜಯ ಆಶ್ಚರ್ಯದಿಂದ ಕೇಳಿದಳು.

"ಅದಕ್ಕೇ ನೀವೊಮ್ಮೆ ಬರಬೇಕೆಂದು ನಾನು ಹೇಳಿದ್ದು. ಪ್ರಜೆಗಳು ಒಮ್ಮೆಯಾದರೂ ತಮ್ಮ ಮಹಾರಾಣಿಯನ್ನು ನೋಡಲಿ. ಅವರಿಗೆ ಆ ಭಾಗ್ಯವಿಲ್ಲವೆಂದು ಮಾಡುವುದು ಮಹಾಪಾಪವೆಂದು ನನಗನಿಸುತ್ತದೆ."

ನಾಚಿಕೆಯಿಂದ ವಿಜಯಳ ಮುಖ ನಸುಗೆಂಪಾಯಿತು. ಅವಳು ಮುಖ ತಗ್ಗಿಸಿ ಏನೋ ಹೇಳಬೇಕೆಂದಿರುವಷ್ಟರಲ್ಲಿ ವಿಲಾಸ ಮಧ್ಯದಲ್ಲಿ ಬಾಯಿ ಹಾಕಿದ—"ಇದರಲ್ಲಿ ಹಿಂದೆ ಮುಂದೆ ನೋಡಬೇಕಾದದ್ದೇನೂ ಇಲ್ಲ. ನೀವಲ್ಲಿ ಎಷ್ಟು ಕೆಲಸಮಾಡಬೇಕಾಗಿದೆಯೆಂಬುದನ್ನೊಮ್ಮೆ ಆಲೋಚಿಸಿ ನೋಡಿ. ನಿಮ್ಮ ತಂದೆ ಬದುಕಿರುವವರೆಗೂ ಕೆಲವು ಹುಚ್ಚು ನಾಯಿಗಳಿಗೆ ಹೆದರಿ ಅಲ್ಲಿಗೆ ಹೋಗದಿದ್ದುದು ಸರಿಯಲ್ಲ. ಇದನ್ನು ನಿಮ್ಮ ಎದುರಿಗೆ ಹೇಳುತ್ತೇನೆ. ನಮ್ಮ ಬ್ರಹ್ಮಸಮಾಜದ ಆದರ್ಶ ಇದೆಯೋ? ಇದು ಯಾವ ಸಮಾಜದ ಆದರ್ಶವೂ ಅಲ್ಲ."

"ಆದರೆ ಅಲ್ಲಿಯ ಮನೆ, ಇರುವುದಕ್ಕೆ ಅನುಕೂಲವಿಲ್ಲವೆಂದು ತಂದೆಯವರು ಹೇಳುತ್ತಿದ್ದರಲ್ಲ" ವಿಜಯ ಸ್ವಲ್ಪಹೊತ್ತು ಸುಮ್ಮನಿದ್ದು ಕೇಳಿದಳು.

"ನೀವು ಅಪ್ಪಣೆ ಮಾಡಿ, ಅಲ್ಲಿಗೆ ಬರುತ್ತೇನೆಂದು ಹೇಳಿ. ಹತ್ತು ದಿನಗಳಲ್ಲೇ ಅದನ್ನು ಸರಿಪಡಿಸುತ್ತೇನೆ. ನನ್ನಲ್ಲಿ ಭರವಸೆ ಇಡಿ. ನಿಮ್ಮ

ಮರ್ಯಾದೆಗೆ ಸಂಪೂರ್ಣವಾಗಿ ಸಲ್ಲುವ ವ್ಯವಸ್ಥೆಮಾಡುತ್ತೇನೆ. ನಿಮ್ಮನ್ನು ಮುಂದಿಟ್ಟುಕೊಂಡು ನಾನು ಯಾವ ಕೆಲಸಮಾಡಿದರೂ ಅದಕ್ಕೆ ಮಿತಿಯೇ ಇರುವುದಿಲ್ಲವೆಂಬುದು ಬಹಳ ದಿನಗಳಿಂದಲೂ ನನ್ನ ಅನುಭವಕ್ಕೆ ಬಂದಿದೆ."

ವಿಜಯಳನ್ನು ಒಪ್ಪಿಸಿ ವಿಲಾಸ ಹೊರಟುಹೋದ. ವಿಜಯ ಕುಳಿತಲ್ಲಿಯೇ ಸುಮ್ಮನೆ ಕುಳಿತು ಯೋಚಿಸತೊಡಗಿದಳು. ತನ್ನ ಜನ್ಮಭೂಮಿಯನ್ನು ಒಂದುಸಲವಾದರೂ ಕಣ್ಣಿಂದ ನೋಡಿಲ್ಲ........ಆದರೂ ತನ್ನ ತಂದೆಯ ಬಾಯಿಂದ ಅವಳು ಅದರ ವರ್ಣನೆಯನ್ನು ಎಷ್ಟೋ ಬಾರಿ ಕೇಳಿದ್ದಳು. ತನ್ನೂರಿನ ವಿಷಯ ಮಾತಾಡಲು ಅವಳಿಗೆ ಎಷ್ಟೋ ಉತ್ಸಾಹ. ಅವಳ ಆನಂದಕ್ಕೆ ಮಿತಿಯೇ ಇಲ್ಲ. ಆದರೆ ಆಗ ಅವಳ ಮನಸ್ಸನ್ನು ಯಾವುದೂ ಆಕರ್ಷಿಸಿರಲಿಲ್ಲ. ಅದನ್ನೆಲ್ಲ ಕೇಳುತ್ತಿದ್ದಂತೆಯೇ ಅವಳೆಲ್ಲ ಮರೆತುಬಿಡುತ್ತಿದ್ದಳು. ಆದರೆ ಇಂದು ಅಕಸ್ಮಾತ್ ಆ ವಿಷಯಗಳೆಲ್ಲ ಮತ್ತೆ ನೆನಪಿಗೆ ಬಂದು ಅವಳ ಕಣ್ಣು ಮುಂದೆ ಕಟ್ಟಿದಂತಾಯಿತು. ಅವಳ ಊರಿನ ಆ ಮನೆ ಕಲಿಕತ್ತೆಯ ಸೌಧದಷ್ಟು ದೊಡ್ಡದಲ್ಲದಿದ್ದರೂ, ಅದೇ ತನ್ನ ಪೂರ್ವೀಕರ ಮನೆಯೆಂಬುದು ಅವಳಿಗೆ ನೆನಪಾಯಿತು. ಅಲ್ಲಿ ತನ್ನ ತಾತ ಮುತ್ತಾತಂದಿರೆಷ್ಟೋ ಜನ ತಮ್ಮ ಕಷ್ಟಸುಖಗಳನ್ನನುಭವಿಸಿದ್ದರು. ತಾನೂ ಅಲ್ಲೇ ಬಾಳನ್ನು ಕಳೆಯಬಾರದೇಕೆಂದು ಅವಳಿಗೆ ಅನಿಸಿತು.

ಆ ಓಣಿಯ ಎದುರಿಗೆ ಹಾಜರಾರವರ ಮಹಡಿಯ ಹಿಂದೆ ಸೂರ್ಯ ಮರೆಯಾದ. ಈ ವಿಷಯದಲ್ಲಿ ತಂದೆಯೊಂದಿಗೆ ಎಷ್ಟೋ ಮಾತುಕತೆ ನಡೆದಿತ್ತು. ಅವಳ ತಂದೆ ಆರಾಮುಕುರ್ಚಿಯಮೇಲೆ ಕುಳಿತು ಎಷ್ಟೋ ಬಾರಿ ನಿಟ್ಟುಸಿರುಬಿಟ್ಟು ಹೀಗೆ ಹೇಳುತ್ತಿದ್ದುದರ ನೆನಪಾಯಿತು—"ವಿಜಯ ನಾನು ನನ್ನ ಊರಿನ ಮನೆಯಲ್ಲಿ ಇಂತಹ ದುಃಖವನ್ನೆಂದಿಗೂ ಅನುಭವಿಸಲಿಲ್ಲ. ಅಲ್ಲಿ ಹೀಗೆ ಸೂರ್ಯಾಸ್ತ ಯಾವ ಕಟ್ಟಡದ ಮರೆಯಲ್ಲೂ ಆಗುತ್ತಿರಲಿಲ್ಲ, ನೀನರಿಯೆ ಮಗು. ನಮ್ಮ ಮನೆ ಹೂತೋಟದ ಮಗ್ಗುಲಲ್ಲೇ ಪುಟ್ಟ ನದಿಯೊಂದು ಆ ಸೂರ್ಯನ ಪ್ರಕಾಶದ ಬಂಗಾರದ ಕೋಡಿಯಂತೆ ಹರಿಯುತ್ತಿತ್ತು. ಅದರ ಆಚೆ ಮೈದಾನ, ವಿಶಾಲವಾದ ಬಯಲು, ಸೂರ್ಯ ಎಷ್ಟು ದೂರ ಹೋದರೂ ಕಣ್ಮರೆಯಾಗುತ್ತಿರಲಿಲ್ಲ, ಅದಿನ್ನೂ ಕಣ್ಣಿಗೆ ಕಟ್ಟಿದಂತಿದೆ. ಇಲ್ಲಿ ಹಗಲಿನ ಕೆಲಸ ಮುಗಿಸಿಕೊಂಡು ಮನೆಗಳ ಕಡೆ ಮನುಷ್ಯರ ಪ್ರವಾಹ ಹರಿದು ಹೋಗುತ್ತಿದ್ದಂತೆ ನಿನಗೆ ಕಾಣುತ್ತದೆ. ಇವರಿಗೆ

ಈ ಸಂಕುಚಿತ ಜಾಗ ಬಿಟ್ಟು ಬೇರೆ ಯಾವುದೂ ಇಲ್ಲ. ಆದರೆ ಅಲ್ಲಿಯ ನೋಟವೇ ಬೇರೆ." ಹೀಗೆ ಹೇಳುತ್ತಿದ್ದಂತೆ ದೀರ್ಘ ನಿಶ್ವಾಸವನ್ನು ಬಿಟ್ಟು ಸುಮ್ಮನಾಗುತ್ತಿದ್ದರು. ಹಿಂದೆ ಎಂದೋ ಬಿಟ್ಟುಬಂದ ಹಳ್ಳಿಗಾಗಿ ಇಂದು ಇಂತಹ ಐಶ್ವರ್ಯದಲ್ಲೂ ತನ್ನ ತಂದೆ ಇಂಪಾಗಿ ಹಾತೊರೆಯುತ್ತಿದ್ದರೆಂಬುದು ಆಗಾಗ್ಗೆ ಅವಳ ಮನಸ್ಸಿಗೆ ಬರುತ್ತಿತ್ತು. ಆದರೆ ಅದಕ್ಕೆ ಕಾರಣವೇನೆಂದು ಅವಳು ಎಂದೂ ಯೋಚಿಸಿರಲಿಲ್ಲ. ಇಂದು ವಿಲಾಸ ಆ ಕಡೆ ತನ್ನ ಗಮನವನ್ನು ಸೆಳೆದುಹೋದಮೇಲೆ ಅವಳಿಗೆ ತಂದೆಯ ಮಾತುಗಳೆಲ್ಲ ನೆನಪಾಯಿತು. ಅವಳಲ್ಲಡಗಿದ್ದ ಮೂಕವೇದನೆಯ ಕಾರಣ ಅಕಸ್ಮಾತ್ ಬೆಳಕಿಗೆ ಬಂದಂತಾಯಿತು. ಕಲಿಕತ್ತೆಯ ಈ ದೊಡ್ಡ ಬಂಗಲೆಯಲ್ಲೂ ಅವನು ಹೇಗೆ ಏಕಾಕಿಯಾಗಿ ಜೀವನ ಕಳೆದನೆಂಬುದನ್ನು ನೆನೆಸಿಕೊಂಡು ಅವಳು ಭಯದಿಂದ ನಡುಗಿದಳು. ಅಲ್ಲದೆ ಎಂದೂ ಕಣ್ಣಿಂದ ನೋಡದೆ ಇದ್ದ ಅವಳ ಜನ್ಮಭೂಮಿ ಇಂದು ಅವಳ ಮನಸ್ಸನ್ನು ಬಹಳ ಸೆಳೆಯಿತು.

೪

ಬಹಳ ದಿನಗಳಿಂದ ಪಾಳುಬಿದ್ದಿದ್ದ ಜಮೀನುದಾರರ ಮನೆ ವಿಲಾಸನ ನೇತೃತ್ವದಲ್ಲಿ ಸುಸಜ್ಜಿತವಾಯಿತು. ಹಳ್ಳಿಗರು ಹಿಂದೆಂದೂ ನೋಡದಿದ್ದ ಸಾಮಾನುಗಳು ನಿತ್ಯವೂ ಕಲಿಕತ್ತೆಯಿಂದ ಗಾಡಿಯಲ್ಲಿ ಬರತೊಡಗಿದವು. ಜಮೀನುದಾರರ ಏಕಮಾತ್ರ ಪುತ್ರಿ ತನ್ನ ಹಳ್ಳಿಗೆ ಬರುತ್ತಾಳೆಂಬ ಸುದ್ದಿ ಕೃಷ್ಣಾಪುರದಲ್ಲಿ ಮಾತ್ರವಲ್ಲದೆ ರಾಧಾಪುರ, ವ್ರಜಪುರ, ದಿಘಡಾ ಮೊದಲಾದ ಹಳ್ಳಿಗಳಲ್ಲೂ ಹರಡಿತು. ಹತ್ತಿರದಲ್ಲೇ ಜಮೀನುದಾರರಿರುವುದು ಜನಗಳಿಗೆ ಸ್ವಲ್ಪ ತೊಂದರೆ. ಅಲ್ಲದೆ ಜಮೀನುದಾರರಿಲ್ಲದೆ ಇದ್ದುದೇ ಆ ಪ್ರಜೆಗಳಿಗೆ ಅಭ್ಯಾಸವಾಗಿಹೋಗಿತ್ತು. ಆದ್ದರಿಂದ ಅವರು ಬರುವ ವರ್ತಮಾನ ಪ್ರಜೆಗಳಿಗೆ ಅಷ್ಟೇನೂ ಸಂತೋಷಕರವಾಗಿರಲಿಲ್ಲ. ಮ್ಯಾನೇಜರಾದ ರಾಸಬಿಹಾರಿಯ ಕಠೋರಶಾಸನದಿಂದಲೇ ಪ್ರಜೆಗಳು ಬೆಂಡಾಗಿದ್ದರು. ಇನ್ನು ಜಮೀನುದಾರರ ಮಗಳು ಊರಿಗೆ ಬಂದು ನೆಲಸಿದ ಮೇಲೆ ಇನ್ನೇನೇನು ಅನರ್ಥಗಳಾಗುತ್ತವೆಯೋ ಎಂದು ಜನರು ಪೇಟೆ, ಮೈದಾನ, ನದಿ ದಡ....ಹೀಗೆ ಎಲ್ಲೆಡೆಗಳಲ್ಲೂ ಚರ್ಚಿಸತೊಡಗಿದರು. ಇದು ಎಲ್ಲರಿಗೂ ಆಲೋಚನೆಗಿಟ್ಟುಕೊಂಡಿತು. ವನಮಾಲಿಯ ಕಾಲದಲ್ಲಿ ಒಂದು ಅನುಕೂಲವಿತ್ತು. ಆಗ ಕಲಿಕತ್ತೆಗೆ ಅವನನ್ನು ನೋಡಲು ಹೋದ ಯಾವ

ಪ್ರಜೆಯೂ ನಿಷ್ಫಲನಾಗಿ ಹಿಂದಿರುಗುತ್ತಿರಲಿಲ್ಲ. ಈಗ ಇರುವ ಜಮೀನು ದಾರರ ಮಗಳು ಚಿಕ್ಕವಳು. ಇನ್ನೂ ಯೌವನ, ರಾಸಬಿಹಾರಿಯ ಮಗನೊಂದಿಗೆ ಲಗ್ನವಾಗುತ್ತೆಂಬ ಸುದ್ದಿ ಎಲ್ಲಕಡೆಗೂ ಹರಡಿದೆ. ಅವಳು ನವನಾಗರೀಕಳು, ಮ್ಲೇಚ್ಛಳು. ಇನ್ನು ಸ್ವಲ್ಪ ದಿನಗಳಲ್ಲೇ ನಾಸ್ತಿಕ ರಾಸಬಿಹಾರಿ ಮಾಡ ಬಹುದಾದ ಕಠೋರ ನಿಯಮಗಳನ್ನೆಲ್ಲಾ ಊಹಿಸಿ ಎಲ್ಲರೂ ಬಹಳ ಪೇಚಾ ಟಕ್ಕೆ ಸಿಕ್ಕಿದರು. ಬ್ರಾಹ್ಮಣರು, ಶೂದ್ರರೆಲ್ಲರಿಗೂ ಯೋಚನೆಯಾಯಿತು. ಹೀಗೆಯೇ ವರ್ಷಋತುತು ಕಳೆಯಿತು. ಶರದೃತುವಿನ ಆರಂಭದಲ್ಲೇ ಒಂದುದಿನ ಪ್ರಭಾತದಲ್ಲಿ ಜಮೀನುದಾರರ ಮಗಳು ಜೋಡುಕುದುರೆಯ ಸಾರೋಟನ್ನೇರಿ ಎಲ್ಲರೂ ಕುತೂಹಲದಿಂದ ನೋಡುತ್ತಿರುವಂತೆಯೇ ಹೂಗ್ಲಿ ಸ್ಟೇಷನಿನಿಂದ ತನ್ನ ಹಿರಿಯರ ಮನೆಗೆ ಬಂದು ಸೇರಿದಳು.

ಬಂಗಾಲೀ ಹುಡುಗಿ, ಹದಿನೆಂಟು–ಇಪ್ಪತ್ತು ವರ್ಷವಾದರೂ ಲಗ್ನ ವಿಲ್ಲ. ಮೆಟ್ಟು ಹಾಕಿಕೊಂಡಿದ್ದಾಳೆ.... ತಿನ್ನುವುದರಲ್ಲಿ ನಿಷಿದ್ಧಾನಿಷಿದ್ಧಗಳ ವಿವೇಕವಿಲ್ಲ, ಎಂದು ಮುಂತಾಗಿ ಜನಳು ಏಕಾಂತದಲ್ಲಿ ನಿಂದಿಸತೊಡಗಿದರು. ಆದರೆ ಅವರಲ್ಲೇ ಒಬ್ಬೊಬ್ಬರಾಗಿ ಕೆಲವರು ನಜರಾಣಿಗಳನ್ನು ತೆಗೆದು ಕೊಂಡು ಯಜಮಾನಿಯ ಭೇಟಿಗೆಂದು ಹೊರಟರು. ಹೀಗೆಯೇ ಐದಾರು ದಿನಗಳು ಕಳೆದ ಮೇಲೆ ಒಂದು ದಿನ ವಿಜಯ ಚಹ ಕುಡಿದು ಕೆಳಗಿನ ದಿವಾನ ಕೋಣೆಯಲ್ಲಿ ಕುಳಿತು ವಿಲಾಸನೊಂದಿಗೆ ಗೃಹಕೃತ್ಯದ ವಿಷಯ ಮಾತಾಡುತ್ತಿರುವಾಗ, ಆಳು ಬಂದು ಭೇಟಿಗಾಗಿ ಯಾರೋ ದೊಡ್ಡ ಮನು ಷ್ಯರು ಬಂದಿದ್ದಾರೆಂದು ಹೇಳಿದ.

"ಇಲ್ಲೇ ಕರೆದುಕೊಂಡು ಬಾ" ವಿಜಯ ಹೇಳಿದಳು.

ಈಗ ಕೆಲವು ದಿನಗಳಿಂದ ಅವಳಿಗೆ ನಜರಾಣಿಯನ್ನೊಪ್ಪಿಸಲು ಅನೇ ಕರು ಬರುತ್ತಿದ್ದುದರಿಂದ ಅವಳು ಮೊದಲು ಅಷ್ಟಾಗಿ ಗಮನ ಕೊಡಲಿಲ್ಲ. ಆದರೆ ಆ ಹೊಸ ವ್ಯಕ್ತಿ ಆಳಿನ ಹಿಂದೆ ಬಂದು ಕೋಣೆಯಲ್ಲಿ ಕಾಲಿಟ್ಟ ಕೂಡಲೇ ಅವನನ್ನು ನೋಡಿ ಅವಳು ಆಶ್ಚರ್ಯಪಟ್ಟಳು. ಅವನ ವಯಸ್ಸು ಸುಮಾರು ಇಪ್ಪತ್ತುನಾಲ್ಕು ಇಪ್ಪತ್ತೈದು ಇರಬಹುದು. ಎತ್ತರವಾದ ಆಕಾರ. ಆದರೆ ಅದಕ್ಕೆ ತಕ್ಕಂತೆ ದಪ್ಪವಾಗಿರದೆ ತೆಳ್ಳಗಿದ್ದ; ಶುಭ್ರವರ್ಣ; ಗಡ್ಡ ಮೀಸೆ ಇತ್ತು. ಕಾಲಿನಲ್ಲಿ ಚಪ್ಪಲಿ, ಮೈಮೇಲೆ ಅಂಗಿಯಿರಲಿಲ್ಲ. ಬಿಳಿಯ ಹೊದಿಕೆಯ ಮರೆಯಲ್ಲಿ ಜನಿವಾರ ಕಾಣುತ್ತಿತ್ತು. ಅವನು

ಸಾಧಾರಣ ರೀತಿಯಲ್ಲಿ ನಮಸ್ಕಾರ ಮಾಡಿ ಒಂದು ಕುರ್ಚಿಯನ್ನು ಎಳೆದು ಕೊಂಡು ಕುಳಿತ. ಇದುವರೆಗೂ ಒಳಗೆ ಬಂದವರೆಲ್ಲರೂ ನಜರಾಣಿಯನ್ನು ತೆಗೆದುಕೊಂಡೇ ಒಳಗೆ ಬಂದಿದ್ದರು. ಆದರೆ ಆ ವ್ಯಕ್ತಿಯು ಆಚರಣೆಯಲ್ಲಿ ಸ್ವಲ್ಪವಾದರೂ ಸಂಕೋಚವಿರಲಿಲ್ಲ. ಇವನೀರೀತಿ ಬಂದಿದ್ದರಿಂದ ವಿಜಯ ಳಿಗೆ ಮಾತ್ರವಲ್ಲದೆ ವಿಲಾಸನಿಗೂ ಅತ್ಯಾಶ್ಚರ್ಯವಾಯಿತು. ಬೇರೆ ಊರಿ ನಲ್ಲಿದ್ದರೂ ವಿಲಾಸನಿಗೆ ಇಲ್ಲಿ ಎಲ್ಲರ ಪರಿಚಯವೂ ಇತ್ತು. ಆ ಬಂದಿದ್ದ ವ್ಯಕ್ತಿಯೇ ಮೊದಲು ಮಾತಿಗಾರಂಭಿಸಿದ. ಅವನು ಹೇಳಿದ—“ನನ್ನ ಮಾವ ಪೂರ್ಣಗಾಂಗೂಲಿ ನಿಮ್ಮ ನೆರೆಮನೆಯವ. ಮುಗ್ಗಲುಮನೆ ಅವ ನದೇ. ಅವನ ತಂದೆ ತಾತಂದಿರ ಕಾಲದಿಂದಲೂ ನಡೆದು ಬಂದ ದುರ್ಗಾ ಪೂಜೆಯನ್ನು ಈ ಸಲ ನೀವು ನಿಲ್ಲಿಸಿದಿರೆಂದು ಕೇಳಿ ನಮಗೆ ಬಹಳ ಆಶ್ಚರ್ಯ ವಾಯಿತು. ಅದೇಕೆ?” ಎಂದು ಅವನು ವಿಜಯಳ ಮೇಲೆ ದೃಷ್ಟಿಬೀರಿದ. ಅವನು ಪ್ರಶ್ನೆಮಾಡಿದ ರೀತಿಯಿಂದ ಅವಳಿಗೆ ಆಶ್ಚರ್ಯದ ಜೊತೆಗೆ ತುಸು ಬೇಸರವೂ ಆಯಿತು. ಆದರೆ ಅವಳೇನೂ ಉತ್ತರ ಕೊಡಲಿಲ್ಲ.

ವಿಲಾಸ ಒರಟು ರೀತಿಯಲ್ಲಿ ಹೇಳಿದ—“ನೀವು ಅದಕ್ಕಾಗಿಯೇ ನಿಮ್ಮ ಮಾವನ ಪರವಾಗಿ ಜಗಳವಾಡಲು ಬಂದಿದ್ದೀರಾ? ಆದರೆ ನೀವು ಯಾರೊಂದಿಗೆ ಮಾತಾಡುತ್ತಿದ್ದೀರೆಂಬುದನ್ನು ಮಾತ್ರ ಮರೆಯಬೇಡಿ.”

ಆ ವ್ಯಕ್ತಿ ತುಸು ನಕ್ಕು ಹೇಳಿದ—“ನಾನದನ್ನು ಮರೆತಿಲ್ಲ. ನಾನು ಜಗಳವಾಡುವುದಕ್ಕೂ ಬಂದವನಲ್ಲ. ಈ ಮಾತನ್ನು ಕೇಳಿ ನಮಗೆ ನಂಬುಗೆ ಯಾಗಲಿಲ್ಲ. ಆದ್ದರಿಂದ ಸರಿಯಾಗಿ ತಿಳಿದುಕೊಂಡು ಹೋಗೋಣವೆಂದು ಬಂದಿದ್ದೇನೆ.”

“ನಂಬಿಕೆಯೇಕೆ ಬರಲಿಲ್ಲ.” ವಿಲಾಸ ಹಾಸ್ಯಮಾಡುವ ರೀತಿಯಲ್ಲಿ ಕೇಳಿದ.

“ಹೇಗೆ ಬಂದೀತು? ಹೇಳಿ. ಅರ್ಥವಿಲ್ಲದೆ ನೆರೆಯವರ ಧರ್ಮ ವಿಶ್ವಾಸದ ಮೇಲೆ ಆಘಾತ ಮಾಡುವುದನ್ನು ನಂಬುವುದಾದರೂ ಹೇಗೆ?”

ಧರ್ಮ–ಮತದ ವಿಷಯದ ಮೇಲೆ ಚರ್ಚೆ ಮಾಡುವುದೆಂದರೆ ವಿಲಾ ಸನಿಗೆ ಬಾಲ್ಯದಿಂದಲೂ ಬಹಳ ಪ್ರೀತಿ. ಅವನು ಉತ್ಸಾಹದಿಂದ ಉಬ್ಬಿ ಹಾಸ್ಯದ ರೀತಿಯಲ್ಲೇ ಹೇಳಿದ—“ನಿಮಗೆ ನಿರರ್ಥಕವಾಗಿ ಕಂಡದ್ದು ಇತರರಿಗೂ ಹಾಗೇ ಕಾಣಬೇಕೆಂದಾಗಲೀ, ನೀವು ಧರ್ಮವೆಂದು ತಿಳಿದ

ದ್ದನ್ನು ಇತರರೂ ಗೌರವಿಸಬೇಕೆಂದಾಗಲೀ ಎಲ್ಲೂ ನಿಯಮವಿಲ್ಲ. ಮೂರ್ತಿ ಪೂಜೆ ನಮಗೆ ದರ್ಸುವಲ್ಲ. ಅದನ್ನು ನಿಲ್ಲಿಸುವುದನ್ನುನಾವು ಅನ್ಯಾಯವೆಂದು ತಿಳಿಯುವುದಿಲ್ಲ."

ಆ ವ್ಯಕ್ತಿ ಬಹಳ ಆಶ್ಚರ್ಯದಿಂದ ವಿಜಯಳ ಕಡೆ ನೋಡಿ ಕೇಳಿದ–

"ನಿಮ್ಮ ಅಭಿಪ್ರಾಯವೂ ಇದೇನೋ ?"

ಅವನ ಆಶ್ಚರ್ಯದಿಂದ ಅವಳು ಸ್ವಲ್ಪ ಬೆಪ್ಪಾದಳು. ಆದರೂ ಅದನ್ನು ತೋರಗೊಡದೆ ಸ್ವಾಭಾವಿಕ ಸ್ವರದಲ್ಲೇ ಕೇಳಿದಳು—"ನೀವು ಇದಕ್ಕೆ ಭಿನ್ನ ವಾದ ಅಭಿಪ್ರಾಯ ನನ್ನಿಂದ ಕೇಳುವ ನಿರೀಕ್ಷಣೆ ಮಾಡುತ್ತೀರೇನು?"

ವಿಲಾಸ ಗರ್ವದಿಂದ ನಗುತ್ತಾ ಹೇಳಿದ—"ಹಾಗೆ ತೋರುತ್ತೆ. ಆದರೆ ಇವರು ಬೇರೆ ದೇಶದವರು. ಇವರಿಗೆ ನಿಮ್ಮ ವಿಷಯವೇನೂ ತಿಳಿಯ ದೆಂದು ತೋರುತ್ತೆ."

ಹೊಸಬ ವಿಜಯಳನ್ನೇ ಒಂದು ಕ್ಷಣ ನೋಡುತ್ತಿದ್ದು ಹೇಳಿದ— ನಾನು ಬೇರೆದೇಶದವನಲ್ಲದಿದ್ದರೂ, ಈ ಊರಿನವನಲ್ಲ. ಆದರೂ ನಾನು ನಿಮ್ಮಿಂದ ಇದರ ನಿರೀಕ್ಷಣೆ ಮಾಡಿರಲಿಲ್ಲ. ಮೂರ್ತಿಪೂಜೆಯ ವಿಷಯ ನಿಮ್ಮ ಬಾಯಲ್ಲಿ ಮೊಟ್ಟಮೊದಲು ಶುರುವಾಗಲಿಲ್ಲ. ಆದರೂ ದೇವರ ಸಾಕಾರ-ನಿರಾಕಾರ ಉಪಾಸನೆಯ ಪುರಾತನವಾದ ಚರ್ಚೆಗಾಗಿ ನಾನಿಲ್ಲಿ ಬಂದಿಲ್ಲ. ನೀವು ಬ್ರಹ್ಮಸಮಾಜಿಗಳೆಂಬುದೂ ನನಗೆ ಗೊತ್ತಿದೆ. ಆದರೆ ಈಗ ಬಂದಿರುವುದು ಆ ವಿಷಯವಲ್ಲ. ಈ ಹಳ್ಳಿಯಲ್ಲಿ ಇದೊಂದೇ ಪೂಜೆ ನಡೆಯುವುದು. ಹಳ್ಳಿಯವರೆಲ್ಲರೂ ವರ್ಷವೆಲ್ಲ ಈ ಮೂರು ದಿನಗಳನ್ನೇ ನಿರೀಕ್ಷಿಸಿಕೊಂಡಿರುತ್ತಾರೆ." ಎಂದು ಅವನು ಇನ್ನೊಮ್ಮೆ ತೀವ್ರವಾಗಿ ನೋಡಿ ಹೇಳಿದ—"ಊರು ನಿಮ್ಮದು. ಪ್ರಜೆಗಳು ನಿಮ್ಮ ಮಕ್ಕಳಿದ್ದಂತೆ. ನಿಮ್ಮ ಆಗಮನದಿಂದ ಹಳ್ಳಿಗರ ಸಂತೋಷ ನೂರುಮಡಿ ಹೆಚ್ಚುತ್ತೆಂದು ಎಲ್ಲರೂ ಎದುರು ನೋಡುತ್ತಿರುವಾಗ, ಯಾವ ತಪ್ಪೂ ಇಲ್ಲದೆ ಇಷ್ಟು ನಿರುತ್ಸಾಹ ಮತ್ತು ಇಷ್ಟು ದುಃಖದ ಹೊರೆಯನ್ನು ಪ್ರಜೆಗಳ ಮೇಲೆ ನೀವು ಹೊರಿಸುತ್ತೀರೆಂದು ಊಹಿಸುವುದಾದರೂ ಸರಿಯೇ ? ನನಗಂತೂ ಅದರಲ್ಲಿ ವಿಶ್ವಾಸವಿಲ್ಲ."

ವಿಜಯಳು ಉತ್ತರ ಕೊಡಲು ಅಸಮರ್ಥಳಾದಳು. ದುಃಖಿ ಪ್ರಜೆ ಗಳ ವಿಷಯದಿಂದ ಅವಳ ಮೃದುವಾದ ಮನಸ್ಸು ದುಗುಡದಿಂದ ನೊಂದಿತು. ಸ್ವಲ್ಪಹೊತ್ತು ನೀರವತೆ ಮೂಡಿತು. ಯಾರೂ ಏನೂ ಹೇಳಲಿಲ್ಲ. ಆದರೆ

ವಿಲಾಸ ವಿಜಯಳ ಗುಗುಡದ ಮುಖ ನೋಡಿ ಉದ್ವಿಗ್ನನಾಗಿ ಅವಜ್ಞೆಯಿಂದ ಹೇಳಿದ—"ನೀವು ಬಹಳ ಮಾತಾಡುತ್ತೀರಿ. ನಿಮ್ಮೊಂದಿಗೆ ಸಾಕಾರ ನಿರಾಕಾರ ಉಪಾಸನೆ ವಿಷಯ ಮಾತಾಡುವಷ್ಟು ಸಮಯ ನನ್ನಲ್ಲೂ ಇಲ್ಲ. ಅದೆಲ್ಲಾ ಗರೂ ಹಾಳಾಗಿಹೋಗಲಿ. ನಿಮ್ಮ ಮಾವ ಒಂದೇಕೆ ಇಪ್ಪತ್ತೊಂದು ಮೂರ್ತಿಯನ್ನಿಟ್ಟುಕೊಂಡು ಮನೆಯಲ್ಲಿ ಪೂಜೆ ಮಾಡಲಿ. ಅದಕ್ಕೇನೂ ಅಡ್ಡಿಯಿಲ್ಲ. ಹಗಲು ರಾತ್ರಿ, ತಾಳ ತಮಟೆ ಮೃದಂಗ ಬಡೆದು ಇವರ ಆರೋಗ್ಯವನ್ನು ಹಾಳು ಮಾಡುವುದಕ್ಕೆ ನನ್ನ ಅಭ್ಯಂತರ ಬಹಳ."

ಹೊಸಬ ಸ್ವಲ್ಪ ನಕ್ಕು ಹೇಳಿದ—"ಹಗಲೂ ರಾತ್ರಿ ಹೊಡೆಯುವು ದಿಲ್ಲ. ಅಲ್ಲದೆ ಎಲ್ಲ ಉತ್ಸವಗಳಲ್ಲೂ ಸ್ವಲ್ಪ ಗದ್ದಲವಾಗೇ ಆಗುತ್ತೆ." ವಿಜ ಯಳ ಕಡೆ ಸೂಚಿಸಿ ಹೇಳಿದ— "ಆದ್ದರಿಂದ ಕೊಂಚ ತೊಂದರೆಯಾದರೂ ಅವಕಾಶ ಕೊಡಿ. ನೀವು ಮಾತೃಸಮಾನರು. ಅವರ ಆನಂದದ ಅತ್ಯಾ ಚಾರವನ್ನು ನೀವಲ್ಲದಿದ್ದಗೆ ಇನ್ನಾರು ಸಹಿಸುತ್ತಾರೆ?"

ವಿಜಯ ಮೌನವಾಗೇ ಇದ್ದಳು. ವಿಲಾಸ ವ್ಯಂಗ್ಯವಾಗಿ ನಕ್ಕು ಹೇಳಿದ—"ನೀವು ಸಂಬಂಧ ತೋರಿಸುವುದಕ್ಕಾಗಿ ತಾಯಿ ಮಕ್ಕಳ ಉಪಮೆ ಯನ್ನು ಕೊಟ್ಟರಿ. ಅದೇನೋ ಸರಿಹೋಯಿತು. ಆದರೆ ನೀವೇ ಮುಸಲ ಮಾನರಾಗಿ ನಿಮ್ಮ ಮಾವನವರ ಕಿವಿಯಲ್ಲಿ ಮುಹ್ರಂ ಶುರುಮಾಡಿದ್ದರೆ ಅವರಿಗೆ ಸರಿಹೋಗುತ್ತಿತ್ತೇ?....ಹೂಂ....ಅದೇನೇ ಆಗಲಿ, ನಮ್ಮಲ್ಲಿ ಹರ ಟೆಗೆ ಸಮಯವಿಲ್ಲ. ತಂದೆಯವರ ಅಪ್ಪಣೆಯಂತೆ ಆಗಬೇಕು. ಕಲಿಕತ್ತೆ ಯಿಂದ ಬಂದ ನಾನು ಈ ನಿರರ್ಥಕ ವಾದ್ಯ ಕೇಳಿ ಕಿವಿಯನ್ನು ಕಿವುಡು ಮಾಡಿಕೊಳ್ಳಲು ಅವಕಾಶ ಕೊಡುವುದಿಲ್ಲ....ಅದು ಖಂಡಿತ ಸಾಧ್ಯವಿಲ್ಲ."

ಅವನ ಒರಟಾದ ಹಾಸ್ಯ ಮತ್ತು ಕ್ರೋಧವನ್ನು ನೋಡಿ ಆಗಂತುಕನ ದೃಷ್ಟಿ ಪ್ರಖರವಾಯಿತು. ಅವನು ವಿಲಾಸನ ಕಡೆ ಮುಖವೆತ್ತಿ ನೋಡಿ ಹೇಳಿದ—"ನಿಮ್ಮ ತಂದೆಯವರು ಯಾರು? ಪೂಜೆಯನ್ನು ತಡೆಯಲು ಅವರಿಗೇನಧಿಕಾರವೆಂಬುದು ನನಗೆ ತಿಳಿಯದು. ನೀವೇನೊ ಮೊಹರಮ್ಮಿನ ಉಪಮೆಯನ್ನು ಕೆಟ್ಟರಲ್ಲ; ಹಿಂದುಗಳ ದೀಪೋತ್ಸವವಲ್ಲದೆ ಮುಸಲಮಾನರ ಹಬ್ಬವಾಗಿದ್ದರೆ, ನೀವು ಅವರನ್ನು ಹೀಗೇ ತಡೆಯುತ್ತಿದ್ದಿರಾ? ಇದು ಸ್ವಜಾತಿಯಮೇಲೆ ಅತ್ಯಾಚಾರವಲ್ಲದೆ ಏನು?"

ವಿಲಾಸ ಅಕಸ್ಮಾತ್ ಕುರ್ಚಿಯಿಂದ ಹಾರಿ ನಿಂತುಕೊಂಡು, ಕಣ್ಣು

ಕೆಂಪಗೆ ಮಾಡಿ ಕೂಗಿ ಹೇಳಿದ—"ತಂದೆಯ ವಿಚಾರದಲ್ಲಿ ನೀನು ಸ್ವಲ್ಪ ಎಚ್ಚರಿಕೆಯಿಂದ ಮಾತಾಡು. ಇಲ್ಲದಿದ್ದರೆ ಅವರು ಯಾರು? ಅವರಿಗೇನಧಿಕಾರವೆಂಬುದನ್ನು ಬೇರೆ ರೀತಿಯಿಂದ ತೋರಿಸಿಕೊಟ್ಟೇನು."

ವಿಲಾಸನ ಮುಖವನ್ನು ಆಗುಂತಕ ಆಶ್ಚರ್ಯದಿಂದ ನೋಡಿದ. ಅವನ ಮುಖದ ಮೇಲೆ ಭಯದ ಚಿನ್ಹೆಯೂ ಕೂಡ ತೋರಲಿಲ್ಲ. ಆದರೆ ವಿಜಯಳ ಮುಖದಲ್ಲಿ ಭಯಮೂಡಿತು. ಅವಳ ಮನೆಯಲ್ಲೇ ಕುಳಿತು ಒಬ್ಬ ಅಪರಿಚಿತ ಅತಿಥಿಗೆ ತೋರಿದ ಈ ಅಶ್ಲೀಲ ಆಚರಣೆಯಿಂದ ಸಿಟ್ಟು ಮತ್ತು ಲಜ್ಜೆಯಿಂದ ಅವಳ ಮುಖ ಕೆಂಪಾಯಿತು. ಆಗಂತುಕ ಒಂದು ಕ್ಷಣ ವಿಲಾಸನನ್ನು ನೋಡುತ್ತಿದ್ದು ಮರುಕ್ಷಣವೇ ವಿಜಯಳ ಕಡೆ ತಿರುಗಿ ಹೇಳಿದ—"ನಮ್ಮ ಮಾವ ದೊಡ್ಡ ಮನುಷ್ಯರೇನೂ ಅಲ್ಲ. ಅವರ ಪೂಜೆಯ ಸಿದ್ಧತೆಗಳೂ ಸಾಧಾರಣ ಮಟ್ಟದ್ದೇ. ಆದರೂ ನಿಮ್ಮ ಬಡ ಪ್ರಜೆಗಳಿಗೆ ವರ್ಷಕ್ಕೆಲ್ಲ ಇದೊಂದೇ ಆನಂದೋತ್ಸವ. ನಿಮಗೆ ಸ್ವಲ್ಪ ತೊಂದರೆಯಾಗಬಹುದು. ಆದರೆ ನಿಮ್ಮ ಪ್ರಜೆಗಳಿಗಾಗಿ ನೀವಿಷ್ಟೂ ಸಹಿಸಲಾರಿರಾ?"

ವಿಲಾಸ ಸಿಟ್ಟಿನಿಂದ ಹುಚ್ಚಾದಂತಾಗಿ ಮುಂದಿದ್ದ ಮೇಜನ್ನು ಬಲವಾಗಿ ತಟ್ಟಿ ಘರ್ಜಿಸಿದ—"ಉಹುಂ. ಸಹಿಸುವುದಕ್ಕಾಗುವುದಿಲ್ಲ. ಖಂಡಿತ ಸಾಧ್ಯವಿಲ್ಲ. ಕೆಲವು ಮೂರ್ಖ ಜಮೀನುದಾರರ ಹುಚ್ಚಾಟವನ್ನು ಸಹಿಸಲು ಯಾರೂ ಜಮೀನುದಾರಿ ಮಾಡುವುದಿಲ್ಲ. ನೀನು ಇನ್ನೇನೂ ಹೇಳುವುದಿಲ್ಲದಿದ್ದರೆ ಇಲ್ಲಿಂದ ಹೊರಡು. ನಮ್ಮ ಸಮಯವನ್ನು ವ್ಯರ್ಥಮಾಡಬೇಡ." ಇಷ್ಟು ಹೇಳಿ ಅವನು ಬಾಗಿಲ ಕಡೆ ಕೈ ತೋರಿಸಿದ.

ಅವನ ಈ ಚೀತ್ಕಾರದಿಂದ ಆಗಂತುಕ ಒಂದು ಕ್ಷಣ ಬೆಪ್ಪಾದ. ಕೂಡಲೆ ಅವನ ಬಾಯಿಂದ ಒಂದೂ ಹೊರಡಲಿಲ್ಲ. ಆದರೆ ವಿಜಯಳಿಗೆ ತಂದೆಯಿಂದ ಪಡೆದ ಶಿಕ್ಷಣ ನಿಷ್ಫಲವಾಗಿರಲಿಲ್ಲ. ಅವಳು ಶಾಂತಿಯಿಂದ ಗಂಭೀರಳಾಗಿ ಹೇಳಿದಳು—"ನಿಮ್ಮ ತಂದೆ ನನ್ನನ್ನು ತಮ್ಮ ಮಗಳಂತೆ ಪ್ರೀತಿಸುತ್ತಾರೆ. ಆದ್ದರಿಂದ ಅವರು ಹಾಗೆ ಅಪ್ಪಣೆಮಾಡಿರಬಹುದು. ಆದರೆ ಮೂರು ನಾಲ್ಕು ದಿನ ಸ್ವಲ್ಪ ಗದ್ದಲವಾದರೇನು ತೊಂದರೆ?"

ಅವಳ ಮಾತಿನ್ನೂ ಪೂರ್ತಿಯಾಗಿರಲಿಲ್ಲ. ಅಷ್ಟರಲ್ಲೇ ಅದನ್ನು ತೀವ್ರವಾಗಿ ವಿರೋಧಿಸುತ್ತಾ ವಿಲಾಸ ಹೇಳಿದ—"ಅದನ್ನು ಸಹಿಸುವುದಕ್ಕಾಗುವುದಿಲ್ಲ. ನಿಮಗದು ತಿಳಿಯದು. ಅದಕ್ಕೇ........"

ವಿಜಯು ನಸುನಗುತ್ತಾ ಹೇಳಿದಳು—"ಆದರಾಗಲಿ, ಮೂರೇ ದಿನ ತಾನೆ. ಇಲ್ಲಿ ನನಗೆ ತೊಂದರೆಯಾಗುವ ವಿಷಯ ಹೇಳುತ್ತಿದ್ದೀರಿ. ಕಲಿ ಕತ್ತೆಯಾದರೆ ಏನುಮಾಡುತ್ತಿದ್ದಿರಿ? ಅಲ್ಲಿ ಇಪ್ಪತ್ತುನಾಲ್ಕು ಗಂಟೆಯೂ ಗುಂಡಿನ ಸದ್ದಾಗುತ್ತಿದ್ದರೂ ಬಾಯಿ ಮುಚ್ಚಿಕೊಂಡಿರಬೇಕಾಗಿತ್ತು" ಎಂದು ಅವಳು ಆಗಂತುಕನನ್ನು ನೋಡಿ ಹೇಳಿದಳು—"ನಿಮ್ಮ ಮಾವ ಪ್ರತಿವರ್ಷ ಹೇಗೆ ಪೂಜೆಮಾಡುತ್ತಿದ್ದರೋ ಈ ವರ್ಷವೂ ಹಾಗೇ ಮಾಡಲಿ. ಇದರಲ್ಲಿ ನನ್ನ ಆಕ್ಷೇಪಣೆಯೇನೂ ಇಲ್ಲವೆಂದು ನಿಮ್ಮ ಮಾವನಿಗೆ ಹೇಳಿ."

ಆಗಂತುಕ ಮತ್ತು ವಿಲಾಸ ಇಬ್ಬರೂ ಆಶ್ಚರ್ಯದಿಂದ ವಿಜಯಳ ಮುಖನ್ನು ನೋಡಿದರು.

"ಹಾಗಾದರೆ ಇನ್ನು ನೀವು ಹೊರಡಿ" ಎಂದು ಅವಳು ಕೈಯೆತ್ತಿ ಸಾಮಾನ್ಯ ರೀತಿಯಲ್ಲಿ ನಮಸ್ಕರಿಸಿದಳು. ಆಗಂತುಕನೂ ಎದ್ದು ನಿಂತು ಧನ್ಯವಾದ ಮತ್ತು ಪ್ರತಿ ನಮಸ್ಕಾರಗಳನ್ನು ಮಾಡಿ, ವಿಲಾಸನಿಗೂ ಕೈಮುಗಿದು ಅಲ್ಲಿಂದ ಹೊರಟ. ಸಿಟ್ಟಾಗಿದ್ದ ವಿಲಾಸ ಮುಖ ತಿರುಗಿಸಿಕೊಂಡ. ಆದರೆ ಈ ಅಪರಿಚಿತ ವ್ಯಕ್ತಿಯೇ ಜಗದೀಶನ ಮಗ ನರೇಂದ್ರನಾಥನೆಂಬುದು ಇಬ್ಬರಿಗೂ ತಿಳಿಯಲಿಲ್ಲ.

೫

ಅವನು ಹೊರಟುಹೋದಮೇಲೆ ವಿಜಯ ಅನ್ಯಮನಸ್ಕಳಾಗಿ ಒಂದು ಕ್ಷಣ ಸುಮ್ಮನೆ ಕುಳಿತಿದ್ದಳು. ಆಮೇಲೆ ಅಕಸ್ಮಾತ್ ಮುಖವೆತ್ತಿ ನೋಡಿದ ಕೂಡಲೆ ಅವಳ ಕಪೋಲಗಳು ನಸುಗೆಂಪಾದವು. ವಿಲಾಸನ ದೃಷ್ಟಿ ಬೇರೆ ಕಡೆ ಇರದಿದ್ದರೆ, ಅವಳ ಆಶ್ಚರ್ಯ ಮತ್ತು ಲಜ್ಜೆಗೆ ಮಿತಿಯೇ ಇರುತ್ತಿರಲಿಲ್ಲ. ಅವಳು ನಸುನಕ್ಕು ಹೇಳಿದಳು—"ನಮ್ಮ ಮಾತೇ ಮುಗಿಯಲಿಲ್ಲ. ಹಾಗಾದರೆ ಆ ಗ್ರಾಮ ಕೊಳ್ಳಬೇಕೆಂದೇ ನಿಮ್ಮ ತಂದೆಯವರ ಅಭಿಪ್ರಾಯವೇನು?"

ವಿಲಾಸ ಕಿಟಕಿಯಿಂದ ಹೊರಗೆ ನೋಡುತ್ತಿದ್ದವನು ಹಾಗೇ ಹೂಗುಟ್ಟಿದ.

"ಹಾಗಾದರೆ ಅದರಲ್ಲಿ ಏನೂ ಗಲಾಟೆ ಇಲ್ಲವೇ?"

"ಊಹುಂ."

"ಇವತ್ತು ಸಂಜೆಗೆ ಅವರು ಇಲ್ಲಿಗೆ ಬರುತ್ತಾರೆಯೇ?"

"ಹೇಳುವುದಕ್ಕಾಗುವುದಿಲ್ಲ."

"ನಿಮಗೆ ಸಿಟ್ಟು ಬಂತೇ?" ವಿಜಯ ನಗುತ್ತಾ ಕೇಳಿದಳು.

ವಿಲಾಸ ಈ ಕಡೆ ತಿರುಗಿ ಗಂಭೀರವಾಗಿ ಹೇಳಿದ—"ಸಿಟ್ಟು ಬರ ದಿದ್ದರೂ ತಂದೆಗಾದ ಅವಮಾನದಿಂದ ಮಗ ದುಃಖಪಡುವುದು ಅಸ್ವಾಭಾವಿ ಕವೇನೂ ಅಲ್ಲ."

ಇದರಿಂದ ವಿಜಯಳಿಗೆ ತುಸು ಘಾಸಿಯಾದರೂ ಅವಳು ನಗುಮುಖ ದಿಂದಲೇ ಹೇಳಿದಳು—"ಆದರೆ ಇದರಿಂದ ಅವರ ಮಾನಹಾನಿಯಾಯಿ ತೆಂಬ ತಪ್ಪಭಿಪ್ರಾಯ ನಿಮಗೇಕೆ ಬಂದಿತು? ನನಗೆ ಕಷ್ಟವಾಗಬಹುದೆಂದು ಸ್ನೇಹದಿಂದ ಅವರು ಹೇಳಿದರು. ಆದರೆ ಇದರಿಂದ ನನಗೇನೂ ತೊಂದರೆ ಯಾಗಲಾರದೆಂದು ನಾನು ಆ ಹೊಸಬರಿಗೆ ಹೇಳಿದೆ. ಇಷ್ಟೇ ನಡೆದದ್ದು. ಇದರಲ್ಲಿ ಮಾನಾಪಮಾನದ ವಿಷಯವೇ ಇಲ್ಲ ವಿಲಾಸಬಾಬು."

ವಿಲಾಸ ಮೊದಲಿನಂತೆ ಗಂಭೀರವಾಗೇ ಹೇಳಿದ—"ಉಹುಂ, ಹಾಗಲ್ಲ.....ಹುಂ....ಹೋಗಲಿ, ಒಳ್ಳೆಯದೇ ಆಯಿತು. ನಿಮ್ಮ ಆಸ್ತಿಯ ಭಾರ ನೀವೇ ತೆಗೆದುಕೊಳ್ಳಬೇಕೆನ್ನುತ್ತೀರಿ. ಇದರಲ್ಲಿ ತಪ್ಪೇನು? ಆದರೆ ಇನ್ನುಮೇಲೆ ನಮ್ಮ ತಂದೆಗೆ ಸ್ವಲ್ಪ ಎಚ್ಚರಿಕೆ ಕೊಡಬೇಕು. ಇಲ್ಲದಿದ್ದರೆ ಮಗನ ಕರ್ತವ್ಯದಲ್ಲಿ ಲೋಪವಾದೀತು."

ಈ ಅನಿರೀಕ್ಷಿತವಾದ ಹಾಗೂ ಕಹಿಯಾದ ಉತ್ತರವನ್ನು ಕೇಳಿ ವಿಜ ಯಳು ಆಶ್ಚರ್ಯದಿಂದ ಅವಾಕ್ಕಾಗಿ ಸ್ವಲ್ಪಹೊತ್ತು ಸ್ತಬ್ಧಳಾಗಿದ್ದು ಹೇಳಿ ದಳು—"ವಿಲಾಸಬಾಬು, ಇಷ್ಟು ಸಾಧಾರಣ ವಿಷಯವನ್ನು ನೀವಿಷ್ಟು ದೊಡ್ಡದಾಗಿ ಮಾಡುತ್ತೀರೆಂದು ನಾನು ಎಣಿಸಿರಲಿಲ್ಲ. ಏನೋ ತಿಳಿಯದೆ ನಾನು ಅನ್ಯಾಯವನ್ನು ಮಾಡಿದ್ದೇನೆಂದರೂ ಅದನ್ನು ಒಪ್ಪಿಕೊಳ್ಳುತ್ತೇನೆ. ಇನ್ನುಮೇಲೆ ಹೀಗೆ ಮಾಡುವುದಿಲ್ಲ" ಎಂದು ವಿಲಾಸನ ಕಡೆ ನೋಡಿ ಒಂದು ನಿಟ್ಟುಸಿರುಬಿಟ್ಟಳು. ಅವಳು ಇದರಿಂದ ಮಾತು ಮುಂದುವರೆಯಲಾರ ದೆಂದು ತಿಳಿದಿದ್ದಳು. ದೋಷವನ್ನು ಸ್ವೀಕರಿಸಿದ ಕೂಡಲೆ ಅದು ಅಲ್ಲಿಗೇ ಮುಗಿಯಬಹುದೆಂದು ಬಗೆದಳು ಆದರೆ ಅದನ್ನೇ ಹಿಡಿದು ತಮ್ಮ ಹಿರಿ ದಾದ ಹಸಿವನ್ನು ಹಿಂಗಿಸಿಕೊಳ್ಳುವ ದುಷ್ಟ ಜಂತುಗಳೂ ಕೆಲವು ಇರುತ್ತ ವೆಂದು ಅವಳಿಗೆ ತಿಳಿದಿರಲಿಲ್ಲ. "ಹಾಗಾದರೆ ರಾಸಬಿಹಾರಿ ಅಪ್ಪಣೆಮಾಡಿ ದ್ದನ್ನು ತೆಗೆದು ಹಾಕುವ ಶಕ್ತಿ ನಿಮ್ಮಲ್ಲಿಲ್ಲವೆಂದು ಪೂರ್ಣಗಾಂಗೂಲಿಗೆ ಹೇಳಿಕಳುಹಿಸಿ" ಎಂದು ವಿಲಾಸ ಹೇಳಿದಕೂಡಲೇ ವಿಜಯಳ ಮುಂದೆ

ಅವನೊಂದು ಹಿಂಸ್ರ ಪಶುವಿನಂತೆ ಕಂಡ. ಅವಳು ಸ್ವಲ್ಪಹೊತ್ತು ಹಾಗೇ ನೋಡುತ್ತಿದ್ದು ಹೇಳಿದಳು—"ಇದು ಬಹಳ ಅನ್ಯಾಯವಾಗುವುದಿಲ್ಲವೇ? ಇಲ್ಲದಿದ್ದರೆ ನಾನೇ ಕಾಗದ ಬರೆದು ಅನುಮತಿ ಪಡೆಯುತ್ತೇನೆ."

"ಈಗ ಅನುಮತಿ ಪಡೆಯುವುದೂ ಒಂದೇ, ಪಡೆಯದಿರುವುದೂ ಒಂದೇ. ನೀವು ನಮ್ಮ ತಂದೆಯನ್ನು ಹಳ್ಳಿಯಲ್ಲೆಲ್ಲಾ ತಾತ್ಸಾರಕ್ಕೊಡ್ಡಿದ ಮೇಲೆ ನಾನು ಮಗನ ಪಾಲಿನ ಅಪ್ರಿಯವಾದ ಕರ್ತವ್ಯವನ್ನು ನೆರವೇರಿಸಲೇ ಬೇಕಾಗುತ್ತೆ.

ವಿಜಯಳ ಮನಸ್ಸಿನಲಿ ಸಿಟ್ಟು ಬಂದಿತು. ಆದರೂ ಅವಳು ತಡೆದು ಕೇಳಿದಳು—"ಅದಾವುದು ಆ ಅಪ್ರಿಯ ಕರ್ತವ್ಯ ಹೇಳಿ ಕೇಳೋಣ."

"ಅವರು ನಿಮ್ಮ ಜಮೀನುದಾರಿಯಲ್ಲಿ ಕೈಹಾಕದಂತೆ ನೋಡಿಕೊಳ್ಳುವುದು."

"ನೀವು ಹೇಳಿದರೆ ಅವರು ಕೇಳುತ್ತಾರೆಂದುಕೊಂಡಿದ್ದೀರೇನು?"

"ನಾನು ಪ್ರಯತ್ನವಂತೂ ಮಾಡುತ್ತೇನೆ."

ವಿಜಯ ಬೇರೆಕಡೆ ತಿರುಗಿ ಉದಾಸೀನದಿಂದ ಹೇಳಿದಳು...."ಉಂ ನೀವೇನಾದರೂ ಮಾಡಿ. ಯಾರ ಧರ್ಮದಲ್ಲೂ ಕೈ ಹಾಕುವುದಕ್ಕೆ ನನಗಿಷ್ಟವಿಲ್ಲ."

ಮಾತು ಮೃದುವಾಗಿದ್ದರೂ ಒಳಗೆ ಸಿಟ್ಟು ತುಂಬಿತ್ತು. ವಿಲಾಸ ತೀವ್ರಸ್ವರದಲ್ಲಿ ಹೇಳಿದ—"ಆದರೆ ನಿಮ್ಮ ತಂದೆಯವರಿದ್ದಿದ್ದರೆ ಅವರಿಗೆ ಈ ಮಾತು ಹೇಳುವಷ್ಟು ಸಾಹಸವಿರುತ್ತಿರಲಿಲ್ಲ."

ವಿಜಯ ತಿರುಗಿ ನಿಂತು ಸ್ವಲ್ಪಹೊತ್ತು ವಿಲಾಸನ ಕಡೆ ನೋಡಿ ಹೇಳಿದಳು...."ನನ್ನ ತಂದೆಯ ವಿಷಯ ನಿಮಗಿಂತ ನನಗೆ ಚೆನ್ನಾಗಿ ಗೊತ್ತಿದೆ ವಿಲಾಸಬಾಬು. ಈ ವಿಷಯವನ್ನು ಚರ್ಚೆಮಾಡುವುದರಿಂದ ಉಪಯೋಗವೇನು? ನನಗೆ ಸ್ನಾನದ ಹೊತ್ತಾಯಿತು. ನಾನಿನ್ನು ಹೊರಡುತ್ತೇನೆ" ಎಂದು ಅವಳು ಎದ್ದು ಹೊರಡುತ್ತಿರುವಾಗಲೇ, ವಿಲಾಸನ ಮುಖದಲ್ಲಿದ್ದ ಕೃತಕ ಗಾಂಭೀರ್ಯ ಮಾಯವಾಗಿ ಅವನ ನಿಜಸ್ವರೂಪ ಹೊರಬಿದ್ದಿತು. ಅವನು ಬಹಳ ಕಟುವಾಗಿ............"ಹೆಣ್ಣು ಜಾತಿಯೇ ಹೀಗೆ ಕೃತಘ್ನಜಾತಿ" ಎಂದ.

ವಿಜಯ ಹೊರಗೆ ಕಾಲಿಟ್ಟಿದ್ದವಳು ಮಿಂಚಿನಂತೆ ತಿರುಗಿ ಬಂದು

ಒಂದು ಕ್ಷಣ ಅವನ ಮುಖವನ್ನು ತೀಕ್ಷ್ಣವಾಗಿ ದಿಟ್ಟಿಸುತ್ತಿದ್ದು ಮತ್ತೆ ನಿಧಾನ ವಾಗಿ ಅಲ್ಲಿಂದ ಹೊರಟುಹೋದಳು. ಇದನ್ನು ನೋಡಿ ವಿಲಾಸ ಬತ್ತಿಹೋದ.

ವಿಲಾಸನ ಈ ಪರಿಯ ಚರ್ಚೆಗೆ ಪಿತೃಭಕ್ತಿಯು ಎಂದಿಗೂ ಕಾರಣ ವಾಗಿರಲಿಲ್ಲ. ಇಂತಹವರ ಸ್ವಭಾವವೇ ಹೀಗೆ. ವಿಷಯ ಯಾವುದೇ ಆಗಲಿ, ಅದರ ಕಾರಣ ಎಷ್ಟು ಅಸಂಗತವಾಗಿರಲಿ, ಸ್ವಲ್ಪ ಅವಕಾಶ ಸಿಕ್ಕ ಕೂಡಲೆ ಅದನ್ನು ಸುಮ್ಮನೆ ದೊಡ್ಡದು ಮಾಡಿ ದುರ್ಬಲರನ್ನು ಗೋಳಿಕ್ಕಿ ಭಯಸ್ಥರನ್ನು ಇನ್ನೂ ಭಯಪಡಿಸುವುದರಲ್ಲೇ ಇವರು ಆನಂದಪಟ್ಟುಕೊಳ್ಳು ತ್ತಾರೆ. ಆದರೆ ಅದನ್ನು ತುಚ್ಛವಾಗಿ ಎಣಿಸಿ ವಿಜಯಳು ಅಸಹ್ಯಪಟ್ಟು ಕೊಂಡು ಹೊರಟುಹೋದ ಕೂಡಲೆ, ಈ ಚರ್ಚೆಯ ಅಲ್ಪತನವೆಲ್ಲ ಬಯ ಲಾಯಿತು. ಅವನು ಸ್ವಲ್ಪಹೊತ್ತು ಸುಮ್ಮನೆ ಕುಳಿತಿದ್ದು, ಮುಖವನ್ನು ಕಪ್ಪಗೆಮಾಡಿಕೊಂಡು ನಿಧಾನವಾಗಿ ಹೊರಟುಹೋದ.

ಸಂಜೆಗೆ ರಾಸಬಿಹಾರಿ ಮಗನ ಜೊತೆಗೆ ಬಂದ. ಅವನು ಹೇಳಿದ— "ಇದು ಸರಿಯಲ್ಲ ಮಗು ನನ್ನ ಆಜ್ಞೆಗೆ ವಿರುದ್ಧವಾಗಿ ನೀನು ಅಪ್ಪಣೆ ಕೊಟ್ಟು ನನ್ನನ್ನು ಬಹಳ ಅವಮಾನಗೊಳಿಸಿದೆ. ಅದು ಹೋಗಲಿ ಬಿಡು. ನಿನ್ನ ಆಸ್ತಿಯಾದಮೇಲೆ ಅದರ ವಿಷಯವಾಗಿ ಹೆಚ್ಚು ಚರ್ಚೆ ಮಾಡು ವುದು ವ್ಯರ್ಥ. ಆದರೆ ಬಾರಿಬಾರಿಗೂ ಹೀಗೇ ಆದರೆ ಆತ್ಮ ಗೌರವಕ್ಕೆ ಧಕ್ಕೆ ಬರುತ್ತಾದ್ದರಿಂದ ಅದನ್ನುಳಿಸಿಕೊಳ್ಳುವುದಕ್ಕೆ ನಾನು ಬೇರೆಯಾಗ ಬೇಕು. ಈಗಲೇ ಹೇಳಿದ್ದೇನೆ."

ವಿಜಯಳು ಏನೂ ಉತ್ತರ ಕೊಡಲಿಲ್ಲ. ಆದರೆ ಮೌನವಾಗಿಯೇ ಆ ಅಪರಾಧನನ್ನು ಒಂದು ರೀತಿ ಒಪ್ಪಿಕೊಂಡಳು. ರಾಸಬಿಹಾರಿ ಶಾಂತ ರಾಗಿ ಆಸ್ತಿಪಾಸ್ತಿಗಳ ವಿಷಯವನ್ನು ತೆಗೆದರು. ಹೊಸ ತಾಲ್ಲೂಕನ್ನು ಕೊಳ್ಳುವ ವಿಷಯವನ್ನು ಮುಗಿಸಿ ಕೊನೆಗೆ ಅವರು ಹೇಳಿದರು—"ಜಗದೀ ಶನ ಮನೆಯನ್ನು ನೀನು ಸಮಾಜಕ್ಕೆ ದಾನ ಕೊಟ್ಟಮೇಲೆ, ಇನ್ನು ತಡಮಾ ಡದೆ ಪೂಜಾ ರಜೆ ಮುಗಿಯುವುದರಲ್ಲೇ ಅದನ್ನು ಸ್ವಾಧೀನಪಡಿಸಿಕೊಳ್ಳ ಬೇಕು. ನಿನ್ನ ಅಭಿಪ್ರಾಯವೇನು?"

ವಿಜಯಳು ತಲೆ ತಗ್ಗಿಸಿ ಹೇಳಿದಳು—"ನಿಮಗೆ ಸೂಕ್ತ ಕಂಡಂತೆ ಮಾಡಬಹುದು. ಆದರೆ ಅವರು ದುಡ್ಡು ಕೊಡುವ ವಾಯಿದೆ ಮುಗಿ ಯಿತೇ?"

"ಬಹಳ ದಿನಗಳಾಯಿತು. ಜಗದೀಶ ಸಾಲ ತೀರಿಸಲು ನಿಮ್ಮ ತಂದೆಯಿಂದ ಎಂಟು ವರ್ಷದ ವಾಯಿದೆಯನ್ನು ಕೇಳಿದ್ದ. ಹತ್ತು ಸಾವಿರ ರೂಪಾಯಿ ಸಾಲ ಕೊಂಡು ಅದಕ್ಕೆ ಭೋಗ್ಯಪತ್ರ ಬರೆದಿದ್ದ. ಅಷ್ಟರಲ್ಲಿ ತೀರಿಸಿದರೆ ಸರಿ. ಇಲ್ಲದಿದ್ದರೆ ಅವನ ಮನೆ-ಮಠ, ಆಸ್ತಿ-ಪಾಸ್ತಿಗಳೆಲ್ಲವನ್ನೂ ತೆಗೆದುಕೊಳ್ಳಬೇಕೆಂದು ಕರಾರಾಗಿತ್ತು. ಎಂಟು ವರ್ಷ ಮುಗಿದು ಈಗ ಒಂಭತ್ತನೆಯ ವರ್ಷ ನಡೆಯುತ್ತಿದೆ."

ವಿಜಯಳು ಒಂದು ಕ್ಷಣ ಮುಖ ತಗ್ಗಿಸಿಕೊಂಡು ಸುಮ್ಮನೆ ಇದ್ದು ನಂತರ ಮೃದುವಾಗಿ ಹೇಳಿದಳು—"ಅವರ ಮಗ ಇಲ್ಲೇ ಇದ್ದಾರೆಂದು ಕೇಳಿದ್ದೆ. ಅವರನ್ನು ಕರೆಸಿ ಅವರಿಗೆ ಇನ್ನೂ ಸ್ವಲ್ಪದಿನ ಅವಕಾಶಕೊಟ್ಟು ನೋಡಬಾರದೇಕೆ? ಅವರು ಏನಾದರೂ ಪ್ರಯತ್ನ ಮಾಡಬಹುದು."

ರಾಸಬಿಹಾರಿ ತಲೆಯಲ್ಲಾಡಿಸುತ್ತ ಹೇಳಿದರು—"ಅವನೇನೂ ಮಾಡಲಾರ. ಅವನಿಂದೇನೂ ಆಗುವುದಿಲ್ಲ. ಹಾಗೇನಾದರೂ ಆಗಿದ್ದರೆ........"

ತಂದೆಯ ಮಾತಿನ್ನೂ ಮುಗಿಯುವಷ್ಟರಲ್ಲೇ ವಿಲಾಸ ಗಟ್ಟಿಯಾಗಿ ಕೂಗಿ ಕರ್ಕಶ ದನಿಯಲ್ಲಿ ಹೇಳಿದ—"ಏನಾದರು ಮಾಡಬಹುದಾದರೂ ನಾವೇಕೆ ಅವನಿಗೆ ಅವಕಾಶ ಕೊಡಬೇಕು? ಸಾಲ ತೆಗೆದುಕೊಳ್ಳುವಾಗ ಆ ಕುಡುಕನಿಗೆ ನಾನೆಷ್ಟು ವಾಯಿದೆ ತೆಗೆದುಕೊಂಡಿದ್ದೇನೆ, ಅಷ್ಟರಲ್ಲೇ ಅದನ್ನು ತೀರಿಸುವುದು ಹೇಗೆ ಎಂಬ ಪರಿವೆಯಿರಲಿಲ್ಲವೇ?"

ವಿಜಯಳು ಒಂದುಬಾರಿ ವಿಲಾಸನನ್ನೂ ಇನ್ನೊಂದು ಬಾರಿ ರಾಸಬಿಹಾರಿಯನ್ನೂ ನೋಡಿ ಹೇಳಿದಳು—"ಅವರು ನನ್ನ ತಂದೆಗೆ ಆಪ್ತಮಿತ್ರರಾಗಬೇಕು. ಅವರ ವಿಚಾರದಲ್ಲಿ ಗೌರವವಾಗಿ ಮಾತನಾಡಬೇಕೆಂದು ನನ್ನ ತಂದೆಯವರ ಅಪ್ಪಣೆಯಾಗಿದೆ........"

"ಏನೇ ಆಗಿರಲಿ ಅವನೊಬ್ಬ...." ವಿಲಾಸ ಮತ್ತೆ ಚೀರಿದ.

"ನೀನು ಸುಮ್ಮನಿರಬಾರದೇ ವಿಲಾಸ—" ರಾಸಬಿಹಾರಿ ಮಧ್ಯೆ ಬಾಯಿ ಹಾಕಿದರು.

ವಿಲಾಸ ಉತ್ತರ ಹೇಳಿದ—"ಈ ವ್ಯರ್ಥ ಭಾವಾವೇಶಕ್ಕೆಲ್ಲ ನಾನು ಸೊಪ್ಪು ಹಾಕುವುದಿಲ್ಲ. ಇದರಿಂದ ಯಾರಾದರೂ ಸಿಟ್ಟಾಗಲಿ; ಸತ್ಯವನ್ನು

ಹೇಳುವುದಕ್ಕೆ ಭಯಪಡುವುದಿಲ್ಲ. ಸತ್ಯವನ್ನವಲಂಬಿಸಿದ ಕೆಲಸಗಳನ್ನು ಮಾಡುವುದಕ್ಕೂ ಹಿಂಜರಿಯುವುದಿಲ್ಲ."

ರಾಸಬಿಹಾರಿಗಳು ಎರಡು ಪಕ್ಷಗಳನ್ನೂ ಸಮಾಧಾನಪಡಿಸುವ ಅಭಿಪ್ರಾಯದಿಂದ ನಗುಮುಖ ಮಾಡಿಕೊಂಡು ತಲೆಯಾಡಿಸುತ್ತಾ ಹೇಳಿದರು—" ಅದೇನೋ ಸರಿ........ಉಂ........ಅದು ನಿಜವೇ. ನಮ್ಮ ವಂಶದ ಸ್ವಭಾವವನ್ನು ನಾವು ಬಿಡುವುದಕ್ಕಾಗುತ್ತದೆಯೇ? ತಿಳಿಯಿತೇ ಮಗು ವಿಜಯ, ಅದಕ್ಕಾಗಿಯೇ ನಾನು ಮತ್ತು ನಿಮ್ಮಪ್ಪ ದೇಶಕ್ಕೇ ವಿರೋಧವಾಗಿ ಸತ್ಯ ಮತ್ತು ಧರ್ಮದ ದೀಕ್ಷೆ ಪಡೆಯಲು ಹಿಂಜರಿಯಲಿಲ್ಲ."

ವಿಜಯಳು ಹೇಳಿದಳು—" ಸಾಯುವುದಕ್ಕೆ ಮೊದಲು ಸಾಲಕ್ಕಾಗಿ ತನ್ನ ಬಾಲ್ಯ ಸ್ನೇಹಿತನ ಮನೆಮಠಗಳನ್ನು ಮಾರಬಾರದೆಂದು ತಂದೆಯವರು ಅಪ್ಪಣೆ ಮಾಡಿದ್ದರು." ಎನ್ನುತ್ತಿದ್ದಂತೆ ಅವಳ ಕಣ್ಣುಗಳು ತೇವವಾದವು. ತಂದೆಯ ಅನುರೋಧ ಅವನಿದ್ದಾಗ ವ್ಯರ್ಥವಾಗಿ ಕಾಣುತ್ತಿದ್ದುದು ಈಗ ವಿಜಯಳಿಗೆ ಎಂದಿಗೂ ಮೀರಲಶಕ್ಯವಾದ ಅಪ್ಪಣೆಯಂತೆ ತೋರಿತು.

ವಿಲಾಸ ಹೇಳಿದ—" ಹಾಗಾದರೆ ಅವರೇ ಆ ಸಾಲವನ್ನೆಲ್ಲಾ ರದ್ದು ಮಾಡಲಿಲ್ಲವೇಕೆ? ಹೇಳು."

ವಿಜಯಳು ಇದಕ್ಕೇನೂ ಉತ್ತರ ಕೊಡದೆ ರಾಸಬಿಹಾರಿಯ ಮುಖ ನೋಡಿ ಹೇಳಿದಳು—" ಜಗದೀಶಬಾಬುಗಳ ಮಗನನ್ನು ಕರೆಸಿ ಅವರಿಗೆ ಈ ಎಲ್ಲ ವಿಷಯಗಳನ್ನೂ ಹೇಳಬೇಕೆಂದು ನನ್ನ ಇಷ್ಟ."

ರಾಸಬಿಹಾರಿ ಉತ್ತರ ಕೊಡುವುದಕ್ಕೆ ಮೊದಲೇ ವಿಲಾಸ ನಾಚಿಕೆಗೆಟ್ಟವನಂತೆ ಹೇಳಿದ—" ಅವನು ಇನ್ನೂ ಹತ್ತು ವರುಷದ ಅವಕಾಶವನ್ನು ಕೇಳಿದರೆ ಅದನ್ನೂ ಕೊಡಬೇಕೋ? ಹಾಗಾದರೆ ಈ ಸಮಾಜ ಪ್ರತಿಷ್ಠೆಯ ವಿಷಯ ಸಮುದ್ರದಲ್ಲಿ ವಿಸರ್ಜನೆ ಮಾಡಿಬಿಡಬೇಕೆಂದ ಹಾಗಾಯಿತು."

ವಿಜಯಳು ಇದಕ್ಕೂ ಉತ್ತರ ಕೊಡದೆ ರಾಸಬಿಹಾರಿಗೆ ಹೇಳಿದಳು—" ಒಮ್ಮೆ ನೀವು ಅವರನ್ನು ಕರೆಸಿ ಇದರಲ್ಲಿ ಅವರ ಅಭಿಪ್ರಾಯವೇನೆಂಬುದನ್ನು ತಿಳಿದುಕೊಳ್ಳುತ್ತೀರಾ?"

ರಾಸಬಿಹಾರಿ ಧೂರ್ತರಲ್ಲಿ ಅಗ್ರಗಣ್ಯ. ಆದ್ದರಿಂದ ಮಗನ ಆಚರಣೆಗೆ ಅವನು ಒಳಗೊಳಗೇ ಸಿಟ್ಟಾದರೂ, ಹೊರಗೆ ಅವನ ಅಭಿಪ್ರಾಯಕ್ಕೆ ಸಮ್ಮತಿ ಸೂಚಿಸಲು ಪೀಠಿಕೆ ಹಾಕಿಕೊಂಡು ಹೇಳಿದ—" ನೋಡು ಮಗು,

ನಿಮ್ಮಿಬ್ಬರ ಭಿನ್ನಾಭಿಪ್ರಾಯದಲ್ಲಿ ಮೂರನೆಯವರು ಪ್ರವೇಶಿಸುವುದು ಉಚಿತ ವಲ್ಲ. ಏಕೆಂದರೆ ನಿಮಗೆ ಹಿತವಾದದ್ದನ್ನು ಇಂದಲ್ಲ ನಾಳೆ ನೀವೇ ನಿರ್ಧರಿಸಿ ಕೊಳ್ಳುತ್ತೀರಿ. ಈ ಮುದುಕನ ಪಾರುಪತ್ಯ ಬೇಕಾಗಲಾರದು. ಆದರೆ ಇದರಲ್ಲಿ ಅಭಿಪ್ರಾಯ ಕೊಡಲೇಬೇಕಾದರೆ, ನಿನ್ನದೇ ಇದ್ದರಲ್ಲಿ ತಪ್ಪಾಗು ತ್ತಿದೆಯೆಂದು ಹೇಳದೆ ವಿಧಿಯಿಲ್ಲ. ಜಮೀನುದಾರಿಯನ್ನು ನಿರ್ವಹಿಸುವ ವಿಷಯದಲ್ಲಿ ನಾನೇ ವಿಲಾಸನಿಗೆ ಸೋಲಬೇಕಾಗಿ ಬಂದದ್ದು ಅನೇಕಸಲ ನನ್ನ ಅನುಭವಕ್ಕೆ ಬಂದಿದೆ. ಇದರಲ್ಲಿ ಯಾರ ಅಗತ್ಯ ಹೆಚ್ಚು ಹೇಳು ವಿಜಯ; ನಿನ್ನದೋ ಜಗದೀಶನ ಮಗನದೋ? ಅವನಲ್ಲಿ ಸಾಲ ತೀರಿಸುವ ಶಕ್ತಿಯಿದ್ದರೆ ಅವನೇ ಬಂದು ಒಂದು ಬಾರಿ ಪ್ರಯತ್ನಮಾಡುತ್ತಿರಲಿಲ್ಲವೇ? ನೀನು ಬಂದಿರುವ ವಿಚಾರ ಅವನಿಗೆ ಗೊತ್ತಿದೆ. ನಾವೇ ಈಗ ಅವನಿಗೆ ,ಹೇಳಿಕಳುಹಿಸಿದರೆ ಅವನು ಹೆಚ್ಚುಸಮಯ ಕೇಳುತ್ತಾನೆ. ಇದರಿಂದ ಅವನ ಸಾಲ ತೀರುವುದಿಲ್ಲ. ನಿಮ್ಮಿಬ್ಬರ ಸಮಾಜ ಸ್ಥಾಪನೆಯ ಸಂಕಲ್ಪವೂ ಮುಳುಗಿ ಹೋಗುತ್ತೆ. ಇದು ಸರಿಯಲ್ಲವೇ, ನೀನೇ ಯೋಚಿಸಿ ನೋಡು ವಿಜಯ."

ವಿಜಯಳು ಸುಮ್ಮನೆ ಕುಳಿತಿದ್ದಳು. ಅವಳ ಮನೋಗತವನ್ನು ಊಹಿಸಿ ರಾಸಬಿಹಾರಿ ಹೇಳಿದ—"ಸರಿ ಮಗು ಅವನಿಲ್ಲದಿರುವಾಗ ಯಾವುದೂ ಸಾಧ್ಯವಿಲ್ಲ. ಅವನೇ ಬಂದು ವಾಯಿದೆಯನ್ನು ಕೇಳಿದರೆ, ಆಗ ಬೇಕಾದರೆ ವಿಚಾರ ಮಾಡೋಣ. ಇದಕ್ಕೇನು ಹೇಳುತ್ತೀ ವಿಜಯ?"

"ಸರಿ" ಎಂದು ವಿಜಯಳು ತಲೆಯಲ್ಲಾಡಿಸಿದಳು. ಆದರೆ ಇವಳು ಅದಕ್ಕೆ ಸಮ್ಮತಿ ಕೊಡಲಿಲ್ಲವೆಂದೂ ಅದರಿಂದ ತಿಳಿಯಿತು. ಇಂದು ರಾಸ ಬಿಹಾರಿ ವಿಜಯಳನ್ನು ಗುರುತಿಸಿದ. ಹುಡುಗಿಯ ವಯಸ್ಸು ಚಿಕ್ಕದಾದರೂ ತನ್ನ ಆಸ್ತಿಗೆ ತಾನೇ ಮಾಲೀಕಳೆಂದು ಅವಳು ಚೆನ್ನಾಗಿ ತಿಳಿದಿದ್ದಾಳೆಂದೂ, ಅವಳನ್ನು ಕೈಯಲ್ಲಿ ಹಾಕಿಕೊಳುವುದಕ್ಕೆ ಬಹಳ ಸಮಯ ಹಿಡಿಯುತ್ತ ದೆಂದೂ ಅರಿತುಕೊಂಡ. ಆದ್ದರಿಂದ ಒಂದೊಂದು ವಿಷಯಕ್ಕೂ ಇಷ್ಟು ಚರ್ಚೆ ಮಾಡುವುದು ಸರಿಯಲ್ಲವೆಂದು ಯೋಚಿಸಿ ಅವನು ಸಂಧ್ಯಾಕಾಲದ ಉಪಾಸನೆಯ ನೆಪಮಾಡಿಕೊಂಡು ಮನೆಗೆ ಹೊರಡಲು ಎದ್ದುನಿಂತ. ವಿಜ ಯಳು ಸುಮ್ಮನೆ ನಮಸ್ಕಾರಮಾಡಿ ಎದ್ದುನಿಂತಳು. ಅವರು ಆಶೀರ್ವಾದ ಮಾಡಿ ಹೊರಗೆ ಹೊರಟರು. ವಿಜಯಳು ಒಂದು ಕ್ಷಣ ಸುಮ್ಮನೆ ನಿಂತಿದ್ದು

ಹೇಳಿದಳು—“ ನಾನು ಬಹಳ ಕಾಗದ ಬರೆಯಬೇಕಾಗಿದೆ.... ನನ್ನ ಅವಶ್ಯ ಕತೆ ಏನಾದರೂ ಇದೆಯೇ ? ”

ವಿಲಾಸ ದೃಢಭಾವದಿಂದ ಉತ್ತರ ಹೇಳಿದ–“ ಏನೂ ಇಲ್ಲ, ನೀವು ಹೋಗಬಹುದು ”

“ ನಿಮಗೆ ಚಹ ತರಲು ಹೇಳಲೇ ? ”

“ ಊಹು, ಅದೇನೂ ಬೇಡ.”

“ ಸರಿ, ನಮಸ್ಕಾರ ” ಎಂದು ವಿಜಯಳು ಕೈಮುಗಿದು ಹೊರಗೆ ಹೋದಳು.

೬

ಜಗದೀಶಬಾಬುವಿನ ಮನೆ ಸರಸ್ವತಿ ನದಿಯ ಆಚೆ ದಡದಲ್ಲಿತ್ತು. ಮಗ್ಗುಲು ಹಳ್ಳಿಯಲ್ಲೇ ಇದ್ದರೂ, ನದಿಯ ದಡದಲ್ಲಿ ಕೆಲವು ಬಿದಿರು ಮೆಳೆಗಳು ಬೆಳೆದಿದ್ದರಿಂದ ವನಮಾಲಿಯ ಮನೆ ಮಹಡಿಯ ಮೇಲಿಂದ ಅದು ಕಾಣುತ್ತಿರಲಿಲ್ಲ. ಶರದೃತು ಮುಗಿಯುತ್ತಿದ್ದಂತೆ ಸರಸ್ವತಿನದಿಯಲ್ಲಿದ್ದ ನೀರು ಕ್ರಮಕ್ರಮವಾಗಿ ಕಡಿಮೆಯಾಗುತ್ತಾ ಬರುತ್ತಿದ್ದು, ನದಿಯ ದಡದಲ್ಲಿದ್ದ ರೈತರ ಕಾಲುಹಾದಿಯೂ ಒಣಗಿ ಗಟ್ಟಿಯಾಗುತ್ತಿತ್ತು. ಇಂದು ಸಂಜೆ ವಿಜಯಳು ತನ್ನ ಮುದಿ ಆಳು ಕನ್ನಯ್ಯಸಿಂಹನನ್ನು ಕರೆದುಕೊಂಡು ಈ ಕಾಲುದಾರಿಯಲ್ಲೇ ತಿರುಗಾಡಲು ಹೊರಟಿದ್ದಳು. ಆಚೆ ದಡದಲ್ಲಿದ್ದ ಬಿದಿರುಮೆಳೆ ಮತ್ತು ಖರ್ಜೂರದ ಗಿಡಗಳ ಮರೆಯಲ್ಲಿ ಅಸ್ತಸಾಗುತ್ತಿದ್ದ ಸೂರ್ಯನ ಪ್ರಕಾಶ ಆಗಾಗ್ಗೆ ವಿಜಯಳ ಮುಖದ ಮೇಲೆ ಬೀಳುತ್ತಿತ್ತು. ಅನ್ಯಮನಸ್ಕಳಾಗಿ ಅತ್ತಿತ್ತ ನೋಡುತ್ತಾ ಹೋಗುತ್ತಿದ್ದಾಗ, ಒಂದುಕಡೆ ಗಳ, ಬೊಂಬುಗಳನ್ನು ಸೇರಿಸಿ ನದಿ ದಾಟಲು ಸೇತುವೆಯನ್ನು ಮಾಡಿದ್ದರು. ಅದನ್ನು ನೋಡಲು ಅದರ ಹತ್ತಿರ ವಿಜಯಳು ಹೋದಾಗ ಅದಕ್ಕೆ ತೀರ ಸಮೀಪದಲ್ಲಿ ಒಬ್ಬ ವ್ಯಕ್ತಿ ಬಹಳ ಆಸಕ್ತಿಯಿಂದ ಮೀನು ಹಿಡಿಯುತ್ತಿದ್ದುದು ಕಣ್ಣಿಗೆ ಬಿತ್ತು. ಹತ್ತಿರ ಹೋಗುತ್ತಲೇ ಆ ವ್ಯಕ್ತಿ ಮುಖವೆತ್ತಿ ನಮಸ್ಕರಿಸಿದ. ಇಬ್ಬರ ದೃಷ್ಟಿ ಒಂದಾದ ಕೂಡಲೆ ಅವಳ ಮುಖ ನಸುಗೆಂಪಾಯಿತು. ಆ ವ್ಯಕ್ತಿಯು ಅಂದು ದುರ್ಗಾಪೂಜೆಯ ಸಂಬಂಧದಲ್ಲಿ ಜಗಳವಾಡಿದ ಪೂರ್ಣಗಾಂಗೂಲಿಯ ಅಳಿಯ. ವಿಜಯ ಪ್ರತಿ ನಮಸ್ಕಾರ ಮಾಡಿದ ಕೂಡಲೆ ಅವನು ಎದ್ದು ಹತ್ತಿರ ಬಂದು ನಗು ಮುಖದಿಂದ

ಹೇಳಿದ—"ಸಂಜೆಯ ಹೊತ್ತಿನಲ್ಲಿ ತಿರುಗಾಡಲು ನದೀತೀರವೇನೋ ಉತ್ತಮವಾದದ್ದೆ. ಆದರೆ ಇಲ್ಲಿ ಈಗ ಮಲೇರಿಯದ ಭಯವೂ ಹೆಚ್ಚಾಗಿದೆ. ಇದನ್ನು ನಿಮಗೆ ಮುಂಚಿತವಾಗಿ ಯಾರೂ ತಿಳಿಸಲಿಲ್ಲವೆಂದು ತೋರುತ್ತೆ."

ವಿಜಯಳು ಮೊದಲು 'ಉಹುಂ' ಎಂದು ಆಮೇಲೆ ಸುದಾರಿಸಿಕೊಂಡು ಹೇಳಿದಳು—"ಮಲೇರಿಯ ಮನುಷ್ಯರನ್ನು ಗುರುತಿಸಿ ಹಿಡಿದುಕೊಳ್ಳುವುದಿಲ್ಲ. ನನಗೇನೋ ತಿಳಿಯದೆ ಬಂದೆ, ನೀವು ತಿಳಿದೂ ನೀರಿನ ಅಂಚಿನಲ್ಲೇ ಕುಳಿತಿದ್ದೀರಲ್ಲ! ಎಲ್ಲಿ ಎಂತಹ ಮೀನು ಹಿಡಿದಿದ್ದೀರಿ? ನೋಡೋಣ."

ಆ ವ್ಯಕ್ತಿ ನಕ್ಕು ಹೇಳಿದ—"ಒಳ್ಳೆಯ ಮೀನು. ಆದರೆ ಎರಡು ಗಂಟೆಗೆ ಎರಡೇ ಸಿಕ್ಕಿದ್ದು. ಕೂಲಿಗಾಗಿ ಹಿಡಿಯಲಿಲ್ಲ. ಏನು ಮಾಡುವುದು ಹೇಳಿ, ನಿಮ್ಮಂತೆ ನನ್ನನ್ನೂ ಪರಸ್ಥಳದವನೆನ್ನಬಹುದು. ಹೊರಗೇ ಎಲ್ಲ ಕಾಲ ಕಳೆದದ್ದಾಯಿತು. ಇಲ್ಲಿ ಅಷ್ಟಾಗಿ ಯಾರ ಪರಿಚಯವೂ ಇಲ್ಲ ........ಸಾಯಂಕಾಲವನ್ನು ಹೇಗಾದರೂ ಸಮೆಸಬೇಕಲ್ಲ."

ವಿಜಯಳು ಕೊರಳು ಕೊಂಕಿಸಿ ನಗುತ್ತ ಹೇಳಿದಳು—"ನನ್ನ ಪರಿಸ್ಥಿತಿಯೂ ಹೀಗೇ. ನಿಮ್ಮ ಮನೆ ಪೂರ್ಣಬಾಬುಗಳ ಮನೆಯ ಹತ್ತಿರವೇ ಇದೆಯೇನೋ ಅಲ್ಲವೇ?"

"ಉಹುಂ, ನನ್ನ ಮನೆ ಅಗೋ ದಿಘಡಾದಲ್ಲಿದೆ. ಈ ಜೊಂಬಿನ ಸೇತುವೆಯ ಮೇಲೆ ಹೋಗಬೇಕು."

ಆ ಊರಿನ ಹೆಸರು ಕಿವಿಗೆ ಬೀಳುತ್ತಲೇ ವಿಜಯಳು ಕೇಳಿದಳು—"ಹಾಗಾದರೆ ಜಗದೀಶಬಾಬುಗಳ ಮಗ ನರೇಂದ್ರರ ಪರಿಚಯ ನಿಮಗಿರಬಹುದಲ್ಲವೇ?"

ಅವನು ತಲೆಯಲ್ಲಾಡಿಸಿದ ಕೂಡಲೆ ಅವಳು ಬಹಳ ಕುತೂಹಲದಿಂದ—"ಅವನೆಂತಹ ಮನುಷ್ಯರು?" ಎಂದು ಕೇಳಿದಳು.

ಆದರೆ ಇದನ್ನು ಕೇಳಿದ್ದಕ್ಕಾಗಿ ಅವಳಿಗೇ ನಾಚಿಕೆಯಾಯಿತು. ಇದು ಆ ವ್ಯಕ್ತಿಗೆ ತಿಳಿಯದಿರಲಿಲ್ಲ. ಅವನು ನಕ್ಕು ಹೇಳಿದ—"ಅವನ ಮನೆಯನ್ನು ನೀವು ಸಾಲಕ್ಕಾಗಿ ತೆಗೆದುಕೊಂಡುಬಿಟ್ಟಿದ್ದೀರಿ. ಈಗ ಅವನ

ವಿಷಯ ವಿಚಾರಿಸುವುದರಿಂದೇನು ಫಲ? ಆದರೆ ಅದನ್ನು ತೆಗೆದುಕೊಂಡಿದ್ದರ ಸದುದ್ದೇಶ ಇಲ್ಲಿ ಎಲ್ಲರಿಗೂ ಗೊತ್ತಿದೆ."

"ತೆಗೆದುಕೊಂಡೆನೆಂದು ಇಲ್ಲೆಲ್ಲ ಸುದ್ದಿ ಹರಡಿದೆಯೇ?"

"ಓಹೋ, ಹೌದು. ಜಗದೀಶಬಾಬುಗಳ ಆಸ್ತಿಯೆಲ್ಲ ನಿಮ್ಮ ತಂದೆಯವರಲ್ಲಿ ಅಡವಿತ್ತು. ಅವರ ಮಗನಿಗೆ ಅದನ್ನು ತೀರಿಸುವ ಶಕ್ತಿಯಿಲ್ಲ. ಅಲ್ಲದೆ ವಾಯಿದೆಯೂ ಪೂರೈಸಿದೆ. ಇದು ಇಲ್ಲಿ ಎಲ್ಲರಿಗೂ ತಿಳಿದ ವಿಷಯ."

"ಮನೆ ಹೇಗಿದೆ?"

"ಕೊರತೆಯಿಲ್ಲ, ಬಹಳ ದೊಡ್ಡ ಮನೆ, ನೀವು ಮಾಡಿರುವ ಉದ್ದೇಶಕ್ಕೆ ತಕ್ಕ ಮನೆ, ಸ್ವಲ್ಪ ಮುಂದೆ ಹೋಗಿ ಕಾಣುತ್ತೆ."

ಮುಂದೆ ಹೋಗುತ್ತಾ ವಿಜಯಳು ಹೇಳಿದಳು—"ನೀವು ಆ ಹಳ್ಳಿಯವರೆಂದಮೇಲೆ, ನಿಮಗೆಲ್ಲ ತಿಳಿದೇ ಇರುತ್ತೆ. ನರೇಂದ್ರಬಾಬುಗಳು ವಿಲಾಯತಿಯಿಂದ ಉತ್ತಮ ದರ್ಜೆಯಲ್ಲಿ ಡಾಕ್ಟರ್ ಪರೀಕ್ಷೆ ಪಾಸುಮಾಡಿ ಬಂದಿದ್ದಾರೆಂದು ತಿಳಿಯಿತು. ಅವರೆಲ್ಲಾದರೂ ಸರಿಯಾದ ಸ್ಥಳದಲ್ಲಿ ಪ್ರಾಕ್ಟೀಸ್ ಮಾಡಿ, ಇನ್ನೂ ಸ್ವಲ್ಪ ವಾಯಿದೆ ಪಡೆದು ಅವರ ತಂದೆಗಳ ಸಾಲವನ್ನು ತೀರಿಸಬಾರದೇಕೆ?"

ಆ ವ್ಯಕ್ತಿ ತಲೆಯಲ್ಲಾಡಿಸಿ ಹೇಳಿದ—"ಉಹುಂ, ಅದೇನೂ ಸಂಭವವಿಲ್ಲ. ಅವರಿಗೆ ಪ್ರಾಕ್ಟೀಸ್ ಮಾಡುವ ಇಷ್ಟವಿದ್ದಂತೆ ಇಲ್ಲ."

ವಿಜಯಳು ಆಶ್ಚರ್ಯದಿಂದ ಕೇಳಿದಳು—"ಹಾಗಾದರೆ ಅವರ ಅಭಿಪ್ರಾಯವಾದರೂ ಏನು? ಇಷ್ಟು ಖರ್ಚುಮಾಡಿ ವಿಲಾಯತಿಗೆ ಹೋಗಿ ಕಷ್ಟಪಟ್ಟು ಪಾಸುಮಾಡಿದ್ದರಿಂದ ಏನು ಪ್ರಯೋಜನವಾಯಿತು? ಅವರೇನೂ ಉಪಯೋಗವಿಲ್ಲವೆಂದು ತೋರುತ್ತೆ."

ಆ ಹೊಸಬ ತುಸು ನಕ್ಕು ಹೇಳಿದ—"ಇರಬಹುದು. ನರೇಂದ್ರಬಾಬು ಕೂಡ ಚಿಕಿತ್ಸೆಗಳನ್ನು ಹೊಸದಾಗಿ ಕಂಡು ಹಿಡಿದು ಅನೇಕರಿಗೆ ಉಪಕಾರ ಮಾಡಬೇಕೆಂದು ಮಾಡಿದ್ದಾರೆಂದು ಕೇಳಿದ್ದೇನೆ. ಅವರು ಅನೇಕ ಬಗೆಯ ಯಂತ್ರಗಳನ್ನು ಇಟ್ಟುಕೊಂಡು ಹಗಲೂ-ರಾತ್ರಿ ಶ್ರಮಪಡುತ್ತಿರುತ್ತಾರಂತೆ."

ವಿಜಯಳು ಚಕಿತಳಾಗಿ ಕೇಳಿದಳು—"ಇದು ದೊಡ್ಡ ವಿಷಯ.

ಮನೆ-ಮಠ ಹೋದಮೇಲೆ ಅವರು ಹೇಗೆ ಮಾಡುತ್ತಾರೆ? ಇದಕ್ಕೆ ಅವರು ಕೆಲಸ ಮಾಡಲೇಬೇಕು. ಅವರು ವಿಲಾಯತಿಗೆ ಹೋಗಿದ್ದರಿಂದ ಅವರಿಗೆ ಇಲ್ಲಿಯವರು ಬಹಿಷ್ಕಾರ ಹಾಕಿದ್ದಾರೆಯೇ?"

"ಹೌದು. ನನ್ನ ಮಾವ ಪೂರ್ಣಬಾಬು ಅವರಿಗೂ ಒಂದು ರೀತಿಯಲ್ಲಿ ಆತ್ಮೀಯರಾಗಬೇಕು. ಅವರೂ ಪೂಜೆಗೆ ಅವರನ್ನು ಕರೆಯುವ ಸಾಹಸ ಮಾಡಲಿಲ್ಲ. ಆದರೆ ಇದರಿಂದ ಅವರಿಗೇನೂ ನಷ್ಟವಿಲ್ಲ ಅವರು ತಮ್ಮ ಕೆಲಸದಲ್ಲಿ ತೊಡಗಿರುತ್ತಾರೆ. ಬಿಡುವಾದಾಗ ಚಿತ್ರ ಬರೆಯುತ್ತಾರೆ ಮನೆ ಬಿಟ್ಟು ಹೊರಹೊರಡುವುದೇ ಇಲ್ಲ. ನೋಡಿ, ಅದೇ ಅವರ ಮನೆ" ಎಂದು ಅವನು ಗಿಡ-ಮರಗಳ ಮಧ್ಯೆ ಮರೆಯಾಗಿದ್ದ ಒಂದು ದೊಡ್ಡ ಮನೆಯನ್ನು ತೋರಿಸಿದ.

ಅಷ್ಟರಲ್ಲಿ ಆ ವೃದ್ಧ ಸೇವಕ—"ತಾವು ಬಹಳ ದೂರ ಬಂದೆವೆಂದೂ ಹಿಂದಿರುಗುವಷ್ಟರಲ್ಲಿ ಕತ್ತಲಾಗುವುದೆಂದೂ" ಹರಕು ಮುರಕು ಬಂಗಾಲಿ ಭಾಷೆಯಲ್ಲಿ ಹೇಳಿದ.

ಆ ವ್ಯಕ್ತಿ ತಿರುಗಿ ನಿಂತು ಹೇಳಿದ—"ಹೌದು, ಮಾತನಾಡುತ್ತ ನಾವು ಬಹಳ ದೂರ ಬಂದುಬಿಟ್ಟೆವು."

ಅವನೂ ಅದೇ ಸೇತುವೆಯ ಮೂಲಕವೇ ಹಳ್ಳಿಗೆ ಹೋಗುಬೇಕಾಗಿದ್ದುದರಿಂದ ಹಿಂದಿರುಗುವಾಗಲೂ ಜೊತೆಗೆ ಬಂದ. ವಿಜಯಳು ಮನಸ್ಸಿನಲ್ಲಿ ಏನೋ ಯೋಚಿಸಿ ಕೇಳಿದಳು—"ಹಾಗಾದರೆ ಅವರಿಗೆ ಯಾವ ಆತ್ಮೀಯರ ಮನೆಯಲ್ಲಿ ಆಶ್ರಯ ಪಡೆಯುವುದಕ್ಕೂ ಅನುಕೂಲವಿಲ್ಲವೇ?"

"ಉಹುಂ, ಸ್ವಲ್ಪವೂ ಇಲ್ಲ."

ವಿಜಯಳು ಸ್ವಲ್ಪ ದೂರ ಹೋಗಿ ಹೇಳಿದಳು—"ಅವರು ಯಾರ ಹತ್ತಿರ ಹೋಗುವುದಕ್ಕೂ ಇಷ್ಟಪಡುವುದಿಲ್ಲವೆಂಬುದು ನಿಜ. ಇಲ್ಲದಿದ್ದರೆ ಅವರು ಈ ತಿಂಗಳ ಕೊನೆಯಲ್ಲೇ ಮನೆ ಬಿಟ್ಟುಬಿಡಬೇಕೆಂದು ನೋಟೀಸು ಜಾರಿಮಾಡಿತ್ತು. ಇನ್ನಾರಾದರೂ ಆಗಿದ್ದರೆ, ನಮ್ಮೊಂದಿಗೆ ಒಮ್ಮೆ ಭೇಟಿ ಮಾಡುವ ಪ್ರಯತ್ನವನ್ನಾದರೂ ಮಾಡುತ್ತಿದ್ದರು.

"ಅವರಿಗೆ ಅದರ ಅಗತ್ಯವಿಲ್ಲದಿರಬಹುದು, ಅಥವಾ ಈಗ ಭೇಟಿ ಮಾಡಿ ಪ್ರಯೋಜನವೇನು? ಇನ್ನು ನೀವು ಅವರನ್ನು ಮನೆಯಲ್ಲಿರಲು ಅವಕಾಶಕೊಡಲಾರಿರೆಂದು ಅವರು ಯೋಚಿಸಿರಬಹುದು."

" ಅವಕಾಶಕೊಡದಿದ್ದರೂ, ಇನ್ನು ಸ್ವಲ್ಪ ದಿವಸ ಇರಲು ಅನುಕೂಲ ಮಾಡಬಹುದಾಗಿತ್ತು. ಸಾವಿರಾರು ರೂಪಾಯಿ ಸಾಲವಿದ್ದರೂ ಒಬ್ಬ ಮನುಷ್ಯನನ್ನು ಮನೆಮಠಗಳಿಲ್ಲದಂತೆ ಮಾಡಲು ಯಾರಿಗಾದರೂ ಕಷ್ಟವಾಗುತ್ತೆ. ನಿಮ್ಮ ಮಾತಿನಿಂದ ನಿಮಗೆ ಅವರ ಅಂತರಂಗ ಪರಿಚಯವಿದ್ದಂತೆ ತೋರುತ್ತೆ ಅಲ್ಲವೇ ? "

ಆ ವ್ಯಕ್ತಿ ಸುಮ್ಮನೆ ನಕ್ಕು ಯಾವ ಮಾತನ್ನೂ ಆಡಲಿಲ್ಲ. ಅವರು ಸೇತುವೆಯ ಹತ್ತಿರ ಬಂದು ತಲಪಿದರು. ಅವನು ಮೀನಿನ ಗಾಳವನ್ನು ಎತ್ತಿಕೊಂಡು ಹೇಳಿದ—" ಇದೇ ನಮ್ಮ ಹಳ್ಳಿಗೆ ಹೋಗುವ ಹಾದಿ " ಎಂದು ಕೈಯೆತ್ತಿ ನಮಸ್ಕರಿಸಿ ಆ ಸೇತುವೆಯ ಮೇಲಿಂದ ಹೇಗೋ ಪಾರಾಗಿ ಕಾಡುಹಾದಿಯಲ್ಲಿ ಮಾಯವಾದ.

ವೃದ್ಧ ನೌಕರ ಕನ್ನಯ್ಯಸಿಂಹ ವಿಜಯಳನ್ನು ಬಾಲ್ಯದಲ್ಲಿ ತೊಡೆಯ ಮೇಲೆ ಎತ್ತಿ ಆಡಿಸಿ ದೊಡ್ಡವಳನ್ನಾಗಿ ಮಾಡಿದ್ದ. ನ್ಯಾಯೋಚಿತವಾದ ನೌಕರಿಯಲ್ಲೂ ಬಹಳ ಹಳಬನಾಗಿದ್ದ. ಅವನು ಹತ್ತಿರ ಸರಿದು ಕೇಳಿದ ...." ಈ ಬಾಬುಗಳು ಯಾರು ಮಗು ? "

ವಿಜಯಳು ಅನ್ಯಮನಸ್ಕಳಾಗಿದ್ದರಿಂದ ಅವನ ಮಾತು ಅವಳ ಕಿವಿಯ ಮೇಲೆ ಬೀಳಲಿಲ್ಲ. ಈ ಅಂಧಕಾರಮಯವಾದ ನದೀ ತೀರದ ನಿಸ್ತಬ್ಧತೆ ಅವಳ ಗಮನಕ್ಕೇ ಬರಲಿಲ್ಲ. ಅವಳು ಸ್ವಪ್ನ ಮುಗ್ಧಳಂತೆ ಆಲೋಚಿಸುತ್ತಿದ್ದಳು—" ಇವನಾರು ? ಇನ್ನಾವಾಗ ಮತ್ತೆ ಇವನ ಭೇಟಿ ? "

೭

ರಾಸಬಿಹಾರಿ ಹೇಳಿದ—" ನಾವೇ ನೋಟೀಸು ಕೊಟ್ಟು, ನಾವೇ ಅದನ್ನು ರದ್ದುಗೊಳಿಸಿದರೆ ಇತರ ರೈತರಿಗೆ ಹೇಗೆ ಕಾಣುತ್ತೆ ? ನೀನೇ ಯೋಚಿಸಿ ನೋಡು ಮಗು ? "

" ಈ ಅಭಿಪ್ರಾಯದ ಒಂದು ಕಾಗದವನ್ನು ಬರೆದು ಅವರಿಗೇಕೆ ಕಳುಹಿಸಬಾರದು ? ಅವರು ಅವಮಾನದ ಭಯದಿಂದ ಇಲ್ಲಿಗೆ ಬರುವುದಿಲ್ಲವೆಂದು ನನಗೆ ಅನಿಸುತ್ತದೆ."

" ಅವಮಾನವೆಂತಹುದು ? "

" ಅವರ ಪ್ರಾರ್ಥನೆಯನ್ನು ನಾವು ಮನ್ನಿಸಲಾರೆವೆಂದು ಅವರು ಯೋಚಿಸಿದ್ದಾರೆ."

ರಾಸಬಿಹಾರಿ ವ್ಯಂಗ್ಯವಾಗಿ ಹೇಳಿದ—" ಅವನೊಬ್ಬ ಮಹಾಮಾನಿ.

ಅದಕ್ಕೆ ನಾವೇ ತಲೆಯಮೇಲೆ ಕೂಡಿಸಿಕೊಂಡು ಅವನನ್ನು ಮನೆಯಲ್ಲೇ ಇರೆಂದು ಪ್ರಾರ್ಥಿಸಬೇಕೇನು ?"

"ಅದರಲ್ಲೂ ತಪ್ಪಿಲ್ಲ ಕಕ್ಕ. ಅಯಾಚಿತವಾಗಿಯೇ ಕರುಣೆ ತೋರುವುದರಲ್ಲಿ ನಾಚಿಕೆಯೇನು ?"

"ನಾಚಿಕೆ ಇಲ್ಲದಿದ್ದರೆ ಹೋಗಲಿ. ಆದರೆ ನಾವು ಸಮಾಜ ಸ್ಥಾಪನೆ ಮಾಡಬೇಕೆಂದು ಮಾಡಿದ ನಿಶ್ಚಯಕ್ಕೇನು ಮಾಡಬೇಕು ?"

"ಅದಕ್ಕೇನಾದರೂ ಬೇರೆ ವ್ಯವಸ್ಥೆ ಮಾಡಿದರಾಯಿತು."

ರಾಸಬಿಹಾರಿ ಮನಸ್ಸಿನಲ್ಲೇ ಬಹಳ ಸಿಡಗುಟ್ಟುತ್ತಾ ಹೊರಗೆ ಮಾತ್ರ ನಗುಮುಖದಿಂದ ಹೇಳಿದ—"ನಿಮ್ಮಪ್ಪ ನಿನಗೆ ಬೇಕಾದಷ್ಟು ದುಡ್ಡಿಟ್ಟು ಹೋಗಿದ್ದಾನೆ. ಆದ್ದರಿಂದ ನೀನು ಬೇರೆ ವ್ಯವಸ್ಥೆ ಮಾಡಬಲ್ಲೆ. ಅದು ನನಗೂ ಅರ್ಥವಾಗುತ್ತೆ. ಆದರೆ ನೀನು ಕಣ್ಣಿಂದ ಸಹ ನೋಡದಿದ್ದ ಮನುಷ್ಯನಿಗಾಗಿ ನಮ್ಮೆಲ್ಲರ ಅಭಿಪ್ರಾಯವನ್ನೂ ಮೀರಿ ಇಷ್ಟು ಒದ್ದಾಡುವುದೇಕೆ? ದೇವರ ದಯೆಯಿಂದ ನಿನಗೆ ಇನ್ನೂ ಹತ್ತಾರು ರೈತರು ಇದ್ದಾರೆ; ಇನ್ನೂ ಜನಗಳಿದ್ದಾರೆ. ಎಲ್ಲರಿಗೂ ನೀನು ಹೀಗೆ ಅನುಕೂಲ ಮಾಡಿಕೊಡಬಲ್ಲೆಯಾ ? ಹಾಗೆ ಮಾಡುವುದರಿಂದ ಒಳ್ಳೆಯದಾಗುತ್ತದೆಯೇ ? ಇದಕ್ಕೆ ಮೊದಲು ಉತ್ತರ ಹೇಳು ಮಗು."

"ಇದು ತಂದೆಯವರ ಅಂತಿಮ ಆಜ್ಞೆಯೆಂದು ಮೊದಲೇ ಹೇಳಿದ್ದೇನೆ. ಅದಲ್ಲದೆ........"

"ಅದಲ್ಲದೆ ಏನು ?"

ಹಾಸ್ಯ ಮಾಡುತ್ತಾರೆಂಬ ಭಯದಿಂದ ನರೇಂದ್ರ ಔಷಧಗಳ ನೂತನ ಆವಿಷ್ಕಾರವನ್ನು ಮಾಡುವ ವಿಷಯ ಅವಳು ಹೇಳದೆ ಇಷ್ಟೇ ಹೇಳಿದಳು— "ಅವರು ಬಹಿಷ್ಕೃತರಂತೆ. ಮನೆಯಿಲ್ಲದಿದ್ದರೆ ಯಾವ ಆತ್ಮೀಯರ ಮನೆಯಲ್ಲೂ ಆಶ್ರಯ ಪಡೆಯಲು ಅವಕಾಶವಿಲ್ಲವಂತೆ. ಅಲ್ಲದೆ 'ಗೃಹಹೀನ' ನೆಂಬ ಶಬ್ದ ಕಿವಿಗೆ ಬಿದ್ದರೆ ನನಗೆ ಬಹಳ ಕಷ್ಟವಾಗುತ್ತೆ ಕಕ್ಕ."

ರಾಸಬಿಹಾರಿ ತನ್ನ ದನಿಯಲ್ಲಿ ಕರುಣೆಯನ್ನು ಸೂಚಿಸುತ್ತಾ ಹೇಳಿದ —"ನಿನಗೆ ಇಷ್ಟು ಚಿಕ್ಕ ವಯಸ್ಸಿನಲ್ಲೇ ಇಷ್ಟು ಕಷ್ಟವಾದರೆ, ನನಗಿಷ್ಟು ವಯಸ್ಸಾಗಿರುವಾಗ ನನಗಿನ್ನೆಷ್ಟು ದುಃಖವಾಗಬಹುದು. ನೀನೇ ಯೋಚಿಸು ವಿಜಯ. ನನ್ನ ಜೀವನದ ಇಷ್ಟು ದೀರ್ಘಾವಧಿಯಲ್ಲೇ ನಾನೇನು ವೊಟ್ಟ್ಕ

ಮೊದಲಿಗೆ ಈ ಅಪ್ರಿಯ ಕಠೋರ ಕರ್ತವ್ಯವನ್ನು ಮಾಡಬೇಕಾಗಿ ಬಂದಿದೆಯೇ ವಿಜಯ? ಹಾಗೆಂದಿಗೂ ಅಲ್ಲ. ಕರ್ತವ್ಯ ನಮಗೆ ಯಾವಾಗಲೂ ಕರ್ತವ್ಯವೇ! ವನಮಾಲಿ ನನ್ನ ಮೇಲೆ ಹೊರಿಸಿರುವ ಘೋರ ಕರ್ತವ್ಯದ ಹೊರೆಯನ್ನು ನನ್ನ ಜೀವನದ ಅಂತ್ಯಕಾಲದವರೆಗೂ ಹೊತ್ತೇ ತೀರಬೇಕು. ಇದರಿಂದ ಎಷ್ಟೇ ಕಷ್ಟವಾಗಲಿ ಅದಕ್ಕಾಗಿ ಹಿಂದೆ ಮುಂದೆ ನೋಡುವಂತಿಲ್ಲ. ನನ್ನ ಪೂರ್ಣ ಹೊಣೆಗಾರಿಕೆಯಿಂದಾದರೂ ನನ್ನನ್ನು ಮುಕ್ತನನ್ನಾಗಿ ಮಾಡು. ಇಲ್ಲದಿದ್ದರೆ ನಾನಂತೂ ನಿನ್ನ ಈ ಅಸಂಗತ ಪ್ರಸ್ತಾಪವನ್ನೆಂದಿಗೂ ಒಪ್ಪುವುದಿಲ್ಲ.

ವಿಜಯಳು ತಲೆ ತಗ್ಗಿಸಿ ಸುಮ್ಮನೆ ಕುಳಿತಿದ್ದಳು. ತಂದೆಯ ಅಪರಾಧಕ್ಕಾಗಿ ನಿರಪರಾಧಿಯಾದ ಮಗನನ್ನು ಗೃಹಹೀನನನ್ನಾಗಿ ಮಾಡುವ ಸಂಕಲ್ಪದಿಂದ ಅವಳಿಗೆ ಆದ ದುಃಖದ ಮುಂದೆ, ಈ ಮುದುಕ ಅದಕ್ಕಿಂತ ಎಂಟುಪಾಲು ದುಃಖವನ್ನು ಸಹಿಸಿಯಾದರೂ ತನ್ನ ಕರ್ತವ್ಯಕ್ಕಾಗಿ ಟೊಂಕ ಕಟ್ಟಿ ನಿಂತಿದ್ದಾನೆಂಬುದು ಅವಳಿಗೆ ಸರಿಯಾಗಿ ಅರ್ಥವಾಗಲಿಲ್ಲ. ಇದು ನಿಸ್ಸಹಾಯನಾದ ಹತಭಾಗ್ಯನೊಬ್ಬನ ಮೇಲೆ ಕರುಣೆಯಿಲ್ಲದೆ ಮಾಡಿದ ಪ್ರಬಲ ಆಘಾತವಾಗಿ ತೋರಿತು. ಆದರೆ ಇದನ್ನು ಬದಿಗೊತ್ತಿ ತನ್ನ ಮನ ಬಂದಂತೆ ನಡೆಯುವ ಸಾಹಸವೂ ಅವಳಲ್ಲಿರಲಿಲ್ಲ. ಹಳ್ಳಿಯಲ್ಲಿ ಅತ್ಯಂತ ವೈಭವದಿಂದ ಬ್ರಹ್ಮಮಂದಿರದ ಪ್ರತಿಷ್ಠೆಯನ್ನು ಮಾಡಿ ಖ್ಯಾತಿ ಪಡೆಯಬೇಕೆಂಬ ಹಂಬಲದಿಂದ ವೃದ್ಧ ತಂದೆಯನ್ನು ಮುಂದೆ ಬಿಟ್ಟು ವಿಲಾಸ ಹೀಗೆ ಮಾಡುತ್ತಿದ್ದಾನೆಂಬುದೂ ಅವಳಿಗೆ ತಿಳಿಯದಿರಲಿಲ್ಲ.

ರಾಸಬಿಹಾರಿ ಇನ್ನೇನೂ ಹೇಳಲಿಲ್ಲ. ವಿಜಯಳೂ ಸ್ವಲ್ಪಹೊತ್ತು ಸುಮ್ಮನೆ ಕುಳಿತಿದ್ದು ತನ್ನ ಮೂಕ ಒಪ್ಪಿಗೆಯನ್ನು ಕೊಟ್ಟರೂ ಅವಳ ಅಂತರಂಗದಲ್ಲಿ ಈ ವೃದ್ಧನ ವಿಷಯದಲ್ಲಿ ಅಶ್ರದ್ಧೆಯೂ, ಅವನ ಮಗನ ವಿಷಯದಲ್ಲಿ ತಿರಸ್ಕಾರ ಭಾವನೆಯೂ ಮೂಡಿತು.

ರಾಸಬಿಹಾರಿ ಕಾರ್ಯಶೀಲ. ಆದ್ದರಿಂದ ಮಾತಿನಲ್ಲಿ ಯಜಮಾನರನ್ನು ಸಂಪೂರ್ಣ ಸೋಲಿಸಿದರೂ, ಕೆಲಸದ ಸಮಯದಲ್ಲಿ ಅಷ್ಟು ನಿಷ್ಠೂರವಾಗಿರುವುದಕ್ಕಾಗುವುದಿಲ್ಲವೆಂಬುದು ಅವನಿಗೆ ಚೆನ್ನಾಗಿ ಗೊತ್ತು. ಇಲದಿದ್ದರೆ ಅದು ಸರಿಹೋಗುವುದಿಲ್ಲ. ಆದ್ದರಿಂದ ಔದಾರ್ಯ ತೋರಿಸಿ ಲಾಭ ಪಡೆಯುವುದಕ್ಕೆ ಅದೇ ತಕ್ಕ ಸಮಯವೆಂದು ತಿಳಿದು, ವಿಜಯಳ

ಮುಖ ನೋಡಿ ತುಸು ನಕ್ಕು ಹೇಳಿದ—"ನಿನ್ನ ಪದಾರ್ಥವನ್ನು ದಾನ ಕೊಡುತ್ತೇನೆಂದರೆ ನಾನೇಕೆ ಅಡ್ಡಿ ಮಾಡಲಿ ಮಗು? ವಿಲಾಸ ಮಾಡಬೇಕೆಂದಿದ್ದುದು ಸ್ವಾರ್ಥಕ್ಕಾಗಿಯಾಗಲೀ, ಸಿಟ್ಟಿನಿಂದಾಗಲೀ ಅಲ್ಲವೆಂದು ಹೇಳಿದೆ ಅಷ್ಟೆ. ಮುಂದೆ ನನ್ನ ಆಸ್ತಿ, ನಿಮ್ಮ ತಂದೆಯ ಆಸ್ತಿಗಳೆರಡೂ ಒಂದಾಗಿ ನಿಮ್ಮಿಬ್ಬರ ಕೈಗೆ ಬರುತ್ತೆ. ಆಗ ಬುದ್ಧಿವಾದ ಬೇಕೆಂದರೂ ಈ ಮುದುಕನನ್ನು ನೀನು ಕಾಣಲಾರೆ. ಆಗ ನಿಮ್ಮಿಬ್ಬರಲ್ಲಿ ಭಿನ್ನಾಭಿಪ್ರಾಯ ಬರದಿರಲಿ. ನೀನು ನಿನ್ನ ಸ್ವಾಮಿಯ ಎಲ್ಲ ಕೆಲಸಗಳನ್ನೂ ಚೆನ್ನಾಗಿ ಅರಿತು ಶ್ರದ್ಧೆಯಿಂದ ಮಾಡುವಂತಾಗಬೇಕೆಂದೇ ನನ್ನ ಆಸೆ. ಇಲ್ಲದಿದ್ದರೆ ದಾನ ಮಾಡುವುದು, ದಯೆ ತೋರುವುದು ಅವನಿಗೂ ಗೊತ್ತಿದೆ; ನನಗೂ ತಿಳಿದಿದೆ. ದಾನವನ್ನು ಅಪಾತ್ರರಿಗೆ ಮಾಡಿದರೆ ಅದರಿಂದ ಏನೂ ಉಪಯೋಗವಿಲ್ಲವೆಂಬುದನ್ನು ತಿಳಿಸುವುದೇ ನನ್ನ ಉದ್ದೇಶ. ನಾನು ಜಗದೀಶನ ಮಗನಿಗೇಕೆ ಸ್ವಲ್ಪವೂ ದಯೆ ತೋರಲು ಇಷ್ಟಪಡುವುದಿಲ್ಲ. ಮತ್ತು ಅದು ಅಸಂಭವವೆಂಬುದು ಈಗಲಾದರೂ ತಿಳಿಯಿತೇ ವಿಜಯ?"

ಇಷ್ಟು ಹೇಳಿ ಆ ವೃದ್ಧ ನಗುತ್ತ ವಿಜಯಳ ಮುಖವನ್ನು ನೋಡಿದ. ಈ ಅರ್ಥಪೂರ್ಣವಾದ ಯುಕ್ತಿ ಯುಕ್ತವಾದ ಉಪದೇಶಕ್ಕೆ ಮರುನುಡಿಯುವುದಕ್ಕಾಗದೇ ವಿಜಯಳು ಸುಮ್ಮನಾದಳು. ರಾಸಬಿಹಾರಿ ಮತ್ತೆ ಹೇಳಿದ—"ವಿಲಾಸ ಹುಡುಗನಾದರೂ ಎಷ್ಟು ದೂರ ಆಲೋಚನೆಮಾಡಿ ಕೆಲಸ ಮಾಡುತ್ತಾನೆಂಬುದು ಈಗಲಾದರೂ ತಿಳಿಯಿತೇ ಮಗು? ನನಗೆ ಇದರಲ್ಲೇ ಕೂದಲು ಬೆಳ್ಳಗಾಗಿದ್ದರೂ, ಜಮೀನುದಾರಿಯ ವಿಷಯದಲ್ಲಿ ಅವನ ಚಟುವಟಿಕೆಗಳನ್ನು ನೋಡಿ ನಾನೇ ಎಷ್ಟೋವೇಳೆ ದಂಗಾಗಬೇಕಾಗುತ್ತದೆಂದು ನಾನು ಈಗತಾನೇ ಹೇಳಲಿಲ್ಲವೇ?"

ವಿಜಯಳು ತಲೆಯಲ್ಲಾಡಿಸಿ ಒಪ್ಪಿಗೆಯಿತ್ತಳು. ಏನೂ ಮಾತಾಡಲಿಲ್ಲ.

"ನಾಲ್ಕೂವರೆ ಹೊಡೆಯಿತು" ಎಂದು ರಾಸಬಿಹಾರಿ ಕೋಲನ್ನು ಕೈಯಲ್ಲಿ ಹಿಡಿದು ಎದ್ದುನಿಂತು ಹೇಳಿದ—"ಈ ಸಮಾಜ ಪ್ರತಿಷ್ಠೆಯ ವಿಷಯವನ್ನು ಅವನೆಷ್ಟು ಮನಸ್ಸಿಗೆ ಹಚ್ಚಿಕೊಂಡಿದ್ದಾನೆಂಬುದನ್ನು ಬಾಯಲ್ಲಿ ಹೇಳುವುದಕ್ಕಾಗುವುದಿಲ್ಲ. ಅವನ ಉಪಾಸನೆ, ಧ್ಯಾನ ಎಲ್ಲ ಇದೇ ಆಗಿ ಹೋಗಿದೆ. ಆ ಉತ್ಸವವನ್ನು ಕಣ್ಣಿಂದ ನೋಡಿ ಪ್ರಾಣ ಬಿಡೋಣವೆಂದು

ನಾನು ದೇವರಲ್ಲಿ ಪ್ರಾರ್ಥಿಸುತ್ತಿದ್ದೇನೆ" ಎಂದು ಅವನು ಎರಡು ಕೈಗಳನ್ನೂ ಎತ್ತಿ ಬ್ರಹ್ಮನಿಗೆ ಅನೇಕ ಸಲ ನಮಸ್ಕಾರ ಮಾಡಿದ, ಬಾಗಿಲ ಹತ್ತಿರ ಹೋಗಿ ನಿಂತು ಮತ್ತೆ ಹೇಳಿದ—"ನರೇಂದ್ರ ಒಮ್ಮೆ ನನ್ನಲ್ಲಿಗೆ ಬಂದಿದ್ದರೆ, ಏನಾದರಾಗಲಿ ಯೋಚಿಸಬಹುದಾಗಿತ್ತು. ಆದರೆ ಅವನು ಎಂದೂ........ ಮಹಾ ನಿರ್ಭಾಗ್ಯ. ತಂದೆಯ ಸ್ವಭಾವ ಸಂಪೂರ್ಣವಾಗಿ ಮಗನಲ್ಲಿ ಬಂದು ಬಿಟ್ಟಿದೆ" ಎನ್ನುತ್ತ ಅವನು ಹೊರಗೆ ಹೋದ.

ಅಲ್ಲೇ ಏನೋ ಯೋಚಿಸುತ್ತ ಕುಳಿತಿದ್ದ ವಿಜಯಳು ಹೊರಗೆ ನೋಡಿದಳು. ಹಗಲು ಮುಗಿಯುತ್ತ ಬಂದಿತ್ತು. ನದಿಯ ಆ ಗಾಳಿ ಅವಳನ್ನು ಆಕರ್ಷಿಸಿತು. ಅವಳು ಎದ್ದು ಆ ವೃದ್ಧ ಸೇವಕನನ್ನು ಕರೆದು ಕೊಂಡು ಗಾಳಿ–ಸೇವನೆಯ ನೆಪದಿಂದ ಹೊರಬಿದ್ದಳು.

ಅದೇ ಸ್ಥಳದಲ್ಲೇ ಇಂದೂ ಅದೇ ವ್ಯಕ್ತಿ ಮೀನುಹಿಡಿಯುತ್ತಿದ್ದ. ಬಹಳ ಹೊತ್ತಿನಿಂದ ಇವನನ್ನು ನೋಡಿದ್ದರೂ ನೋಡದವಳಂತೆ ವಿಜಯಳು ಮುಂದೆ ಹೊರಟಳು. ಆದರೆ ಕನ್ನಯ್ಯಾಸಿಂಹ "ರಾಂರಾಂ ಬಾಬೂಜೀ ಇಂದೇನಾದರೂ ಷಿಕಾರಿ ಸಿಕ್ಕಿತೇ?" ಎಂದು ಹಿಂದಿನಿಂದ ಕೇಳಿದ.

ಇದು ವಿಜಯಳ ಕಿವಿಗೆ ಬಿದ್ದ ಕೂಡಲೆ ಅವಳ ದೇಹಾದ್ಯಂತವೂ ರಕ್ತ ಹರಿಯಿತು. ಅನೇಕರು ಹೇಳುವಂತೆ ಸ್ನೇಹ ಬೆಳೆಯಬೇಕಾದರೆ ಸಲಿಗೆಯಾಗಬೇಕಾದರೆ ಬಹಳ ದಿನಗಳು ಆಗಿ ಬಹಳ ಮಾತುಕತೆಯೇನೂ ನಡೆಯಬೇಕಾಗಿಲ್ಲ. ವಿಜಯಳು ಹಿಂದಿರುಗಿ ನೋಡುವಷ್ಟರಲ್ಲೇ ಆ ವ್ಯಕ್ತಿ ಗಾಳವನ್ನು ಕೆಳಗಿಟ್ಟು ಎದ್ದು ಬಂದು ನಮಸ್ಕರಿಸಿ ನಗುತ್ತ ನಿಂತು ಹೇಳಿದ —"ನಿಮ್ಮೂರೆಂದರೆ ನಿಮಗೆ ಬಹಳ ಅಭಿಮಾನವೆಂದು ತೋರುತ್ತೆ. ಇಲ್ಲಿಯ ಮಲೇರಿಯವನ್ನು ನಿಮ್ಮದಾಗಿ ಮಾಡಿಕೊಂಡ ಹೊರತು ನಿಮಗೆ ಸಮಾಧಾನವಿಲ್ಲವೆಂದು ತೋರುತ್ತೆ."

ವಿಜಯಳು ನಕ್ಕು ಹೇಳಿದಳು—"ನೀವು ಸಂಪಾದಿಸಿದ್ದೀರೋ" ಆದರೆ ನಿಮ್ಮನ್ನು ನೋಡಿದರೆ ಹಾಗೆ ಕಾಣುವುದಿಲ್ಲ."

"ಡಾಕ್ಟರು ಸ್ವಲ್ಪ ನಿಧಾನವಾಗಿ ಸಂಪಾದಿಸಬೇಕಾಗುತ್ತೆ. ಹೀಗೆ ಆತುರವಾಗಿ........"

ಮಾತಿನ್ನೂ ಮುಗಿಯುವುದರಲ್ಲೇ ವಿಜಯಳು—"ನೀವು ಡಾಕ್ಟ ರೆಂದು ತೋರುತ್ತೆ" ಎಂದು ಕೇಳಿದಳು.

ಆ ವ್ಯಕ್ತಿ ಅಪ್ರತಿಭನಾದ್ದರಿಂದ ಕೂಡಲೆ ಉತ್ತರಕೊಡಲಾಗಲಿಲ್ಲ. ಆದರೆ ಮರುಕ್ಷಣವೇ ಅವನು ಸುಧಾರಿಸಿಕೊಂಡು ಅದೇ ನಗುವಿನ ಭಂಗಿಯಲ್ಲೇ ಹೇಳಿದ—" ಹಾಗೇ ತಿಳಿದುಕೊಳ್ಳಬೇಕು. ಒಬ್ಬ ದೊಡ್ಡ ಡಾಕ್ಟರ ನೆರೆಯವರಲ್ಲವೇ ನಾವು ? ಎಲ್ಲರದೂ ಆದಮೇಲೆ ನಮ್ಮ ಸರದಿ ಬರುತ್ತೆ.... ಅಲ್ಲವೇ ? "

ವಿಜಯಳು ಒಂದು ಕ್ಷಣ ಸುಮ್ಮನಿದ್ದು ಹೇಳಿದಳು—" ನೀವು ಬರಿಯ ನೆರೆಯಾಗಿರದೆ ಅವರ ಮಿತ್ರರೂ ಆಗಿರಬೇಕೆಂದು ನಾನು ಊಹಿಸಿದ್ದೆ. ನಾನು ಆಡಿದ ಮಾತುಗಳೆಲ್ಲವನ್ನೂ ಅವರಿಗೆ ಹೇಳಿಬಿಟ್ಟಿರಾ ? "

" ಅದೇ ನೀವು ಅವರನ್ನು ಒಂದು ಅಲ್ಪ ಪದಾರ್ಥವೆಂದು ತಿಳಿದಿದ್ದೀರೆಂಬುದಲ್ಲವೇ ?....ಅದು ಬಹಳ ಹಳೆಯ ವಿಷಯ, ಎಲ್ಲರಿಗೂ ತಿಳಿದದ್ದೆ. ಈ ಮಾತುಗಳನ್ನೆಲ್ಲ ಹೊಸರೀತಿಯಲ್ಲಿ ಹೇಳುವ ಅಗತ್ಯವೇನು ? ಆದರೂ ಅವನೊಮ್ಮೆ ಭೇಟಿಗೆ ಬರಬಹುದು."

ವಿಜಯಳು ಬಹಳ ಸಂಕೋಚದಿಂದ ಹೇಳಿದಳು—"ನನ್ನನ್ನು ಭೇಟಿ ಮಾಡಿದರೆ ಅವರಿಗೇನು ಪ್ರಯೋಜನ ? ಅಂದಹಾಗೆ ಅವರ ವಿಚಾರದಲ್ಲಿ ನಾನಂತಹ ಮಾತನ್ನೇನೂ ಹೇಳಲಿಲ್ಲವಲ್ಲ ? "

" ನೀವೇನೋ ಹೇಳಲಿಲ್ಲ. ಆದರೆ ಹೇಳುವುದು ಉಚಿತವಾಗಿತ್ತು."

" ಅದೇಕೆ ಉಚಿತವಾಗಿತ್ತು ? "

" ಮನೆಮಠ ಕಳೆದುಕೊಳ್ಳುವವನನ್ನು ಎಲ್ಲರೂ ನಿರ್ಭಾಗ್ಯನೆಂದೇ ಹೇಳುತ್ತಾರೆ. ನಾವೂ ಹೇಳುತ್ತೇವೆ. ಎದುರಿಗೆ ಹೇಳದಿದ್ದರೂ ಮರೆಯಾಗಿಯಾದರೂ ಹೇಳುತ್ತೇವೆ."

ವಿಜಯಳು ನಕ್ಕಳು—" ಹಾಗಾದರೆ ನೀವು ಅವರಿಗೆ ಒಳ್ಳೆಯ ಸ್ನೇಹಿತರು."

"ಹೌದು. ನೀವು ಒಳ್ಳೆಯ ಉದ್ದಿಶ್ಯಕ್ಕಾಗಿ ಅವರ ಮನೆಯನ್ನು ತೆಗೆದುಕೊಂಡಿರೆಂದು ತಿಳಿಯದಿದ್ದರೆ, ಅವರ ಪರವಾಗಿ ನಾನೇ ಬಂದು ನಿಮ್ಮನ್ನು ಕೇಳುತ್ತಿದ್ದೆ."

ವಿಜಯಳು ಇದಕ್ಕೆ ಉತ್ತರವಾಗಿ ಒಮ್ಮೆ ಮುಖವೆತ್ತಿ ನೋಡಿದಳು. ಏನೂ ಮಾತಾಡಲಿಲ್ಲ.

ಮಾತಾಡುತ್ತಾ ಇಂದು ಇವರು ಸ್ವಲ್ಪದೂರ ನಡೆದುಹೋದರು.

ಆಚೆ ದಡದಲ್ಲಿ ಕೆಲವರು ಗುಂಪಾಗಿ ನರೇಂದ್ರಬಾಬುಗಳ ಮನೆಯ ಕಡೆ ಹೋಗುತ್ತಿದ್ದರು. ಅದರಲ್ಲಿ ಐವತ್ತರಿಂದ ಹಿಡಿದು ಹದಿನೈದು ವರುಷ ಗಳವರೆಗೂ ಎಲ್ಲ ವಯಸ್ಸಿನವರೂ ಇದ್ದರು. ಅವನು ಅವರನ್ನು ತೋರಿಸಿ ಕೇಳಿದ—"ಇವರೆಲ್ಲ ಎಲ್ಲಿಗೆ ಹೋಗುತ್ತಿದ್ದಾರೆಂಬುದು ಗೊತ್ತಿದೆಯೇ? ....ನರೇಂದ್ರಬಾಬುಗಳ ಶಾಲೆಯಲ್ಲಿ ಓದಲು ಹೋಗುತ್ತಿದ್ದಾರೆ."

ವಿಜಯಳು ಆಶ್ಚರ್ಯದಿಂದ ಕೇಳಿದಳು—"ಅವರು ಈ ಉದ್ಯೋಗ ವನ್ನೂ ಮಾಡುತ್ತಾರೋ? ಆದರೆ ದುಡ್ಡು ತೆಗೆದುಕೊಳ್ಳುವುದಿಲ್ಲವೆಂದು ತೋರುತ್ತೆ ಅಲ್ಲವೇ?"

"ಅವರನ್ನು ನೀವು ಸರಿಯಾಗಿ ಅರ್ಥಮಾಡಿಕೊಂಡಿದ್ದೀರಿ. ಕೆಲಸಕ್ಕೆ ಬಾರದವರ ಅಂತರಂಗ ಯಾವಾಗಲೂ ರಹಸ್ಯವಾಗಿರುವುದಿಲ್ಲ" ಎಂದು ಮೊದಲಿಗಿಂತಲೂ ಗಂಭೀರವಾಗಿ ಹೇಳಿದ—"ನಮ್ಮ ದೇಶದಲ್ಲಿ ಸರಿಯಾದ ರೈತರೇ ಇಲ್ಲವೆಂದು ನರೇಂದ್ರ ಹೇಳುತ್ತಾನೆ. ಆರಂಭ ಮಾಡುವುದು ಒಂದು ಕಸಬು. ಆದ್ದರಿಂದ ಕಾಲದಲ್ಲೂ ಅಕಾಲದಲ್ಲೂ ನೇಗಿಲಿನಿಂದ ಉತ್ತು ಬೀಜ ಬಿತ್ತುತ್ತಾರೆ. ಬಾಯಿಬಿಟ್ಟುಕೊಂಡು ಆಕಾಶದ ಕಡೆ ನೋಡುತ್ತ ಇರುತ್ತಾರೆ. ಇದು ವ್ಯವಸಾಯವಲ್ಲ, ಇದು ಲಾಟರಿ. ಯಾವ ಜಮೀ ನಿಗೆ ಯಾವಾಗ ಗೊಬ್ಬರ ಹಾಕಬೇಕು. ಗೊಬ್ಬರವಾಗುವುದು ಹೇಗೆ? ನಿಜವಾದ ಸಾಗುವಳಿ ಎಂದರೇನು?....ಇವೆಲ್ಲ ಅವರಿಗೆ ತಿಳಿಯದು. ನರೇಂದ್ರ ವಿಲಾಯತಿಯಲ್ಲಿದ್ದು ಡಾಕ್ಟರ್ ಪರೀಕ್ಷೆಯ ಜೊತೆಗೆ ಇದನ್ನೂ ಕಲಿತುಬಂದಿದ್ದಾನೆ. ಎಂದಾದರೂ ಅವನ ಶಾಲೆಯನ್ನೊಮ್ಮೆ ನೋಡಲು ಬರುತ್ತೀರಾ?....ಅಲ್ಲಿ ಮೈದಾನದ ಮಧ್ಯದಲ್ಲಿ ಮರದ ನೆರಳಿನಲ್ಲಿ ತಂದೆ ಮಕ್ಕಳೆಲ್ಲ ಒಟ್ಟಿಗೆ ಓದಲು ಕೂಡುತ್ತಾರೆ."

ವಿಜಯಳು ಆಗಲೇ ಹೊರಡಲನುವಾದವಳು ತನ್ನ ಕುತೂಹಲವನ್ನು ತಡೆದು ಹೇಳಿದಳು—"ಉಹುಂ, ಇರಲಿ ಬಿಡಿ" ಎಂದು ಕೇಳಿದಳು— "ಇಷ್ಟು ದೊಡ್ಡ ಮನೆ ಇದ್ದರೂ ಮರದ ಕೆಳಗೇಕೆ ಪಾಠಶಾಲೆ ನಡೆಸು ತ್ತಾರೆ?"

"ಈ ಶಿಕ್ಷಣವನ್ನೆಲ್ಲ ಬಾಯಿಂದ ಹೇಳಿ, ಪುಸ್ತಕವನ್ನು ಬಾಯಿಪಾಠ ಮಾಡಿಸಿದ್ದರಿಂದ ಬರುವುದಿಲ್ಲ. ಅವರ ಕೈಯಲ್ಲಿ ಸಾಗುಮಾಡಿಸಿ ಸರಿ ಯಾಗಿ ಕೆಲಸಮಾಡಿದರೆ ಎರಡರಷ್ಟು....ಅಷ್ಟೇಕೆ ಏಳರಷ್ಟು ಎಂಟರಷ್ಟು

ಬೆಳೆ ಪಡೆಯಬಹುದೆಂದು ತೋರಿಸಬಹುದು. ಅದಕ್ಕೆ ಬೇಕಾಗಿರುವುದು ಬಯಲು, ಹೊಲಗಳು. ಅಷ್ಟೇ ಹೊರತು ತಲೆಯ ಮೇಲೆ ಕೈಯಿಟ್ಟು ಕೊಂಡು ತಲೆ ಚಚ್ಚಿಕೊಂಡು ಮೋಡಗಳ ಕಡೆ ನೋಡುವ ಅಗತ್ಯವಿಲ್ಲ ವೆಂದು ಹೇಳಬಹುದು. ಅವರ ಪಾಠಶಾಲೆ ಮರದ ಬುಡದಲ್ಲೇಕೆಂಬುದು ಈಗ ತಿಳಿಯಿತೇ? ನೀವೊಮ್ಮೆ ಅವರ ಶಾಲೆಯ ಮೈದಾನವನ್ನು ನೋಡಿದರೆ ನಿಮ್ಮ ಕಣ್ಣಿಗೆ ತಂಪಾಗುತ್ತೆ. ಇವತ್ತೂ ಹೊತ್ತಿದೆ....ಇಂದೇ ನಡೆಯಿರಿ ....ಅಲ್ಲೇ ಕಾಣುತ್ತೆ."

ವಿಜಯಳ ಮುಖಭಾವ ಬರಬರುತ್ತಾ ಗಂಭೀರವಾಗಿ ಅವಳು— "ಇವತ್ತು ಬೇಡ" ಎಂದಳು.

"ಹೂಂ, ಹೋಗಲಿ ಬಿಡಿ. ನಿಮ್ಮನ್ನು ಸ್ವಲ್ಪದೂರ ಕಳುಹಿಸಿಬರು ತ್ತೇನೆ. ನಡೆಯಿರಿ" ಎಂದು ಅವನು ಜೊತೆಗೆ ಹೊರಟ. ಐದಾರು ನಿಮಿಷ ಗಳವರೆಗೂ ವಿಜಯಳು ಒಂದು ಮಾತನ್ನೂ ಆಡಲಿಲ್ಲ. ಮನಸ್ಸಿನಲ್ಲೇ ಅವಳಿಗೆ ಬಹಳ ನಾಚಿಕೆಯಾದಂತಾಯಿತು. ಅದಕ್ಕೆ ಕಾರಣವೂ ಅವಳಿಗೆ ತೋರಲಿಲ್ಲ. ಆ ವ್ಯಕ್ತಿ ಮತ್ತೆ ಮಾತನಾಡಿದ—"ನೀವು ಧರ್ಮದ ಕೆಲಸ ಕ್ಕಾಗಿಯೇ ಅವನ ಮನೆಯನ್ನು ತೆಗೆದುಕೊಳ್ಳುತ್ತಿದ್ದೀರಿ. ಅವನ ಈ ಕೆಲವು ಎಕರೆ ಜಮೀನು ಒಳ್ಳೆಯ ಕೆಲಸಕ್ಕೇ ಉಪಯೋಗವಾಗುತ್ತಿರುವುದರಿಂದ ಅದನ್ನು ಅವನಿಗೆ ಬಿಟ್ಟುಕೊಡಬಹುದಲ್ಲವೇ?" ಎಂದು ಅವನು ಮೃದು ವಾಗಿ ನಕ್ಕ.

ಆದರೆ ಇದಕ್ಕುತ್ತರವಾಗಿ ವಿಜಯಳು ಗಂಭೀರಳಾಗಿ ಕೇಳಿದಳು— "ಹೀಗೆ ಕೇಳಲು ಅವರಿಂದ ನಿಮಗೆ ಅಧಿಕಾರ ಸಿಕ್ಕಿದೆಯೇ?" ಅವಳು ಓರೆಗಣ್ಣಿನಿಂದ ಅವನನ್ನು ನೋಡಿದಳು. ಆದರೆ ಆ ನಗುಮುಖದಲ್ಲಿ ಏನೂ ವ್ಯತ್ಯಾಸ ಕಂಡುಬರಲಿಲ್ಲ.

ಅವನು ಹೇಳಿದ—"ಈ ಅಧಿಕಾರ ಕೊಡುವುದರಿಂದಲೂ ಸಿಕ್ಕುವು ದಿಲ್ಲ ತೆಗೆದುಕೊಳ್ಳುವುದರಿಂದಲೂ ಪ್ರಾಪ್ತವಾಗುವುದಿಲ್ಲ. ಒಳ್ಳೆಯ ಕೆಲ ಸಕ್ಕೆ ದೇವರಿಂದಲೇ ಮನುಷ್ಯ ಅಧಿಕಾರ ಪಡೆಯುತ್ತಾನೆ. ಅದಕ್ಕಾಗಿ ಅವನು ಯಾರ ಮುಂದೂ ಕೈಯೊಡ್ಡಬೇಕಾಗಿಲ್ಲ. ಇದು ಯಾರಿಗಾಗಿ ಗೊತ್ತಿದೆಯೇ? ದೇಶದ ಅನ್ನ ಹೀನ ರೈತರಿಗಾಗಿ. ದರಿದ್ರರು ದೇವರ ಒಂದು ವಿಶೇಷ ರೂಪವೆಂದು ನಮ್ಮ ಶಾಸ್ತ್ರದಲ್ಲಿ ಬರೆದಿದೆ ಅವರ ಸೇವೆ

ಮಾಡುವ ಅಧಿಕಾರ ಎಲ್ಲರಿಗೂ ಇದೆ, ಆ ಅಧಿಕಾರವನ್ನು ನಾನು ನರೇಂದ್ರ ನಿಂದ ಪಡೆಯಬೇಕೇಕೆ? ಹೇಳಿ" ಎಂದು ಅವನು ನಗತೊಡಗಿದ.

ವಿಜಯಳು ಹೋಗುತ್ತ ಕೇಳಿದಳು—"ನಿಮ್ಮ ಸ್ನೇಹಿತರು ಇದಕ್ಕಾಗಿ ಇಲ್ಲಿ ಇರಲಾಗುತ್ತದೆಯೇ?"

"ಉಹುಂ, ಅವರು ನನ್ನ ಮೇಲೆ ಈ ಭಾರ ವಹಿಸಿ ಹೋಗಬಹುದು"

ವಿಜಯಳ ತುಟಿಯ ಮೇಲೊಂದು ನಗು ಸುಳಿದು ಮಾಯವಾಯಿತು. "ನಾನೂ ಹೀಗೆ ಊಹಿಸಿದ್ದೆ." ಅವಳು ಹೇಳಿದಳು.

"ಓಹೋ, ಇರಬಹುದು. ಇದೆಲ್ಲ ಮೊದಲು ದೇಶದ ಜಮಿೀನು ದಾರರು ಮಾಡಬೇಕಾದ ಕೆಲಸ. ಅವರು ಬ್ರಹ್ಮಾದಾಯಕ್ಕೆಂದು ಜಮೀ ನನ್ನು ಬಿಡಬೇಕಾಗಿತ್ತು. ಈಗ ಅವರೇನು ಇದಕ್ಕೆ ಜವಾಬ್ದಾರಲ್ಲ. ಆದರೆ ಅವರ ಪರಿಣಾಮವಿನ್ನೂ ಅಳಿಸಿಹೋಗಿಲ್ಲ. ಆದ್ದರಿಂದ ಯಾರಾದರೂ ಸ್ವಲ್ಪ ಜಮೀನು ತೆಗೆದುಕೊಂಡರೆ ಆಗ ಅವರಿಗೆ ಪೂರ್ವ ಸಂಸ್ಕಾರದ ಕಾರಣ ತಿಳಿ ಯುತ್ತೆ."ಎಂದು ಅವನು ಮತ್ತೆ ನಗಲು ಷುರುಮಾಡಿದ. ವಿಜಯಳೂ ನಗ ಲೆತ್ನಿಸಿದಳು. ಆದರೆ ಅವಳಿಂದ ನಗಲಾಗಲಿಲ್ಲ. ಅವಳು ಸ್ವಲ್ಪಹೊತ್ತು ಸುಮ್ಮನೆ ಹೋಗುತ್ತಿದ್ದು ಅಕಸ್ಮಾತ್ ಕೇಳಿದಳು— "ನೀವೇ ನಿಮ್ಮ ಸ್ನೇಹಿತ ರಿಗೆ ಆಶ್ರಯ ಕೊಡಬಹುದಲ್ಲಾ."

"ಆದರೆ ನಾನಿಲ್ಲಿರುವುದಿಲ್ಲ. ಇನ್ನೊಂದು ವಾರದೊಳಗೇ ನಾನು ಇಲ್ಲಿಂದ ಹೊರಟುಹೋಗುತ್ತೇನೆ."

ವಿಜಯಳ ಎದೆ ಝುಲ್ಲೆಂದಿತು. ಅವಳು ಕೇಳಿದಳು—" ಮನೆ ಇಲ್ಲೇ ಇದ್ದ ಮೇಲೆ ಆಗಾಗ್ಗೆ ಬಂದು ಹೋಗುತ್ತಿರಬೇಕಾಗುವುದಿಲ್ಲವೇ?

"ಉಹುಂ· ಇನ್ನು ನಾನು ಬರಬೇಕಾಗುವುದಿಲ್ಲ."

ವಿಜಯಳ ಅಂತರಂಗ ಅಲ್ಲೋಲಕಲ್ಲೋಲವಾಯಿತು. ಇದಕ್ಕೆ ಕಾರಣವನ್ನು ಕೇಳುವುದುಚಿತವಾಗಲಾರದೆಂದು ಅವಳು ಮನಸ್ಸಿನಲ್ಲೇ ಅಂದುಕೊಂಡರೂ, ಆ ಕುತೂಹಲವನ್ನು ಅವಳು ತಡೆಯದಾದಳು. ಅವಳು ನಿಧಾನವಾಗಿ ಕೇಳಿದಳು—"ಇಲ್ಲಿ ನಿಮ್ಮ ಮನೆಯವರನ್ನು ನೋಡಿಕೊಳ್ಳಲು ಯಾರಾದರೂ ಇರಲೇಬೇಕಾಗುತ್ತೆ. ಆದರೆ........"

"ಉಹುಂ, ಅಂತಹವರಾರೂ ಇಲ್ಲ" ಅವನು ನಕ್ಕು ಹೇಳಿದ.

"ಹಾಗಾದರೆ ನಿಮ್ಮ ತಂದೆ–ತಾಯಿ........"

"ನನಗೆ ತಂದೆ–ತಾಯಿ, ಅಣ್ಣ–ತಮ್ಮ, ಅಕ್ಕತಂಗಿಯರಾರೂ ಇಲ್ಲ.

....ನೋಡಿ ನಿಮ್ಮ ಮನೆ ಬಂದಿತು. ನಾನಿನ್ನು ಹೊರಡುತ್ತೇನೆ, ನಮಸ್ಕಾರ ........" ಎಂದು ಅವನು ನಿಂತ.

ವಿಜಯಳು ಅವನ ಮುಖವನ್ನು ನೋಡದಾದಳು. ಆದರೆ ಮೃದು ಕಂಠದಿಂದ ಹೇಳಿದಳು...." ಒಳಗೆ ಬರುವುದಿಲ್ಲವೇ? "

" ಉಹುಂ, ವಾಪಸುಹೋಗುವುದರಲ್ಲಿ ಕತ್ತಲಾಗಿಬಿಡುತ್ತೆ."

ವಿಜಯಳು ಕೈಯೆತ್ತಿ ನಮಸ್ಕಾರ ಮಾಡುವಾಗ ಅತಿ ಸಂಕೋಚ ದಿಂದ ಹೇಳಿದಳು—" ನೀವೊಮ್ಮೆ ನಿಮ್ಮ ಮಿತ್ರರನ್ನು ರಾಸಬಿಹಾರಿಬಾಬು ಗಳ ಹತ್ತಿರ ಕಳುಹಿಸಲಾರಿರಾ? "

" ಅವರ ಹತ್ತಿರ ಏಕೆ? " ಆ ವ್ಯಕ್ತಿ ಆಶ್ಚರ್ಯದಿಂದ ಕೇಳಿದ.

" ಅವರೇ ತಂದೆಯವರ ಆಸ್ತಿ–ಪಾಸ್ತಿಗಳೆಲ್ಲವನ್ನೂ ನೋಡಿಕೊಳ್ಳು ತ್ತಿಲ್ಲವೇ? "

" ಅದು ನನಗೆ ಗೊತ್ತು. ಆದರೆ ಅವರನ್ನು ಕಳುಹಿಸಿರೆಂದೇಕೆ ಹೇಳು ತ್ತೀರಿ? "

ವಿಜಯಳು ಈ ಪ್ರಶ್ನೆಗೇನೂ ಉತ್ತರಕೊಡದಾದಳು. ಅವನು ಸ್ವಲ್ಪಹೊತ್ತು ಸ್ಥಿರವಾಗಿ ನಿಂತು ದಾರಿ ನೋಡಿದ. ಆಮೇಲೆ ಹೇಳಿದ— " ನಾನು ಹೋಗುವುದರಲ್ಲಿ ಕತ್ತಲಾಗುತ್ತೆ. ನಾನಿನ್ನು ಹೊರಡುತ್ತೇನೆ...." ಎಂದು ಅವನು ಜಾಗ್ರತೆಯಾಗಿ ಹೆಜ್ಜೆಹಾಕುತ್ತ ಹೊರಟುಹೋದ.

೮

ವಿಜಯಳ ಮನೆಗೆ ಹೊಂದಿದ ಉದ್ಯಾನವನ ದೊಡ್ಡದು. ದೊಡ್ಡ ದೊಡ್ಡ ಮಾವು, ತೆಂಗು ಮೊದಲಾದ ಮರಗಳ ನೆರಳಿನಲ್ಲಿ ಆಗಲೇ ಕತ್ತಲು ಕವಿಯುತ್ತಿತ್ತು. ವೃದ್ಧ ಸೇವಕ " ತಾಯಿ, ಸ್ವಲ್ಪ ತಿರುಗಿ ಸರಿಯಾದ ರಸ್ತೆಯಲ್ಲಿ ಹೊರಟರೆ ವಾಸಿ " ಎಂದ.

ವಿಜಯಳ ಮನಸ್ಸು ಇದಕ್ಕೆ ಲಕ್ಷ್ಯ ಕೊಡುವ ಪರಿಸ್ಥಿತಿಯಲ್ಲಿರಲಿಲ್ಲ. ಅವಳು ' ಉಹುಂ ' ಎಂದು ಅನೇ ದಾರಿಯಲ್ಲೇ ಮನೆಯ ಕಡೆ ಹೊರಟಳು. ಆ ಹೊಸ ವ್ಯಕ್ತಿಯೊಂದಿಗೆ ಇಷ್ಟು ಮಾತಾಡಿದರೂ ಅವನ ಹೆಸರೇನೆಂದು ಅವಳು ಕೇಳಲಿಲ್ಲ. ಏಕೆಂದರೆ ಅದು ಹೆಂಗಸರಿಗೆ ಗೌರವ ತರುವುದಲ್ಲ. ಇದೊಂದು ಅವಳ ಮನಸ್ಸಿನಲ್ಲಿ ಕುಟುಕುತ್ತಿತ್ತು. ಎರಡನೆಯದಾಗಿ ಆ ವ್ಯಕ್ತಿ ಎರಡು ದಿನಗಳಾದ ಮೇಲೆ ಎಲ್ಲಿ ಹೋಗುತ್ತಾನೋ ಕೇಳಬೇಕೆಂದು

ಅನೇಕ ಸಲ ಅವಳ ಮನಸ್ಸಿಗೆ ಬಂದರೂ, ನಾಚಿಕೆಯಿಂದ ಅವಳು ಕೇಳ ಲಿಲ್ಲ. ಆ ವ್ಯಕ್ತಿ ಯಾರೇ ಆಗಲಿ ಒಳ್ಳೇ ಸುಶಿಕ್ಷಿತನೂ, ವಿದ್ಯಾವಂತನೂ ಇರಬೇಕೆಂದೂ ಹಳ್ಳಿಯವನಾದರೂ ಅಪರಿಚಿತ ಹೆಂಗಸಿನೊಡನೆ ಗೌರವ ವಾಗಿ ಮಾತನಾಡುವ ಅಭ್ಯಾಸವಿರಬೇಕೆಂದೂ ಅವಳು ಅಂದುಕೊಂಡಳು. ಅವನು ಬ್ರಹ್ಮ ಸಮಾಜಿಯಲ್ಲದಿದ್ದರೂ ಇಂತಹ ಶಿಕ್ಷಣ ಅವನಿಗೆಲ್ಲಿಂದ ಸಿಕ್ಕಿರಬಹುದೆಂದು ಅವಳು ಯೋಚಿಸುತ್ತಾ ಮನೆಯಲ್ಲಿ ಕಾಲಿಡುತ್ತಿದ್ದಂತೆ ಅವಳ ಸೇವಕಿ ಪರೇಶನ ತಾಯಿ ಬಂದು "ವಿಲಾಸಬಾಬುಗಳು ಬಹಳ ಹೊತ್ತಿನಿಂದ ಹೊರಗಡೆ ದಿವಾನ ಕೋಣೆಯಲ್ಲಿ ಕುಳಿತು ದಾರಿ ಕಾಯುತ್ತಿ ದ್ದಾರೆ" ಎಂದು ಹೇಳಿದಳು. ಇದನ್ನು ಕೇಳಿದ ಕೂಡಲೆ ಅವಳಿಗೆ ಬಹಳ ಬೇಸರವಾಯಿತು. ವಿಲಾಸ ಅಂದು ಸಿಟ್ಟಾಗಿ ಹೊರಟುಹೋದವನು ಇದು ವರೆಗೂ ಬಂದಿರಲಿಲ್ಲ. ತಾನು ಮನಸ್ಸಿನಲ್ಲೇ ಎಸಗುತ್ತಿದ್ದ ಆ ಹೊಸ ವ್ಯಕ್ತಿಯ ವಿಷಯ ವಿಜಯಳಿಗೆ ಏನೂ ಗೊತ್ತಿಲ್ಲದಿದ್ದರೂ, ಇಂದು ಅವಳಿಗೆ ವಿಲಾಸ ಮತ್ತು ಆ ಹೊಸ ವ್ಯಕ್ತಿಯಲ್ಲಿ ಆಕಾಶ ಭೂಮಿಗಳಷ್ಟು ಅಂತರ ಮಾತ್ರ ತೋರಿತು. "ನಾನು ಮನೆಗೆ ಬಂದಿದ್ದೇನೆಂದು ಅವರಿಗೆ ತಿಳಿಸಿ ದೆಯಾ?" ಅವಳು ಬೇಸರದಿಂದ ಹೇಳಿದಳು.

"ಇಲ್ಲ ತಾಯಿ, ಅವರಿಗೆ ತಿಳಿಸುವಂತ ಪರೇಶನಿಗೆ ಹೇಳುತ್ತೇನೆ."

"ಅವರು ಚಹ ಕುಡಿಯುತ್ತಾರೆಯೇ ಇಲ್ಲವೇ? ಕೇಳಿದೆಯಾ?"

"ಕೇಳದೇ ಏನ ತಾಯಿ. ನೀವು ಬಂದಮೇಲೆ ಒಟ್ಟಿಗೆ ಕುಡಿ ಯೋಣವೆಂದು ಅವರು ಹೇಳಿದರು."

ವಿಲಾಸಬಾಬು ಈ ಮನೆಯ ಭಾವೀ ಯಜಮಾನನೆಂಬುದು ಅಲ್ಲಿ ಓಡಾಡುತ್ತಿದ್ದವರೆಲ್ಲರಿಗೂ ತಿಳಿದಿತ್ತು, ಆದ್ದರಿಂದ ಅವನ ಆದರಾತಿಥ್ಯದಲ್ಲಿ ಸ್ವಲ್ಪವೂ ವ್ಯತ್ಯಾಸವಾಗುತ್ತಿರಲಿಲ್ಲ. ವಿಜಯಳು ಮತ್ತೇನೂ ಹೇಳದೆ ಮಹ ಡಿಯಮೇಲೆ ಹೋಗಿ, ಸುಮಾರು ಇಪ್ಪತ್ತು ನಿಮಿಷಗಳು ಸರಿದಮೇಲೆ, ಕೆಳ ಗಿಳಿದು ಬಂದು ನೋಡಿದಳು. ವಿಲಾಸಬಾಬು ತಲೆತಗ್ಗಿಸಿಕೊಂಡು ಮೇಜಿನ ಮೇಲೆ ಯಾವುದೋ ಕೆಲವು ಕಾಗದ ಪತ್ರಗಳನ್ನು ನೋಡುತ್ತಿದ್ದ. ವಿಜ ಯಳ ಕಾಲಿನ ಸಪ್ಪಳವನ್ನು ಕೇಳಿ ಅವನು ಮುಖವೆತ್ತಿ ಸಾಧಾರಣ ರೀತಿ ಯಲ್ಲಿ ನಮಸ್ಕಾರ ಮಾಡಿ ಗಂಭೀರನಾಗಿ ಕೇಳಿದ—"ನಾನು ಸಿಟ್ಟಾಗಿ ಇಷ್ಟು ದಿನ ಇಲ್ಲಿಗೆ ಬರಲಿಲ್ಲವೆಂದು ನೀನು ತಿಳಿದಿರಬಹುದು. ನಾನು ಸಿಟ್ಟಾ

ಗಲಿಲ್ಲ. ಸಿಟ್ಟಾಗಿದ್ದರೂ ಅದೇನೂ ತಪ್ಪಾಗುತ್ತಿರಲಿಲ್ಲವೆಂದು ನಿನ್ನ ಮುಂದೆ ಇಂದು ಸಿದ್ಧಾಂತ ಮಾಡಿ ತೋರಿಸಬಲ್ಲೆ."

ವಿಜಯಳನ್ನು ವಿಲಾಸ ಇದುವರೆಗೂ 'ನೀವು' ಎಂದು ಸಂಬೋಧಿಸುತ್ತಿದ್ದು, ಈಗ 'ನೀನು' ಎಂದುದಕ್ಕೆ ಸರಿಯಾಗಿ ಕಾರಣ ತಿಳಿಯದಿದ್ದರೂ ಇದರಿಂದ ವಿಜಯಳಿಗೆ ಆನಂದವೇನೂ ಆಗಲಿಲ್ಲ. ಅವಳು ಏನೂ ಮಾತಾಡದೆ ಒಳಹೊಕ್ಕು ಕುರ್ಚಿಯೊಂದನ್ನೆಳೆದು ಕುಳಿತುಕೊಂಡಳು. ವಿಲಾಸ ಮುಂದುವರಿಸಿದ—"ನಾನೆಲ್ಲ ಸರಿಪಡಿಸಿ ಈಗತಾನೆ ಕಲಿಕತ್ತೆಯಿಂದ ಬರುತ್ತಿದ್ದೇನೆ. ಇನ್ನೂ ತಂದೆಯವರ ಭೇಟಿಗೂ ಸಹ ಅವಕಾಶವಿಲ್ಲವಾಗಿ ನೀನು ಆರಾಮವಾಗಿರಬಲ್ಲೆ. ನನಗದುಸಾಧ್ಯವೇ? ನನ್ನ ಹೊಣೆಗಾರಿಕೆಯ ಅರಿವು ನನಗಿದೆ. ಇಷ್ಟು ದೊಡ್ಡ ಕಾರ್ಯದ ಭಾರವನ್ನು ಹೊತ್ತು ನಾನು ಸುಮ್ಮನೆ ಕೂಡುವುದು ಸಾಧ್ಯವೇ? ಈ ರಜೆಯಲ್ಲಿ ಬ್ರಹ್ಮಮಂದಿರದ ಸ್ಥಾಪನೆಯಾಗಬೇಕು. ಎಲ್ಲ ಸಜ್ಜುಗೊಳಿಸಿ ಅಣಿಮಾಡಿ ಬಂದೆ. ಕರೆಯೋಲೆ ಕೊಡವುದೂ ಬಾಕಿ ಉಳಿಯಲಿಲ್ಲ. ಅಬ್ಬ—ನಿನ್ನೆಯಿಂದ ಎಷ್ಟು ಅಲೆದಾಡಬೇಕಾಯಿತು? ಸದ್ಯ ಆ ಕಡೆ ಒಂದು ನಿಶ್ಚಿಂತೆಯಾಯಿಯಿತು. ಉತ್ಸವಕ್ಕೆ ಬರುವವರ ಪಟ್ಟಿಯನ್ನು ಬರೆದಿದ್ದೇನೆ ಓದಿನೋಡು," ಎಂದು ವಿಲಾಸ ಆತ್ಮತೃಪ್ತಿಯ ತಣಿಯುಸಿರೊಂದನ್ನು ಬಿಟ್ಟು ಆ ಕಾಗದವನ್ನು ವಿಜಯಳ ಮುಂದೆ ಸರಿಸಿ ಕುರ್ಚಿಯನ್ನೊರಗಿ ಕುಳಿತ.

ಆದರೂ ವಿಜಯಳು ಏನೂ ಮಾತಾಡಲಿಲ್ಲ. ಆಹ್ವಾನಿತರ ವಿಚಾರದಲ್ಲಿ ಸ್ವಲ್ಪವೂ ಕುತೂಹಲವನ್ನು ತೋರಲಿಲ್ಲ. ಕುಳಿತಿದ್ದಂತೆಯೇ ಇದ್ದಳು. ಇಷ್ಟು ಹೊತ್ತಿನ ಮೇಲೆ ವಿಲಾಸಬಿಹಾರಿ ಅವಳ ಮೌನದ ಕಡೆ ಲಕ್ಷ್ಯಕೊಟ್ಟು ಕೇಳಿದ—"ಏನು ವಿಷಯ? ಸುಮ್ಮನಿರುವುದೇಕೆ?"

"ನೀವು ಆಹ್ವಾನ ಕೊಟ್ಟಿರುವವರೆಲ್ಲರಿಗೂ ಈಗ ಏನು ಹೇಳಬೇಕೆಂದು ಯೋಚಿಸುತ್ತಿದ್ದೇನೆ." ವಿಜಯ ನಿಧಾನವಾಗಿ ಹೇಳಿದಳು.

"ಅದೇಕೆ?"

"ಮಂದಿರದ ಪ್ರತಿಷ್ಠೆಯ ವಿಷಯದಲ್ಲಿ ನಾನಿದುವರೆಗೂ ಸಿದ್ಧತೆ ಮಾಡಿಕೊಂಡಿಲ್ಲ."

ವಿಲಾಸ ಗಡಿಬಿಡಿಯಿಂದ ನೆಟ್ಟಗೆ ಕುಳಿತು ತೀವ್ರವಾಗಿ ನೋಡಿ ಹೇಳಿದ—"ಹಾಗೆಂದರೇನು? ಈ ರಜೆಯಲ್ಲಿ ಮಂದಿರ-ಸ್ಥಾಪನೆಯಾಗದೆ

ಮಿಂಚಿಹೋದರೆ ಮತ್ತೆ ಇಷ್ಟರಲ್ಲೇ ಬೇಗ ಮಾಡಬಹುದೆಂದು ನೀನು ಎಣಿಸಿದೆಯೇನು ? ನಿನಗೆ ಅನುಕೂಲವಾದಾಗ ಬರಲು ಅವರೇನು ನಿಮ್ಮ ರೈತರಲ್ಲ. ಇದುವರೆಗೂ ಸಿದ್ಧತೆಗಳನ್ನು ಮಾಡಿಕೊಂಡಿಲ್ಲವೆಂದಗೇನು ? "

ಸಿಟ್ಟಿನಿಂದ ವಿಲಾಸನ ಕಣ್ಣುಗಳು ಕೆಂಪಾದುವು. ವಿಜಯಳು ತಲೆ ತಗ್ಗಿಸಿಕೊಂಡು ಬಹಳ ಹೊತ್ತು ಸುಮ್ಮನಿದ್ದು ಆಮೇಲೆ ನಿಧಾನವಾಗಿ ಹೇಳಿದಳು—" ಇಲ್ಲಿ ಇಷ್ಟು ಆಡಂಬರಮಾಡುವ ಅಗತ್ಯವಿಲ್ಲವೆಂದು ನನಗೆ ಅನಿಸುತ್ತದೆ."

ವಿಲಾಸ ಎರಡು ಕಣ್ಣುಗಳನ್ನೂ ಅಗಲವಾಗಿ ಬಿಟ್ಟು ಕೇಳಿದ— " ಆಡಂಬರವೇ ? ಆಡಂಬರವಾಗಬೇಕೆಂದು ನಾನೆಲ್ಲಿ ಹೇಳಿದೆ ? ಸ್ವಾಭಾವಿಕವಾಗಿಯೇ ಶಾಂತವಾದ ಕೆಲಸವನ್ನು ಗಂಭೀರವಾಗೇ ಮಾಡಿ ಮುಗಿಸಬೇಕೆಂಬುದರ ಅರಿವು ನನಗೂ ಇದೆ. ನೀನೇನೂ ಅದಕ್ಕಾಗಿ ಯೋಚಿಸಬೇಕಾಗಿಲ್ಲ."

ವಿಜಯಳು ಎಂದಿನಂತೆ ಮೃದುವಾಗಿ ಹೇಳಿದಳು—" ಇಲ್ಲಿ ಬ್ರಹ್ಮ ಮಂದಿರ ಸ್ಥಾಪನೆಮಾಡುವ ಅಗತ್ಯವಿಲ್ಲ. ಇದು ಕೂಡದು."

ವಿಲಾಸ ಸ್ತಬ್ಧನಾಗಿ ಸುಮ್ಮನೆ ಕುಳಿತುಬಿಟ್ಟ. ಆಮೇಲೆ ಹೇಳಿದ– " ನೀನು ಸರಿಯಾದ ಬ್ರಾಹ್ಮ-ಮಹಿಳೆಯೇ ಅಲ್ಲವೇ ?........ಹೇಳು."

ಈ ಪೆಟ್ಟಿನಿಂದ ಎಚ್ಚತ್ತವಳಂತೆ ವಿಜಯಳು ಮುಖವೆತ್ತಿ ನೋಡಿ ಅಷ್ಟರಲ್ಲೇ ತನ್ನನ್ನು ತಾನೇ ಸುದಾರಿಸಿಕೊಂಡು ಹೇಳಿದಳು—" ನೀವು ಶಾಂತರಾಗಿ ನಿಮ್ಮ ಮನೆಯಿಂದ ಬನ್ನಿ. ಆಮೇಲೆ ಮಾತು ನಡೆಯಲಿ. ಈಗ ಹೋಗಲಿ ಬಿಡಿ " ಎಂದು ಅವಳು ಏಳುವುದರಲ್ಲಿದ್ದಳು. ಅಷ್ಟರಲ್ಲೇ ಆಳು ಚಹದ ಸಲಕರಣೆಗಳನ್ನು ತೆಗೆದುಕೊಂಡು ಒಳಹೊಕ್ಕ. ಅವಳು ಮತ್ತೆ ಕುಳಿತುಕೊಂಡಳು. ವಿಲಾಸ ಅವಳ ಕಡೆ ಕಣ್ಣೆತ್ತಿ ಕೂಡ ನೋಡಲಿಲ್ಲ. ಅವನು ಬ್ರಹ್ಮಸಮಾಜಿಯಾದರೂ ಶಿಷ್ಟಾಚಾರವನ್ನು ಅರಿತಿರಲಿಲ್ಲ. ಆಳಿನ ಎದುರಿನಲ್ಲೇ ಅವನು ಉದ್ಧಟತನದಿಂದ ರೇಗಿದ—"ನಾವು ನಿನ್ನೊಂದಿಗೆ ಸಂಬಂಧವನ್ನು ಇದ್ದಕಿದ್ದಂತೆ ಬಿಟ್ಟುಬಿಡಬಲ್ಲೆವು, ತಿಳಿಯಿತೇ ? "

ವಿಜಯಳು ಚಹ ಬೆರೆಸುತ್ತಿದ್ದಳು. ಅವಳಿದಕ್ಕೇನೂ ಉತ್ತರಕೊಡಲಿಲ್ಲ. ಆಳು ಹೊರಟುಹೋದಮೇಲೆ ಅವಳು ನಿಧಾನವಾಗಿಯೇ ಹೇಳಿದಳು—" ನಾನಿದರ ಚರ್ಚೆಯನ್ನು ನಿಮ್ಮೊಂದಿಗೆ ಮಾಡುವುದಿಲ್ಲ. ಕಕ್ಕನವ

ಗೊಂದಿಗೆ ಮಾಡುತ್ತೇನೆ." ಎಂದು ಒಂದು ಲೋಟ ಚಹವನ್ನು ಅವಳು ಅವನ ಮುಂಗೆ ಸರಿಸಿದಳು.

ವಿಲಾಸ ಚಹವನ್ನು ಮುಟ್ಟದೆ ತನ್ನ ಮಾತನ್ನೇ ಮತ್ತೊಮ್ಮೆ ಹೇಳಿದ "ಸಂಬಂಧ ಬಿಟ್ಟುಬಿಟ್ಟರೆ ಏನಾಗುತ್ತೆಂಬುದರ ಅರಿವಿದೆಯೇನಿನಗೆ?"

"ಇಲ್ಲ, ಏನಾದರಾಗಲಿ ನಿಮ್ಮ ಹೊಣೆಯ ಅರಿವು ನಿಮಗೆ ಅಷ್ಟು ಚೆನ್ನಾಗಿರುವಾಗ, ನನ್ನಿಷ್ಟವಿಲ್ಲದೆ ನೀವೇ ಆಹ್ವಾನ ಕೊಟ್ಟ ಜನರನ್ನು ಅವಮಾನಗೊಳಿಸುವ ಹೊಣೆಗಾರಿಕೆಯನ್ನು ಹೊತ್ತಮೇಲೆ ಅದನ್ನು ನೀವೇ ಸರಿಪಡಿಸಿಕೊಳ್ಳಿ. ಅದರಲ್ಲಿ ಪಾಲು ವಹಿಸಲು ನನ್ನನ್ನು ಬಲಾತ್ಕರಿಸ ಬೇಡಿ."

ವಿಲಾಸನ ಕಣ್ಣುಗಳಿಂದ ಕಿಡಿಗಳು ಹಾರಿದವು. ಅವನು ಗಟ್ಟಿಯಾಗಿ ಹೇಳಿದ—"ನಾನು ಕರ್ತವ್ಯಶೀಲ. ಕೆಲಸವೆಂದರೆ ನನಗೆ ಇಷ್ಟವೇ ಹೊರತು ಹುಡುಗಾಟ ನನಗೆ ಬೇಕಿಲ್ಲ. ಇದು ನೆನಪಿರಲಿ ವಿಜಯ"

"ಆಗಲಿ, ಇದನ್ನು ಮರೆಯುವುದಿಲ್ಲ." ವಿಜಯ ಸ್ವಾಭಾವಿಕವಾದ ಸ್ವರದಲ್ಲಿ ಹೇಳಿದಳು.

ಇದರಲ್ಲಡಗಿದ್ದ ವ್ಯಂಗ್ಯವನ್ನರಿತು ವಿಲಾಸ ಹುಚ್ಚನಂತಾಗಿ ಚೀರಿಕೊಂಡು ಹೇಳಿದ—"ಓಹೋ, ಹಾಗೆಯೇ ಆಗಲಿ. ನೀನು ಮರೆಯದಿರುವಂತೆ ಮಾಡುತ್ತೇನೆ."

ಇದಕ್ಕೆ ವಿಜಯಳೇನೂ ಉತ್ತರಕೊಡಲಿಲ್ಲ. ಅವಳು ತಲೆ ತಗ್ಗಿಸಿಕೊಂಡು ಚಹದ ಲೋಟದಲ್ಲಿ ಚಮಚವನ್ನಾಡಿಸುತ್ತಿದ್ದಳು. ಅವಳು ಸುಮ್ಮನಿದ್ದುದನ್ನು ನೋಡಿ ವಿಲಾಸನೂ ಸ್ವಲ್ಪಹೊತ್ತು ಸುಮ್ಮನಿದ್ದು ಸಮಾಧಾನ ತಂದುಕೊಂಡು ಹೇಳಿದ—"ಅಷ್ಟು ದೊಡ್ಡ ಮನೆಯಿಂದ ಉಪಯೋಗವೇನು? ಹೇಳು. ಅದನ್ನು ಹಾಗೇ ಇಟ್ಟಿರುವುದಕ್ಕಂತೂ ಆಗುವುದಿಲ್ಲ."

ಈಗ ವಿಜಯಳು ಮುಖವೆತ್ತಿ ದೃಢವಾಗಿ ಹೇಳಿದಳು—"ಉಹುಂ, ಆ ಮನೆಯನ್ನು ತೆಗೆದುಕೊಳ್ಳಬೇಕೆಂಬುದು ಇನ್ನೂ ನಿರ್ಧರವಾಗಿಲ್ಲವಲ್ಲ."

ಈ ಉತ್ತರವನ್ನು ಕೇಳಿ ಸಿಟ್ಟಿನಿಂದ ವಿಲಾಸ ಮೈಮರೆತ. ನೆಲದ

ಮೇಲೆ ಕಾಲನ್ನಪ್ಪಳಿಸಿ ಅವನು ಜೋರಾಗಿ ಕೂಗಿ ಹೇಳಿದ—"ಸಾವಿರ ಸಲ ನಿರ್ಧರವಾಗಿದೆ. ಸಮಾಜದ ಪ್ರಮುಖ ವ್ಯಕ್ತಿಗಳಿಗೆ ಆಹ್ವಾನಕೊಟ್ಟು ನಾನವರನ್ನು ಅವಮಾನಗೊಳಿಸಲಾರೆ. ಆ ಮನೆ ನಮಗೆ ಬೇಕೇಬೇಕು. ನಾನಿದನ್ನು ಮಾಡದ ಹೊರತು ಬಿಡುವುದಿಲ್ಲ, ಹೇಳಿದ್ದೇನೆ" ಎಂದು ಅವನು ಉತ್ತರದ ನಿರೀಕ್ಷಣೆ ಮಾಡದೆ ಕೋಣೆಯಿಂದ ಜಾಗ್ರತೆಯಾಗಿ ಹೊರಟು ಹೋದ.

೬

ಆ ಅಪರಿಚಿತ ವ್ಯಕ್ತಿ ಒಮ್ಮೆ ತನ್ನ ಸ್ನೇಹಿತನನ್ನು ಕರೆದುಕೊಂಡು ತನ್ನನ್ನು ಕೇಳಲು ಬರುತ್ತಾನೆಂದು ವಿಜಯಳು ಅಂದಿನಿಂದ ನಿರೀಕ್ಷಿಸುತ್ತಿದ್ದಳು. ಅಂದು ನಡೆದ ಮಾತುಕತೆಗಳೆಲ್ಲ ಅವಳ ಮನಸ್ಸಿನಲ್ಲಿ ಗುಯಗುಟ್ಟುತ್ತಿತ್ತು. ಅದರಲ್ಲಿ ಒಂದು ಶಬ್ದವನ್ನೂ ಅವಳು ಮರೆತಿರಲಿಲ್ಲ. ಅಂದಿನಿಂದ ಆ ಮಾತುಕತೆಗಳಲ್ಲಿ ತನ್ನಿಂದ ಅವನ ಮಿತ್ರ ಯಾವ ಆಶೆಯನ್ನೂ ಇಟ್ಟುಕೊಳ್ಳುವಂತಿಲ್ಲವೆಂಬುವ ಲಕ್ಷಣವನ್ನು ಆ ವ್ಯಕ್ತಿ ತೋರಿಸಿರಲಿಲ್ಲ. ನರೇಂದ್ರ ತನ್ನ ತಂದೆಯ ಮಿತ್ರರ ಮಗನೆಂದೂ ತಾನು ಹೇಳಿದುದೂ, ವಾಯಿದೆ ತೀರದ ಮೇಲೆ ಸಾಲ ತೀರಿಸಲು ಅವನಲ್ಲಿ ಶಕ್ತಿ ಇದೆಯೇ ಇಲ್ಲವೇ ಎಂದು ಪ್ರಸ್ತಾಪಿಸಿದುದೂ ಅವಳಿಗೆ ಚೆನ್ನಾಗಿ ನೆನಪಾಯಿತು. ಅವನ ಸರ್ವಸ್ವವೂ ಹೋಗುವಂತಿದ್ದರೂ ಅವನು ಸ್ವಲ್ಪವಾದರೂ ಪ್ರಯತ್ನ ಮಾಡಬಾರದೇ? ಭರವಸೆ ಇಲ್ಲದಿದ್ದರೂ ಒಮ್ಮೆ ಪ್ರಯತ್ನ ಮಾಡಬೇಕೆಂದು ಆತ್ಮೀಯರು ಸಲಹೆ ಕೊಡುತ್ತಾರೆ. ಅಂತಹುದರಲ್ಲಿ ಈ ವ್ಯಕ್ತಿ ಪ್ರಪಂಚಕ್ಕೇ ಹೊರತೇ?

ನದೀ ದಡದಲ್ಲಿ ಮತ್ತೆಂದೂ ಅವನ ಭೇಟಿಯಾಗಲಿಲ್ಲ. ಅವರೊಮ್ಮೆ ಖಂಡಿತ ಬರುತ್ತಾರೆಂದು ಅವಳು ಬೆಳಗಿನಿಂದ ಸಂಜೆಯವರೆಗೂ ನಿರೀಕ್ಷಿಸುತ್ತಿದ್ದಳು. ಆದರೆ ದಿನಗಳು ಕಳೆದಂತೆಲ್ಲ ಅವರೂ ಬರಲಿಲ್ಲ. ಆ ಅದ್ಭುತ ಡಾಕ್ಟರೂ ಬರಲಿಲ್ಲ.

ವೃದ್ಧ ರಾಸಬಿಹಾರಿ ವಿಜಯಳನ್ನು ಭೇಟಿ ಮಾಡಿದಾಗ, ಈ ಮಧ್ಯೆ ತನ್ನೊಂದಿಗೆ ಆ ಹುಡುಗನ ಮಾತುಕತೆ ನಡೆಯಿತೆಂಬುದರ ಸುಳಿವನ್ನೂ ತೋರಗೊಡಲಿಲ್ಲ. ಈ ನಿಶ್ಚಯ ಮಾಡಿಬಿಟ್ಟಮೇಲೆ ಈಗ ಹಿಂದು ಮುಂದು ನೋಡುವುದು ಉಚಿತವಲ್ಲೆಂದೇ ರಾಸಬಿಹಾರಿ ಹೇಳಿದ. ಸಂಕೋಚದಿಂದ

ವಿಜಯಳೂ ಆ ಚರ್ಚೆಮಾಡಲಿಲ್ಲ. ಮಾರ್ಗಶೀರ್ಷ ತಿಂಗಳು ಮುಗಿದು ಪುಷ್ಯಮಾಸ ಆರಂಭವಾದ ಮೊದಲನೆಯ ದಿನವೇ ತಂದೆಮಕ್ಕಳಿಬ್ಬರೂ ಬಂದು ಭೇಟಿ ಕೊಟ್ಟರು.

ರಾಸಬಿಹಾರಿ ಹೇಳಿದ—"ಇನ್ನೇನೂ ಹೆಚ್ಚು ದಿನಗಳು ಉಳಿದಿಲ್ಲ ಮಗೂ, ಅಷ್ಟರಲ್ಲೇ ಎಲ್ಲ ಸಿದ್ಧತೆಗಳನ್ನೂ ಮಾಡಿಕೊಳ್ಳಬೇಕು."

"ಅವರು ತಾವಾಗಿಯೇ ಆ ಮನೆ ಬಿಟ್ಟು ಹೋಗುವವರೆಗೂ ನಾವೇನೂ ಮಾಡುವಂತಿಲ್ಲ." ವಿಜಯಳು ಆಶ್ಚರ್ಯದಿಂದ ಹೇಳಿದಳು.

ವಿಲಾಸಬಿಹಾರಿ ತುಸು ನಕ್ಕ. ರಾಸಬಿಹಾರಿ ಹೇಳಿದ—"ಯಾರ ವಿಷಯ ಹೇಳುತ್ತಿದ್ದೀ ಮಗು? ಜಗದೀಶನ ಮಗನೇ? ಅವನು ನಿನ್ನೆಯೇ ಮನೆಯನ್ನು ಬಿಟ್ಟುಬಿಟ್ಟ."

ಇದು ನಿಜವಾಗಿಯೂ ವಿಜಯಳಿಗೆ ಗಾಸಿಯುಂಟು ಮಾಡಿತು. ಅವಳು ಕೂಡಲೇ ವಿಲಾಸನಿಗೆ ಬೆನ್ನುಮಾಡಿ ಸ್ತಬ್ಧಳಾಗಿ ನಿಂತು ಸ್ವಲ್ಪ ಹೊತ್ತಿನಮೇಲೆ ಸಮಾಧಾನ ತಂದುಕೊಂಡು ರಾಸಬಿಹಾರಿಯನ್ನು ಕೇಳಿದಳು—"ಅವರ ಸಾಮಾನುಗಳೆಲ್ಲ ಎಲ್ಲಿ? ಅವರೆಲ್ಲವನ್ನೂ ಒಯ್ದರೇ?"

ವಿಲಾಸ ಹಿಂದಿನಿಂದ ಹಾಸ್ಯದ ಭಂಗಿಯಲ್ಲಿ ಹೇಳಿದ—"ಆ ಸಾಮಾನುಗಳಲ್ಲಿ ಮೂರು ಕಾಲಿನ ಮಂಚವೊಂದಿತ್ತು. ಅದರ ಮೇಲೆ ಅವನು ಮಲಗುವುದೆಂದು ತೋರುತ್ತೆ. ನಾನದನ್ನು ಹೊರಗೆಳೆದು ಮರದ ಕೆಳಗೆ ಹಾಕಿದೆ. ಅವನಿಗೆ ಬೇಕಾದರೆ ಒಯ್ಯಬಹುದು. ನಮ್ಮದೇನೂ ಅಭ್ಯಂತರವಿಲ್ಲ."

ವಿಜಯಳು ಸುಮ್ಮನಿದ್ದಳು. ಅವಳ ಮುಖದಲ್ಲಿ ಸಂತಾಪದ ಚಿಹ್ನೆಯನ್ನು ನೋಡಿ ರಾಸಬಿಹಾರಿ ತಿರಸ್ಕಾರದಿಂದ ಹೇಳಿದ—"ವಿಲಾಸ ಇದು ನಿನ್ನ ತಪ್ಪು. ಮನುಷ್ಯ ಎಷ್ಟೇ ಅಪರಾಧಿಯಾಗಲಿ, ಅವನಿಗೆ ದೇವರೆಷ್ಟೇ ಶಿಕ್ಷೆ ಕೊಡಲಿ, ಅವನ ದುಃಖದಲ್ಲಿ ನಾವು ಸಹಾನುಭೂತಿ ತೋರಿಸಬೇಕು. ನಿನಗೆ ಅದಕ್ಕಾಗಿ ಮನಸ್ಸಿನಲ್ಲಿ ದುಃಖವಾಗುತ್ತಿಲ್ಲವೆಂದು ನಾನು ಹೇಳುವುದಿಲ್ಲ. ಆದರೆ ಅದನ್ನು ಬಹಿರಂಗಪಡಿಸಬೇಕಾದದ್ದು ನಿನ್ನ ಕರ್ತವ್ಯ. ಜಗದೀಶನ ಮಗನನ್ನು ನೀನು ಭೇಟಿ ಮಾಡಿದ್ದೆಯಾ? ನನ್ನನ್ನು ಹೋಗಿ ನೋಡೆಂದು ಅವನಿಗೇಕೆ ಹೇಳಲಿಲ್ಲ? ಏನಾದರೂ ಸ್ವಲ್ಪ........"

ಅವನ ಮಾತಿನ್ನೂ ಮುಗಿದಿರಲಿಲ್ಲ. ಅಷ್ಟರಲ್ಲೇ ವಿಲಾಸ ಅವನ

ಇಂಗಿತವನ್ನೂ ಲಕ್ಷ್ಯಮಾಡದೆ ಅವಜ್ಞೆಯಿಂದ ಹೇಳಿದ—"ಅವನನ್ನು ಭೇಟಿಮಾಡಿ ಆಹ್ವಾನ ಕೊಡುವುದಲ್ಲದೆ ನನಗೆ ಬೇರೆ ಕೆಲಸವೇ ಇಲ್ಲವೇ? ಅಪ್ಪ ನೀವು ಹೇಳುವುದಕ್ಕೆ ಒಂದು ಮಿತಿಯೇ ಬೇಡವೇ? ಅಲ್ಲದೆ ಅವನು ನಾನು ಹೋಗುವುದಕ್ಕೆ ಮೊದಲೇ ತನ್ನ ಟ್ರಂಕು, ಸಂದೂಕ, ಯಂತ್ರ ಮೊದಲಾದುವನ್ನು ಸರಿಮಾಡಿಕೊಂಡು ಹೊರಟು ಹೋಗಿದ್ದ. ವಿಲಾಯತಿಯ ಡಾಕ್ಟರಂತೆ! ಎಲ್ಲೋ ಶುದ್ಧ ಹೇಡಿ! ತಿಳಿಗೇಡಿ....!!" ಎಂದು ಅವನು ಇನ್ನೂ ಏನನ್ನೋ ಹೇಳುತ್ತಿದ್ದ. ಅಷ್ಟರಲ್ಲೇ ರಾಸಬಿಹಾರಿ ವಿಜಯಳ ಮುಖನೋಡಿ ಸಿಟ್ಟಿನಿಂದ ಹೇಳಿದ—"ವಿಲಾಸ, ನಿನ್ನ ಈ ಮಾತುಗಳನ್ನು ನಾನು ಕ್ಷಮಿಸಲಾರೆ. ನಿನ್ನ ನಡತೆಗೆ ನೀನು ತಲೆ ತಗ್ಗಿಸಬೇಕು. ಪಶ್ಚಾತ್ತಾಪ ಪಡಬೇಕು."

ಆದರೆ ಇದರಿಂದ ವಿಲಾಸ ಸ್ವಲ್ಪವೂ ಶಾಂತನಾಗದೆ ಮುಂದುವರಿಸಿದ—"ಅದೇಕೆ? ಹೇಳಿ. ಇತರರ ದುಃಖದಲ್ಲಿ ಅನುತಾಪ ತೋರಿಸುವ ಶಿಕ್ಷಣ ನನಗೆ ಸಾಕಷ್ಟು ದೊರೆತಿದೆ. ಆದರೆ ಮನೆಗೆ ಬಂದು ಅವಮಾನ ಮಾಡಿಹೋದ ಆ ಧೂರ್ತನನ್ನು ನಾನು ಕ್ಷಮಿಸಲಾರೆ. ನಾನಷ್ಟು ಕೀಳಲ್ಲ."

ಅವನ ಮಾತನ್ನು ಕೇಳಿ ಅವರಿಬ್ಬರೂ ಚಕಿತರಾದರು. ರಾಸಬಿಹಾರಿ ಹೇಳಿದ—"ಮನೆಗೆ ಬಂದು ಯಾರು ನಿನಗೆ ಅವಮಾನ ಮಾಡಿದರು? ನೀನು ಯಾರ ವಿಷಯ ಹೇಳುತ್ತಿದ್ದೀ?"

ವಿಲಾಸ ಕೃತ್ರಿಮ ಗಾಂಭೀರ್ಯದಿಂದ ಹೇಳಿದ—"ಜಗದೀಶಬಾಬುಗಳ ಸುಪುತ್ರ ನರೇಂದ್ರನ ವಿಷಯವನ್ನೇ ನಾನು ಹೇಳುತ್ತಿದ್ದೇನೆ. ಅವನೊಂದುದಿನ ಇದೇ ಕೋಣೆಯಲ್ಲಿ ನನ್ನ ಅವಮಾನ ಮಾಡಿ ಹೋಗಿದ್ದಾನೆ. ಆಗ ಅವನ ಪರಿಚಯವಿರಲಿಲ್ಲ. (ವಿಜಯಳ ಕಡೆ ತಿರುಗಿ) ಅವನು ನಿನ್ನ ಅವಮಾನವನ್ನೂ ಮಾಡಿ ಹೋಗಿದ್ದಾನೆ. ನೆನಪಿಲ್ಲವೇ?"

ವಿಜಯಳು ಚಕಿತಳಾಗಿ ತಿರುಗಿ ನೋಡಿದಳು. ವಿಲಾಸ ಹೇಳಿದ—"ಪೂರ್ಣಬಾಬುವಿನ ಅಳಿಯನೆಂದು ಹೇಳಿಕೊಂಡು ಇಲ್ಲಿ ಬಂದು ಅವಮಾನಮಾಡಿ ಹೋದವನು ಯಾರು ಗೊತ್ತೇ? ಆಗ ಅವನಿಗೆ ಬಹಳ ಆಶ್ರಯ ಕೊಟ್ಟಿದ್ದೆ. ಅವನೇ ನರೇಂದ್ರ. ಆಗ ಅವನ ನಿಜವಾದ ಪರಿಚಯ ಹೇಳಿಕೊಂಡರೆ ಅವನನ್ನು ಗಂಡಸೆನ್ನುತ್ತಿದ್ದೆ. ಹೇಡಿ!"

ವಿಜಯಳ ಮುಖದಲ್ಲಿ ತೀವ್ರ ಸಂತಾಪ ತಲೆಸೋರಿತು. ಇದನ್ನು ನೋಡಿ ಅವರಿಬ್ಬರೂ ಆಶ್ಚರ್ಯದಿಂದ ಅವಾಕ್ಕಾದರು.

೧೦

ರಜೆ ಹತ್ತಿರವಾಗಿತ್ತು. ಆದ್ದರಿಂದ ಜಗದೀಶನ ದೊಡ್ಡಮನೆಯ ನಡುಮನೆಯನ್ನು ಮಂದಿರಕ್ಕೂ, ಅದರಲ್ಲಿನ ಇತರ ಕೋಣೆಗಳನ್ನು ಕಲಿಕತ್ತೆಯಿಂದ ಬರಲಿದ್ದ ಮಾನ್ಯ ಅತಿಥಿಗಳಿಗೂ ಸಿದ್ಧಪಡಿಸಲಾಗಿತ್ತು. ವಿಲಾಸಬಿಹಾರಿಯೇ ಅದರ ಮೇಲ್ವಿಚಾರಕನಾಗಿದ್ದ. ಸಾಮಾನ್ಯ ಅತಿಥಿಗಳ ಸಂಖ್ಯೆಯೂ ಹೆಚ್ಚಾಗಿತ್ತು. ವಿಲಾಸನ ಸ್ನೇಹಿತರು ರಾಸಬಿಹಾರಿಯ ಮನೆಯಲ್ಲೂ, ಉಳಿದವರು ವಿಜಯಳ ಮನೆಯಲ್ಲೂ ತಂಗಬೇಕೆಂದೂ ಏರ್ಪಡಿಸಲಾಗಿತ್ತು. ಮಹಿಳೆಯರಿಗೂ ಇದೇ ವ್ಯವಸ್ಥೆಯಾಗಿತ್ತು.

ಅಂದು ಬೆಳಿಗ್ಗೆ ವಿಜಯಳು ಸ್ನಾನಮಾಡಿ ಕೆಳಗಿನ ದಿವಾನ ಕೋಣೆಯನ್ನು ಹೊಕ್ಕಳು. ಅಲ್ಲಿ ಪರೇಶ ತನ್ನ ಉಡಿಯಿಂದ ಅವಳನ್ನು ತಿನ್ನುತ್ತಾ ಇನ್ನೊಂದು ಕೈಯಿಂದ ಕಟ್ಟಿದ್ದ ಒಂದು ಕರುವಿನ ಮೇಲೆ ಕೈಯಾಡಿಸುತ್ತಾ ಅನಿರ್ವಚನೀಯ ಆನಂದದಲ್ಲಿ ಮಗ್ನನಾಗಿದ್ದ. ಕರುವೂ ಕಣ್ಣುಮುಚ್ಚಿಕೊಂಡು ಕುತ್ತಿಗೆಯನ್ನು ಮೇಲಕ್ಕೆತ್ತಿ ತೃಪ್ತಿಯನ್ನು ಸೂಚಿಸುತ್ತಿತ್ತು.

ಅದೇಕೋ ಏನೋ ಆ ಎರಡು ಚೇತನಗಳ ವಿಲಕ್ಷಣ ಸೌಹಾರ್ದವನ್ನು ನೋಡಿ ವಿಜಯಳ ಕಣ್ಣಿನಲ್ಲಿ ನೀರು ತುಂಬಿ ಬಂದಿತು. ಈ ಮನೆಯಲ್ಲಿ ಅವನೇ ವಿಜಯಳಿಗೆ ಎಲ್ಲರಿಗಿಂತಲೂ ಹೆಚ್ಚು ವಿಜಯನಾಗಿದ್ದ. ಅವಳು ತನ್ನ ಕಣ್ಣೊರೆಸಿಕೊಂಡು ಅವನನ್ನು ಹತ್ತಿರ ಕರೆದು ಸ್ನೇಹ ಮತ್ತು ಕುತೂಹಲದಿಂದ ಕೇಳಿದಳು—“ಲೋ ಪರೇಶ, ನಿಮ್ಮಮ್ಮ ನಿನಗೆ ಇದೇ ಬಟ್ಟೆಯನ್ನೇನೋ ಹೊಲೆಸಿಕೊಟ್ಟಿರುವುದು? ಇದು ಒಂದು ಬಟ್ಟೆಯೇ?”

ಪರೇಶ ಕುತ್ತಿಗೆಯನ್ನು ತಿರುಗಿಸಿ ಓರೆಗಣ್ಣಿನಿಂದ ತನ್ನ ಪಂಚೆಯ ಅಂಚಿನೊಂದಿಗೆ, ವಿಜಯಳ ಸೀರೆಯ ದೊಡ್ಡ ಅಂಚನ್ನು ಹೋಲಿಸಿ ನೋಡಿ ಮುಖವನ್ನು ಚಿಕ್ಕದು ಮಾಡಿಕೊಂಡ. ಅವನ ಅಭಿಪ್ರಾಯವನ್ನು ತಿಳಿದುಕೊಂಡು ವಿಜಯಳು ತನ್ನ ಸೀರೆಯ ಅಂಚನ್ನು ತೋರಿಸಿ ಹೇಳಿದಳು—“ಇಂತಹುದಾದರೆ ಚೆನ್ನಾಗಿರುವುದಿಲ್ಲವೇನೋ?”

“ಅಮ್ಮನಿಗೆ ಯಾವುದೂ ತಿಳಿಯುವುದಿಲ್ಲ.” ಅವನು ಕೂಡಲೆ ಅವಳ ಮಾತಿಗೆ ಅನುಮೋದಿಸಿ ಹೇಳಿದ.

" ನಿನಗೆ ಇಂತಹದೇ ಒಂದು ಪಂಚೆಯನ್ನು ತೆಗೆದುಕೊಡುತ್ತೇನೆ. ಆದರೆ........"

'ಆದರೆ' ಎಂಬುದರ ಮೇಲೆ ಅವನ ಗಮನ ಹೋಗಲಿಲ್ಲ. ಅವನು ಮುಖವೆಲ್ಲ ಬಾಯಿಮಾಡಿಕೊಂಡು ಸಂಕೋಚದಿಂದ " ಯಾವಾಗ ತೆಗೆದು ಕೊಡುತ್ತೀ ? " ಎಂದು ಕೇಳಿದ.

" ನೀನು ನನ್ನದೊಂದು ಮಾತನ್ನು ಕೇಳಿದರೆ ತೆಗೆದುಕೊಡುತ್ತೇನೆ. "

" ಏನದು ? "

ವಿಜಯಳು ತುಸು ಯೋಚಿಸಿ ಹೇಳಿದಳು—" ನಿಮ್ಮಮ್ಮ ಅಥವಾ ಇನ್ನಾರಿಗಾದರೂ ತಿಳಿದರೆ ನಿನಗೆ ಬಟ್ಟೆ ತೆಗೆದುಕೊಡುವುದಿಲ್ಲ."

" ಅಮ್ಮನಿಗೆ ಹೇಗೆ ಗೊತ್ತಾಗುತ್ತೆ? ನೀನು ಹೇಳು, ಈಗಲೇ ಹೇಳು."

" ದಿಘಡಾಹಳ್ಳಿ ನಿನಗೆ ಗೊತ್ತಿದೆಯೇ ? "

" ಓಹೋ ! ಅದೇ. ಅಲ್ಲಿ ಚಿಟ್ಟೆ ಹುಳದ ಮೊಟ್ಟೆ ಆರಿಸಲು ಎಷ್ಟೋ ಸಲ ಹೋಗಿದ್ದೆ."

" ಅಲ್ಲಿ ದೊಡ್ಡಮನೆ ಯಾರದು ಹೇಳು ? "

" ಬ್ರಾಹ್ಮಣರದೇ. ಅದೇ ಹೋದ ವರುಷ ಹೆಂಡ ಕುಡಿದು ಮಹಡಿಯಿಂದ ಬಿದ್ದು ಸಾಯಲಿಲ್ಲವೇ ? ಅಲ್ಲೇ ಗೋವಿಂದನ ಅರಳು ಬತ್ತಾಸಿನ ಅಂಗಡಿ ಇದೆ. ಅದೇ ಅವನ ಕೈಸಾಲೆ. ಗೋವಿಂದ ಏನು ಹೇಳುತ್ತಾನೆ ಗೊತ್ತಿದೆಯೇ? ಈಗ ಪದಾರ್ಥಗಳೆಲ್ಲ ತುಟ್ಟಿಯಾಗಿದೆ. ಒಂದೂವರೆ ಕಾಸಿಗೆ ಈಗ ಎರಡೂವರೆ ಬತ್ತಾಸಿನ ಬಿಲ್ಲೆಗಳನ್ನು ಕೊಡುವುದಕ್ಕಾಗುವುದಿಲ್ಲ, ಎರಡೇ ಕೊಡುವುದು ಎನ್ನುತ್ತಾನೆ. ಬೇಕಾದರೆ ನೀನು ಮೂರು ಕಾಸು ಕೊಡು, ಅದಕ್ಕೆ ನಾನು ಐದೂವರೆ ಬಿಲ್ಲೆ ತಂದುಕೊಡುತ್ತೇನೆ."

" ಹಾಗಾದರೆ ಆರುಕಾಸಿನ ಬತ್ತಾಸನ್ನು ತಂದುಕೊಡುತ್ತೀಯಾ ? "

" ಹೂಂ, ಆಗಲಿ. ಒಂದು ಕೈಯಲ್ಲಿ ಮೂರುಕಾಸಿಗೆ ನಾಲ್ಕೂವರೆ ಚೌಕ ಬತ್ತಾಸನ್ನು ಎಣಿಸಿಕೊಳ್ಳುತ್ತೇನೆ. ಇನ್ನೊಂದು ಕೈಯಲ್ಲಿ ಇನ್ನೊಂದು ಮೂರುಕಾಸಿಗೆ ಐದೂವರೆ ಚೌಕ ಕೊಡು ಎಂದು ಅಂಗಡಿಯವನಿಗೆ ಹೇಳುತ್ತೇನೆ. ಆಮೇಲೆ ನೀನು ಹೇಳಿದ್ದೀಯೆಂದು ಹೇಳಿ ಎರಡನ್ನು

ಕೊಸರಿಗೆ ಹಾಕಿಸಿಕೊಂಡು ಬರುತ್ತೇನೆ. ಆಮೇಲೆ ಅವನ ಕೈಯಲ್ಲಿ ಆರು ಕಾಸು ಕೊಡುತ್ತೇನೆ, ಸರಿಯೇ ?"

"ಹೂಂ, ಆಮೇಲೆ ಕಾಸು ಕೊಡು. ಆ ದೊಡ್ಡ ಮನೆಯಲ್ಲಿದ್ದ ನರೇಂದ್ರಬಾಬು ಎಲ್ಲಿಗೆ ಹೋಗಿದ್ದಾರೆಂದು ಅಂಗಡಿಯವನನ್ನು ಕೇಳಬೇಕು. 'ಅವರಿರುವ ಮನೆಯನ್ನು ತೋರಿಸುತ್ತೀಯಾ ?' ಎಂದು ಕೇಳುತ್ತೀಯಾ ?"

"ಹೂಂ, ದುಡ್ಡು ಕೊಡು ಈಗಲೇ ತರುತ್ತೇನೆ." ಪರೇಶ ತಲೆಯಲ್ಲಾಡಿಸುತ್ತಾ ಹೇಳಿದ.

"ನಾನು ಹೇಳಿದ್ದು ?"

"ಅದನ್ನೂ ಕೇಳಿಬರುತ್ತೇನೆ."

"ಬತ್ತಾಸು ಕೊಂಡುಕೊಂಡು ಅದನ್ನು ಮರೆತುಬಿಟ್ಟರೆ ?"

"ಮೊದಲು ಕಾಸು ಕೊಡಮ್ಮ ನಾನು ಬೇಗ ಓಡಿಬರುತ್ತೇನೆ."

"'ಪರೇಶ, ಎಲ್ಲಿಗೆ ಹೋಗಿದ್ದೆಯೋ ?' ಎಂದು ನಿಮ್ಮಮ್ಮ ಕೇಳಿದರೆ ಏನು ಹೇಳುತ್ತೀ ?"

ಪರೇಶ ಬಹಳ ಬುದ್ಧಿವಂತನಂತೆ ನಕ್ಕು ಹೇಳಿದ—"ನಾನೆಲ್ಲ ಸರಿಯಾಗಿ ಹೇಳುತ್ತೇನೆ. ಬತ್ತಾಸನ್ನು ಹೀಗೆ ಸೆರಗಿನಲ್ಲಿ ಮುಚ್ಚಿಟ್ಟುಕೊಂಡು 'ಅಮ್ಮಾಜಿ ಅಲ್ಲಿ ಬ್ರಾಂಬ್ರ ಮನೆಯ ಹತ್ತಿರ ನರೇಂದ್ರಬಾಬು ಎಲ್ಲಿದ್ದಾರೆಂದು ತಿಳಿದುಕೊಂಡು ಬಾ ಎಂದಳು. ಅದಕ್ಕೆ ಹೋಗಿದ್ದೆ' ಎಂದು ಹೇಳುತ್ತೇನೆ. ನೀನು ಬೇಗ ಕಾಸು ಕೊಡಮ್ಮ."

ವಿಜಯಳು ನಕ್ಕು ಹೇಳಿದಳು—"ನೀನೆಂತಹ ಕೆಟ್ಟ ಹುಡುಗನೋ ಪರೇಶ. ತಾಯಿಗೆ ಸುಳ್ಳು ಹೇಳುತ್ತಾರೇನೊ ? 'ಬತ್ತಾಸು ತರಲು ಹೋಗಿದ್ದೆ' ಎಂದು ಹೇಳು. ನೋಡು. ಆ ಅಂಗಡಿಯವನನ್ನು ಆ ಮಾತು ಕೇಳಲು ಮರೆಯಬೇಡ, ಮರೆತರೆ ಪಂಚೆ ಇಲ್ಲ. ಈಗಲೇ ಹೇಳಿದ್ದೇನೆ."

"ಆಗಲಿ" ಎಂದು ಪರೇಶ ಕಾಸನ್ನು ತೆಗೆದುಕೊಂಡು ಜಾಗ್ರತೆಯಾಗಿ ಓಡಿಹೋದಮೇಲೆ ವಿಜಯಳು ಅವನು ಹೋದಕಡೆಯೇ ಶೂನ್ಯ ದೃಷ್ಟಿಯಿಂದ ನೋಡುತ್ತ ನಿಂತಳು. ಈ ವಿಷಯವನ್ನು ತಿಳಿದುಕೊಳ್ಳುವ ಕುತೂಹಲ ಸಹಜವಾಗಿತ್ತು. ಯಾರನ್ನಾದರೂ ಕಳುಹಿಸಿ ಈ ವಿಷಯ

ವನ್ನು ಮುಂಚಿತವಾಗೇ ತಿಳಿದುಕೊಳ್ಳಬಹುದಾಗಿತ್ತು. ಆದರೆ ಇಂದು ಅದೇಕೋ ಅದಕ್ಕಾಗಿ ಅವಳಿಗೆ ಬಹಳ ಸಂಕೋಚವೆನಿಸಿತು. ತನ್ನ ಈ ಕಳ್ಳತನಕ್ಕಾಗಿ ಅವಳಿಗೆ ಬಹಳ ನಾಚಿಕೆಯಾಯಿತು. ಆದರೆ ಆ ನಾಚಿಕೆ ಚಿಂತೆಯಲ್ಲಿ ಸೇರಿಹೋಗಿದ್ದರಿಂದ ಅದನ್ನವಳು ಬೇರೆಯಾಗಿ ನೋಡಲು ಆಗಲಿಲ್ಲ.

ಅವಳು ಕೆಲವು ಕಾಗದ ಪತ್ರಗಳನ್ನು ಬರೆಯಬೇಕಾಗಿದ್ದುದರಿಂದ, ಕಾಗದ ಲೇಖನಿಯನ್ನು ಹಿಡಿದು ಕುಳಿತಳು. ಆದರೆ ಅನೇಕ ಯೋಚನೆಗಳ ಮಧ್ಯದಲ್ಲಿ ಅವಳು ಎಷ್ಟೋ ಕಾಗದಗಳನ್ನು ಹರಿದು ಹಾಕಿ ಕೊನೆಗೆ ಲೇಖನಿಯನ್ನು ಕೆಳಗಿಡಬೇಕಾಯಿತು. ಪರೇಶನ ಸುಳಿವೂ ಕಾಣಲಿಲ್ಲ. ಮನಸ್ಸಿನ ಉದ್ವೇಗವನ್ನು ತಡೆಯಲಾರದೆ ಅವಳು ಮಹಡಿಯ ಮೇಲೆ ಹತ್ತಿ ಪರೇಶನ ಹಾದಿಯನ್ನು ನೋಡತೊಡಗಿದಳು. ಬಹಳ ದೂರದಲ್ಲಿ ಅವನು ಜಾಗ್ರತೆಯಾಗಿ ಬರುತ್ತಿದ್ದುದು ಕಂಡಿತು. ವಿಜಯಳು ನಡುಗುತ್ತಿದ್ದ ಕಾಲುಗಳಿಂದ, ಶಂಕೆಯ ಹೃದಯವನ್ನು ಹೊತ್ತು ಕೆಳಗಿಳಿದು ಕೋಣೆಯನ್ನು ಪ್ರವೇಶಿಸುತ್ತಿದ್ದಂತೆ ಪರೇಶ ಬತ್ತಾಸನ್ನು ಮುಚ್ಚಿಕೊಂಡು ಕಳ್ಳನಂತೆ ಮೆಲ್ಲಗೆ ಹೆಜ್ಜೆಯಿಡುತ್ತಾ ಒಳಗೆ ಬಂದು “ ಅಮ್ಮಾಜಿ ಆರು ಕಾಸಿಗೆ ಹನ್ನೆರಡು ಬತ್ತಾಸು ತಂದಿದ್ದೇನೆ”ಂದು ಹೇಳಿದ.

“ ಅಂಗಡಿಯವನು ಏನು ಹೇಳಿದ ? ” ವಿಜಯಳು ಭಯದಿಂದ ಕೇಳಿದಳು.

ಪರೇಶ ಉಬ್ಬಸಪಡುತ್ತ ಹೇಳಿದ—“ ಮೂರು ಕಾಸಿಗೆ ಆರು ಬತ್ತಾಸು ಕೊಟ್ಟಿದ್ದನ್ನು ಯಾರ ಮುಂದೂ ಹೇಳಕೂಡದೆಂದು ಹೇಳಿದ. ಅವನು ಹೇಳಿದ್ದೇನು ಗೊತ್ತೇ ? ”

“ ಆ ಬ್ರಾಹ್ಮಣರ ಮನೆಯ ನರೇಂದ್ರಬಾಬುಗಳ ವಿಷಯ........? ” ವಿಜಯಳು ಅವನನ್ನು ಮಧ್ಯದಲ್ಲಿ ತಡೆದು ಹೇಳಿದಳು.

“ ಅವರಲ್ಲಿಲ್ಲವಂತೆ, ಎಲ್ಲಿಗೋ ಹೋಗಿದ್ದಾರಂತೆ, ಗೋವಿಂದ ಏನು ಹೇಳಿದ ಗೊತ್ತೇ ಅಮ್ಮ? ಹನ್ನೆರಡು ಬತ್ತಾಸು........? ”

“ ಇದೆಲ್ಲ ತೊಗೊಂಡುಹೋಗು ಇಲ್ಲಿಂದ.” ವಿಜಯಳು ಬಹಳ ಬೇಸರದಿಂದ ಹೇಳಿ, ಅಲ್ಲಿಂದ ದೂರ ಸರಿದು ಕಿಟಕಿಯಿಂದ ಹೊರನೋಡುತ್ತ ನಿಂತಳು.

ಆ ಅನಿರೀಕ್ಷಿತ ಕೋಪಕ್ಕಾಗಿ ಅವನು ಬೆದರಿದ. ಅವನು ಜಾಗ್ರತೆಯಾಗಿ ಹೋಗಿಬಂದದ್ದೂ ಅಲ್ಲದೆ, ಹನ್ನೊಂದಕ್ಕೆ ಬದಲು ಬಹಳ ಚಾತುರ್ಯದಿಂದ ಹನ್ನೆರಡು ಮಿಠಾಯಿಯನ್ನು ತಂದರೂ ವಿಜಯಳು ಸಂತೋಷಪಟ್ಟುಕೊಳ್ಳದಿದ್ದುದಕ್ಕಾಗಿ ಪರೇಶ ಬಹಳ ಖಿನ್ನನಾಗಿ ಎರಡು ಕೈಗಳಲ್ಲೂ ಬತ್ತಾಸಿನ ಪಟ್ಟಣವನ್ನು ಹಿಡಿದುಕೊಂಡು—"ಅವನು ಇನ್ನೂ ಹೆಚ್ಚು ಕೊಡಲಿಲ್ಲ ಅಮ್ಮಾಜೀ" ಎಂದ.

ವಿಜಯಳು ಇದಕ್ಕೆ ಉತ್ತರಕೊಡಲಿಲ್ಲ. ಆದರೂ ಸ್ವಲ್ಪಹೊತ್ತಿನ ಮೇಲೆ ಅವನ ಕಡೆ ನೋಡದಿದ್ದರೂ ಅವನ ಮನೋಗತವನ್ನರಿತು ಕರುಣೆಯಿಂದ ಹೇಳಿದಳು—"ಹೋಗು ಪರೇಶ ಇದೆಲ್ಲ ತಿನ್ನು ಹೋಗು."

"ಇದೆಲ್ಲವನ್ನೂ?" ಅವನು ಭಯದಿಂದ ಕೇಳಿದ.

"ಹೂಂ, ಎಲ್ಲವನ್ನೂ, ನನಗೆ ಅದೇನೂ ಬೇಡ." ವಿಜಯಳು ಮುಖ ತಿರುಗಿಸದೇ ಹೇಳಿದಳು.

ಇದು ಸಿಟ್ಟಿನಿಂದ ಆಡಿದ ಮಾತೆಂದು ಪರೇಶ ತಿಳಿದುಕೊಂಡು ಸ್ವಲ್ಪ ಹೊತ್ತು ಸುಮ್ಮನೆ ನಿಂತಿದ್ದಮೇಲೆ ಅವನಿಗೆ ಪಂಚೆಯು ನೆನಪಾಗಿ ಇನ್ನೊಂದು ವಿಷಯ ಜ್ಞಾಪಕಕ್ಕೆ ಬಂದು ಅವನು ಮೆಲ್ಲಗೆ ಕೇಳಿದ— "ಭಟ್ಟಾಚಾರ್ಯರನ್ನು ಕೇಳಿಬರಲೇ?" ಅಮ್ಮಾಜೀ?

"ಯಾವ ಭಟ್ಟಾಚಾರ್ಯರನ್ನೋ? ಏನೆಂದು ಕೇಳಿಬರುತ್ತೀಯೋ?" ಉತ್ಸುಕಳಾಗಿ ಅವಳು ಈ ಪ್ರಶ್ನೆ ಕೇಳುತ್ತಿದ್ದಂತೆಯೇ ಅವಳ ಮಾತು ಅರ್ಧದಲ್ಲೇ ನಿಂತುಹೋಯಿತು. ಕೈಸಾಲೆಯಲ್ಲಿ ನರೇಂದ್ರ ಕಾಣಿಸಿಕೊಂಡ ಮರುಕ್ಷಣವೇ ಕೋಣೆಯಲ್ಲಿ ಪ್ರವೇಶಿಸಿ ಕೈಜೋಡಿಸಿ ನಮುಸ್ಕಾರ ಮಾಡಿದ.

"ನರೇಂದ್ರಬಾಬುಗಳು ಎಲ್ಲಿಗೆ ಹೋಗಿದ್ದಾರೆಂದು......." ಪರೇಶ ಹೇಳಿದ.

ವಿಜಯಳಿಗೆ ಪ್ರತಿನಮುಸ್ಕಾರ ಮಾಡುವ ಅವಕಾಶವೂ ಆಗಲಿಲ್ಲ. ನಾಚಿಕೆಯಿಂದ ಅವಳ ಮುಖವೆಲ್ಲ ಕೆಂಪೇರಿತು. ಅವಳು ಅತ್ಯಂತ ವ್ಯಗ್ರಳಾಗಿ ಹೇಳಿದಳು—"ಉಂ, ಸಾಕು, ಇನ್ನು ಹೋಗು. ಕೇಳುವ ಅಗತ್ಯವೇನೂ ಇಲ್ಲ."

ಇದೂ ಸಿಟ್ಟಿನ ಮಾತೆಂದು ಪರೇಶ ದುಃಖದ ದನಿಯಲ್ಲಿ ಹೇಳಿದ—

"ಆ ಒಕ್ಕಣ್ಣ ಭಟ್ಟಾಚಾರ್ಯರು ಅವರ ಮಗ್ಗುಲ ಮನೆಯಲ್ಲೇ ಇದ್ದಾರಮ್ಮ. ಗೋವಿಂದ....ಅಂಗಡಿಯವ....ಹೇಳಿದ...."

ವಿಜಯಳು ಒಣನಗೆಯೊಂದನ್ನು ನಕ್ಕು 'ಬನ್ನಿ, ಕೂಡಿ' ಎಂದು ಹೇಳಿ ನಂತರ ಪರೇಶನ ಕಡೆ ತಿರುಗಿ ಹೇಳಿದಳು—"ಈಗ ನೀನು ಹೋಗಪ್ಪ ಪರೇಶ, ಸಣ್ಣ ವಿಷಯ. ಇವತ್ತಿಲ್ಲದಿದ್ದರೆ ಇನ್ನೆಂದಾದರೂ ಕೇಳಿದರಾಗುತ್ತೆ ಈಗ ನೀನು ಹೋಗಪ್ಪ."

ಪರೇಶ ಹೊರಟುಹೋದಮೇಲೆ ನರೇಂದ್ರ ಕೇಳಿದ—"ನೀವು ನರೇಂದ್ರಬಾಬುಗಳ ವಿಷಯ ತಿಳಿಯಲಪೇಕ್ಷಿಸುವಿರೇನು? ಅವರೆಲ್ಲಿದ್ದಾರೆಂದಲ್ಲವೇ?"

ಅದನ್ನು ಒಪ್ಪಿಕೊಳ್ಳದಿದ್ದರೆ ವಿಜಯಳು ಉಳಿಯುತ್ತಿದ್ದಳು. ಆದರೆ ಅವಳಿಗೆ ಸುಳ್ಳು ಹೇಳುವ ಅಭ್ಯಾಸವಿರಲಿಲ್ಲ. ಅವಳು ನಾಚಿಕೆಯನ್ನು ಹೇಗೋ ತಡೆದುಕೊಂಡು ಹೇಳಿದಳು—"ಹೌದು, ಅದನ್ನು ಇನ್ನೆಂದಾದರೂ ಕೇಳಿ ತಿಳಿದುಕೊಂಡರೂ ನಡೆಯುತ್ತದೆ."

"ಏಕೆ? ಈಗ ಅದರ ಅಗತ್ಯವೇನಾದರೂ ಇದೆಯೇ?"

ಅವಳಿಗೆ ಇದು ಅಪಹಾಸ್ಯದಂತೆ ತೋರಿತು. ಅವಳು ಹೇಳಿದಳು—ಅಗತ್ಯವಿಲ್ಲದಿದ್ದರೆ ಯಾರೂ ಯಾರ ವಿಷಯವನ್ನೂ ತಿಳಿದುಕೊಳ್ಳಲಿಚ್ಛಿಸುವುದಿಲ್ಲವೇ?"

ಯಾರಿಗೆ ಯಾವುದು ಬೇಕು ಯಾವುದು ಬೇಡವೆಂಬುದರ ವಿಚಾರ ಹೋಗಲಿ ಬಿಡಿ. ಆದರೆ ಈಗ ಅವನೊಂದಿಗೆ ನಿಮ್ಮ ಸಂಬಂಧವೆಲ್ಲ ತೊರೆದು ಹೋಯಿತು. ಮತ್ತೇಕೆ ಅವನನ್ನು ಹುಡುಕಿಸುತ್ತಿದ್ದೀರಿ?........ಸಾಲವಿನ್ನೂ ಮುಗಿಯಲಿಲ್ಲವೇ?"

ವಿಜಯಳ ಮುಖದಲ್ಲಿ ಕ್ಲೇಶದ ಚಿಹ್ನೆ ಮೂಡಿತು. ಅವಳೇನೂ ಉತ್ತರ ಕೊಡಲಿಲ್ಲ. ನರೇಂದ್ರ ತನ್ನ ಒಳಗಿನ ಉದ್ವೇಗವನ್ನು ಮುಚ್ಚಿಟ್ಟುಕೊಳ್ಳಲಾರದೆ ಮತ್ತೆ ಹೇಳಿದ—"ಮತ್ತೆ ಇನ್ನಾವುದಾದರೂ ಸಾಲ ಬಾಕಿ ಇದ್ದರೆ ನನಗೆ ತಿಳಿದಮಟ್ಟಿಗೆ ಅದನ್ನು ತೀರಿಸಲು ಅವನಲ್ಲಿ ಅಂತಹ ಬೆಲೆ ಬಾಳುವ ಪದಾರ್ಥವಾವುದೂ ಇಲ್ಲ. ಆದ್ದರಿಂದ ಇನ್ನು ಅವನ ಸುಳಿವನ್ನು ಹುಡುಕುವುದು......."

" ಸಾಲಕ್ಕಾಗಿಯೇ ಅವರ ವಿಳಾಸವನ್ನು ಹುಡುಕಿಸುತ್ತಿದ್ದೇನೆಂದು ನಿಮಗೆ ಯಾರು ಹೇಳಿದರು ? "

" ಇದಲ್ಲದೆ ಇನ್ನಾವುದಕ್ಕಾಗಿ ಹುಡುಕಿಸಬೇಕೋ ನನಗಂತೂ ತಿಳಿಯದು. ಅವನಿಗೂ ನಿಮ್ಮ ಪರಿಚಯವಿಲ್ಲ. ನಿಮಗೂ ಅವನ ಪರಿಚಯವಿಲ್ಲ."

" ಅವರಿಗೂ ನನ್ನ ಪರಿಚಯವಿದೆ. ನನಗೂ ಅವರ ಪರಿಚಯವಿದೆ."

ನರೇಂದ್ರ ನಕ್ಕು ಹೇಳಿದ—" ಅವನಿಗೆ ನಿಮ್ಮ ಪರಿಚಯವಿದೆ. ಅದೇನೋ ನಿಜ. ಆದರೆ ನಿಮಗೆ ಅವನ ಪರಿಚಯವಿಲ್ಲ. ನನ್ನ ಹೆಸರೇ ನರೇಂದ್ರನೆಂದಿಟ್ಟುಕೊಳ್ಳಿ ಆಗ........"

ವಿಜಯಳು ಕೊರಳು ಕೊಂಕಿಸಿ ಹೇಳಿದಳು—" ನಾನು ಅದನ್ನು ನಂಬುತ್ತಿದ್ದೆ. ಅಲ್ಲದೆ ಈ ವಿಷಯ ಬಹಳದಿವಸಗಳಿಗೆ ಮೊದಲೇ ನಿಮ್ಮ ಬಾಯಲ್ಲಿ ಬರಬೇಕಾಗಿತ್ತು."

ವಿಜಯಳ ಪ್ರತ್ಯುತ್ತರದಿಂದ ನರೇಂದ್ರನ ಮುಖ ಕಪ್ಪಿಟ್ಟಿತು. ವಿಜಯಳು ಇದನ್ನೇ ಲಕ್ಷಿಸಿ ಹೇಳಿದಳು—" ತಮ್ಮ ಪರಿಚಯವನ್ನು ಕೊಡದೆ ತಮ್ಮ ವಿಷಯ ಕೇಳಿಕೊಳ್ಳುವುದೂ, ಮರೆಯಲ್ಲಿ ನಿಂತು ಕೇಳುವುದೂ ಒಂದೇ ಅಲ್ಲವೇ ? ನನಗಂತೂ ಅವೆರಡೂ ಒಂದೇ ಎನಿಸುತ್ತದೆ. ಏಕೆಂದರೆ ನಾವು ಬ್ರಹ್ಮಸಮಾಜಿಗಳು."

ನರೇಂದ್ರನ ಮುಖ ಈಗ ಇನ್ನೂ ಕಪ್ಪಿಟ್ಟಿತು. ಅವನು ಸ್ವಲ್ಪಹೊತ್ತು ಸುಮ್ಮನಿದ್ದು ಹೇಳಿದ—"ನಿಮ್ಮೊಂದಿಗೆ ನಡೆದ ಅನೇಕ ವಿಚಾರಗಳ ಜೊತೆಗೆ ನನ್ನ ವಿಚಾರವೂ ಬಂದಿತ್ತು. ಆದರೆ ಅದರಲ್ಲಿ ನನಗೆ ದುರಭಿಪ್ರಾಯವೇನೂ ಇರಲಿಲ್ಲ. ಕೊನೆಯ ದಿನ ನನ್ನ ನಿಜವಾದ ಪರಿಚಯಕೊಟ್ಟು ಹೋಗೋಣವೆಂದು ಮಾಡಿದ್ದೆ. ಆದರೆ ಸಾಧ್ಯವಾಗಲಿಲ್ಲಿ. ಇದರಿಂದ ನಿಮಗೇನಾದರೂ ತೊಂದರೆಯಾಯಿತೇ ? "

ಮೊದಲೇ ಈ ಪ್ರಶ್ನೆ ಕೇಳಿದ್ದರೆ ಉತ್ತರ ಕೊಡಲು ತೊಂದರೆಯಾಗತ್ತಿತ್ತು. ಆದರೆ ಒಮ್ಮೆ ಒಂದು ವಿಚಾರ ಶುರುವಾದರೆ ಅದು ಎಲ್ಲಿಗೋ ಹೋಗಿ ನಿಲ್ಲುತ್ತಾದ್ದರಿಂದ, ವಿಜಯಳಿಗೆ ಈ ಪ್ರಶ್ನೆಗೆ ಉತ್ತರ ಕೊಡಲು ಕಷ್ಟವಾಗಲಿಲ್ಲ. ಅವಳು ಹೇಳಿದಳು—" ತೊಂದರೆ ಅನೇಕ ರೀತಿಯಲ್ಲಾಗುತ್ತದೆ. ತೊಂದರೆಯಾಗಿದ್ದರೂ ಅದು ಆಗಿಹೋಗಿದೆ. ಈಗ ಅದಕ್ಕೆ

ನೀವು ಯಾವ ಉಪಾಯವನ್ನೂ ಮಾಡುವಂತಿಲ್ಲ. ಆದ್ದರಿಂದ ಈ ವಿಷಯ ಬಿಟ್ಟುಬಿಡಿ. ಆದರೆ ನಿಮ್ಮ ವಿಷಯದಲ್ಲಿ ಕೆಲವು ವಿಚಾರಗಳನ್ನು ತಿಳಿಯ ಬಯಸಿದರೆ——"

"ಸಿಟ್ಟಾಗುತ್ತೇನೆಯೇ ?—ಉಹುಂ" ಎನ್ನುತ್ತಿದ್ದಂತೆ ಪ್ರಶಾಂತ ನಗುವಿನಿಂದ ಅವನ ಮುಖ ಉಜ್ವಲವಾಯಿತು. ಇಷ್ಟುದಿನ ಇಷ್ಟು ಮಾತಾಡಿದ್ದರೂ ವಿಜಯಳಿಗೆ ಅವನ ಪರಿಚಯವಾಗಿರಲಿಲ್ಲ. ಆದರೆ ಈ ಒಂದು ನಗುವಿನಿಂದಲೇ ಅವನ ಸಂಪೂರ್ಣ ಪರಿಚಯವಾದಹಾಗಾಯಿತು. ಇವನ ಹೃದಯಾಂತರಾಳದಿಂದ ವೊದಲಾಗಿ ಹೊರಗಿನ ಆಚಾರವಿಚಾರಗಳೆಲ್ಲವೂ ಸ್ಫಟಿಕದಂತೆ ನಿರ್ಮಲವಾದುವೆಂದು ತೋರಿತು. ತನ್ನ ಸರ್ವಸ್ವವನ್ನೂ ತೆಗೆದುಕೊಂಡಿರುವವರ ಮುಂದೂ ಅವನು 'ಇಲ್ಲ'ವೆನ್ನಲಿಲ್ಲ. ಆದ್ದರಿಂದಲೇ ಅವಳು ಮುಖವೆತ್ತಿ ಪ್ರಶ್ನೆಯನ್ನೂ ಮಾಡಲಾರದೆ ತಲೆತಗ್ಗಿಸಿಕೊಂಡೇ "ಈಗ ನೀವಿರುವುದೆಲ್ಲಿ ?" ಎಂದು ಕೇಳಿದಳು.

"ನನಗೆ ದೂರದ ಸಂಬಂಧಿ ಅತ್ತೆಯೊಬ್ಬಳಿದ್ದಾಳೆ ಅವಳ ಮನೆಯಲ್ಲಿದ್ದೇನೆ."

"ನಿಮ್ಮ ವಿಚಾರದಲ್ಲಿದ್ದ ಸಾಮಾಜಿಕ ತೊಂದರೆಗಳು ಆ ಹಳ್ಳಿಯವರಿಗೆ ತಿಳಿಯದೇ ?"

"ತಿಳಿಯದೇ ಏನು ?"

"ಹಾಗಾದರೆ ?"

ನರೇಂದ್ರ ತುಸು ಯೋಚಿಸಿ ಹೇಳಿದ—"ನಾನಿರುವ ಕೋಣೆ ಮನೆಯ ಒಳಗಿನ ಭಾಗವೆಂದು ಹೇಳುವಂತಿಲ್ಲ. ನನ್ನ ಪರಿಸ್ಥಿತಿ ತಿಳಿದು ಅವರ ಹುಡುಗರೂ ಅಕ್ಷೇಪಣೆಮಾಡುತ್ತಿಲ್ಲ. ಆದರೂ ಹೆಚ್ಚು ದಿನ ಇದ್ದು ಅವರಿಗೆ ತೊಂದರೆ ಕೊಡುವುದೂ ಸರಿಯಲ್ಲ" ಎಂದು ಅವನು ಸ್ವಲ್ಪ ತಡೆದು ಹೇಳಿದ—"ನೀವಿದೆಲ್ಲ ಏಕೆ ವಿಚಾರಿಸುತ್ತಿದ್ದೀರಿ ? ಹೇಳಿ ತಂದೆಯವರ ಸಾಲ ಇನ್ನೂ ಸ್ವಲ್ಪ ಉಳಿದಿದೆಯೇನೋ ಅಲ್ಲವೇ ?"

ವಿಜಯಳು ಇದಕ್ಕೆ ಉತ್ತರ ಹೇಳುವುದಕ್ಕೆಂದು ತೋರುತ್ತೆ....ಮುಖವೆತ್ತಿ ನೋಡಿ ಇದ್ದಕ್ಕಿದ್ದಂತೆ ಏನೂ ಹೇಳದೆ ಸುಮ್ಮನಾದಳು.

"ತಂದೆಯ ಸಾಲವನ್ನು ತೀರಿಸಲು ಯಾರುತಾನೇ ಬಯಸುವುದಿಲ್ಲ? ಆದರೆ ನಿಮ್ಮ ಮುಂದೆ ನಿಜವನ್ನು ಹೇಳುತ್ತಿದ್ದೇನೆ. ನನ್ನದಾಗಲೀ

ಇನ್ನೊಬ್ಬರದಾಗಲೀ ಮಾರಲು ನನ್ನಲ್ಲಿ ಒಂದೂ ಇಲ್ಲ. ಒಂದು ಸೂಕ್ಷ್ಮ ದರ್ಶಿನಿ ಮಾತ್ರವಿದೆ. ಅದನ್ನು ಮಾರಿದರೆ ನನಗೆ ಬರ್ನಾರ್ಕ್ಕೆ ಹೋಗುವ ಖರ್ಚು ಸಿಕ್ಕುತ್ತೆ. ಅತ್ತೆಯ ಸ್ಥಿತಿಯೂ ಚೆನ್ನಾಗಿಲ್ಲ.ಅಲ್ಲಿ ಊಟ-ತಿಂಡಿ ಮಾಡುವುದಕ್ಕೂ........" ಎಂದು ಅವನು ಇದ್ದಕ್ಕಿದ್ದಂತೆ ಮಾತು ನಿಲ್ಲಿಸಿದ.

ವಿಜಯಳ ಕಣ್ಣುಗಳಲ್ಲಿ ನೀರು ಹನಿಯಿತು. ಅವಳು ಮುಖ ತಿರುಗಿಸಿದಳು.

ನರೇಂದ್ರ ಹೇಳಿದ—"ನೀವು ಸ್ವಲ್ಪ ಕರುಣೆ ತೋರಿದರೆ, ನನ್ನ ತಂದೆಯ ಉಳಿದ ಸಾಲಕ್ಕಾಗಿ ನಾನೊಂದು ಪತ್ರ ಬರೆದುಕೊಡುತ್ತೇನೆ. ಮುಂದೆ ಅದನ್ನು ತೀರಿಸಲು ಪ್ರಯತ್ನ ಮಾಡುತ್ತೇನೆ. ನೀವು ರಾಸಬಿಹಾರಿಗಳಿಗೆ ಒಂದು ಮಾತು ಹೇಳಿದರೆ ಅವರು ನನ್ನನ್ನು ಈ ವಿಷಯದಲ್ಲಿ ಹೆಚ್ಚು ಕಾಡುವುದಿಲ್ಲ."

ಪರೇಶ ಬಾಗಿಲ ಹತ್ತಿರ ಬಂದು ಹೇಳಿದ—"ಅಮ್ಮಾಜೀ, ಬಹಳ ಹೊತ್ತಾಗಿದೆ. ಬಡಿಸೆಂದು ಅಡಿಗೆಯವನಿಗೆ ಹೇಳಲೇ ಎಂದು ಅಮ್ಮ ಕೇಳುತ್ತಾಳೆ."

ಎದುರಿಗಿದ್ದ ಗಡಿಯಾರದ ಕಡೆ ನೋಡಿ ನರೇಂದ್ರ ಕೂಡಲೆ ಎದ್ದು ನಿಂತು ಸಂಕೋಚದಿಂದ ಹೇಳಿದ—"ಓಹೋ! ಹನ್ನೆರಡು ಹೊಡೆಯಿತು. ನಿಮಗೆ ಬಹಳ ತೊಂದರೆಯಾಯಿತು."

ವಿಜಯಳ ಕಣ್ಣೀರು ಇಂಗಿತ್ತು. ಅವಳು ಕೇಳಿದಳು—"ನೀವು ಬಂದಿದ್ದೇತಕ್ಕೆಂಬುದನ್ನೇ ಹೇಳಲಿಲ್ಲವಲ್ಲ?"

"ಅದು ಹೋಗಲಿ ಬಿಡಿ" ಎಂದು ನರೇಂದ್ರ ಹೊರಡುವ ಪ್ರಯತ್ನ ಮಾಡುತ್ತಿದ್ದಂತೆಯೇ ವಿಜಯಳು ಅವನನ್ನು ಕೇಳಿದಳು—"ನಿಮ್ಮತ್ತೆಯವರ ಮನೆ ಇಲ್ಲಿಗೆ ಎಷ್ಟು ದೂರವಾಗುತ್ತೆ? ಅಲ್ಲಿಗೇ ಈಗ ಹೋಗುತ್ತೀರಾ?"

"ಹೌದು. ಅದೇನೂ ಹೆಚ್ಚು ದೂರವಿಲ್ಲ....ಸ್ವಲ್ಪ ಹೆಚ್ಚು ಕಡಿಮೆ ನಾಲ್ಕು ಮೈಲಿಯಾಗಬಹದು."

ವಿಜಯಳು ಅವಾಕ್ಕಾಗಿ ಕೇಳಿದಳು—"ಈ ಬಿಸಲಿನಲ್ಲಿ ಈಗ ನಾಲ್ಕು

ಮೈಲಿ ದೂರ ಹೋಗುತ್ತೀರಾ? ಅಲ್ಲಿಗೆ ಹೋಗುವಷ್ಟರಲ್ಲಿ ಮೂರು ಗಂಟೆಯಾಗುತ್ತೆ."

"ಆಗಲಿ ಬಿಡಿ, ಏನೂ ಚಿಂತೆಯಿಲ್ಲ. ನಮಸ್ಕಾರ" ಎನ್ನುತ್ತಾ ನರೇಂದ್ರ ಹೊರಹೊರಟ. ಆದರೆ ಅಷ್ಟರಲ್ಲೇ ಅವಳು ಬಾಗಿಲಿಗೆ ಅಡ್ಡ ಬಂದು ನಿಂತು ಹೇಳಿದಳು—"ಇಂದು ನೀವು ನನ್ನ ಪ್ರಾರ್ಥನೆಯನ್ನು ನಡೆಸಿಕೊಡಬೇಕು. ಇಂದು ಇಲ್ಲಿ ಊಟ ಮಾಡದೆ ಎಲ್ಲಿಗೂ ಹೋಗಕೂಡದು."

"ಊಟ ಮಾಡಿ ಹೋಗಬೇಕೇ? ಇಲ್ಲೇ?" ನರೇಂದ್ರ ಚಕಿತನಾಗಿ ಕೇಳಿದ.

"ಹೌದು. ಇಲ್ಲಿ ಊಟ ಮಾಡಿದ್ದರಿಂದ ನಿಮ್ಮ ಜಾತಿ ಹೋಗುತ್ತದೆಯೇ?"

ಇದಕ್ಕುತ್ತರವಾಗಿ ಮತ್ತೆ ಅವನ ಮುಖ ಪ್ರಶಾಂತ ನಗುವಿನಿಂದ ಪ್ರಫುಲ್ಲಿತವಾಯಿತು. ಅವನು ಹೇಳಿದ—"ಉಹುಂ, ಇನ್ನು ಪ್ರಪಂಚದಲ್ಲಿ ನನಗೆ ಆ ಭಯವಿಲ್ಲ. ಅಲ್ಲದೆ ದೇವರು ಇಂದು ನನಗೆ ಬಹಳ ಅನುಗ್ರಹ ಮಾಡಿದ್ದಾನೆನ್ನಬೇಕು. ಇಲ್ಲದಿದ್ದರೆ ಇಷ್ಟು ಹೊತ್ತಿನಲ್ಲಿ ಅಲ್ಲಿಗೆ ಹೋಗಿದ್ದರೆ ನನ್ನ ಅದೃಷ್ಟ ಹೇಗಿರುತ್ತಿತ್ತೋ ಯಾರು ಬಲ್ಲರು?"

೧೧

ಊಟ ಮುಗಿಯುವುದರಲ್ಲಿತ್ತು. ನರೇಂದ್ರ ಹೇಳಿದ—"ಇಷ್ಟು ಹೊತ್ತಿನವರೆಗೂ ಉಪವಾಸವಿದ್ದು ನನ್ನ ಮುಂದೆ ಕುಳಿತು ನನ್ನನ್ನು ಊಟಮಾಡಿಸುವ ಅಗತ್ಯವೇನಿರಲಿಲ್ಲ. ಯಾವ ದೇಶದಲ್ಲೂ ಈ ಪದ್ಧತಿಯಿಲ್ಲ."

ವಿಜಯಳು ನಗುಮುಖದಿಂದ ಹೇಳಿದಳು—"ಗಂಡಸರ ಊಟವಾದ ಮೇಲೆ ಊಟ ಮಾಡದೆ, ಅವರ ಜೊತೆಗೇ ಊಟ ಮಾಡುವ ಹೆಂಗಸರಿರುವ ದೇಶಕ್ಕೆ ದೌರ್ಭಾಗ್ಯವೆಂದು ತಂದೆಯವರು ಹೇಳುತ್ತಿದ್ದರು. ನನ್ನ ಅಭಿಪ್ರಾಯವೂ ಅದೇ."

"ಹಾಗೇಕೆ ಹೇಳುತ್ತೀರಿ? ಬೇರೆ ದೇಶದ ವಿಷಯ ಹೋಗಲಿ ಬಿಡಿ. ಆದರೆ ನಮ್ಮ ದೇಶದಲ್ಲೇ ಅನೇಕರ ಮನೆಯಲ್ಲಿ ಊಟಮಾಡಿದ್ದೇನೆ. ಅಲ್ಲೆಲ್ಲ ಈ ಪದ್ಧತಿಯನ್ನು ನೋಡಿದ್ದೇನೆ."

ವಿಲಾಯತಿಯ ನಡೆನುಡಿಗಳನ್ನು ಅಭ್ಯಾಸ ಮಾಡಿದವರ ಮನೆಯಲ್ಲಿ ಈ ಪದ್ಧತಿ ಇರಬಹುದು. ಆದರೆ ಎಲ್ಲರ ಮನೆಯಲ್ಲೂ ಹೀಗೆ ನಡೆಯುವುದಿಲ್ಲ. ನೀವು ಬಹಳ ದಿನ ಪರದೇಶದಲ್ಲಿದ್ದುದರಿಂದ ನಿಮಗೆ ಹಾಗೆ ತೋರುತ್ತಿದೆ. ನಾವು ಗಂಡಸರ ಎದುರಿಗೆ ಓಡಾಡುತ್ತೇವೆ. ಅಗತ್ಯ ಬಿದ್ದರೆ ಮಾತು ಆಡುತ್ತೇವೆ. ಆದರೆ ನಾವು ವಿಲಾಯತಿಯ ಹೆಂಗಸರಾಗಲ್ಲ. ಅವರ ನಡೆನುಡಿಗಳೂ ನಮ್ಮಲ್ಲಿಲ್ಲ."

"ಅಲ್ಲದಿರಬಹುದು. ಆದರೆ ಅದಿದ್ದಿದ್ದರೆ ಮೇಲಾಗಿರುತ್ತಿತ್ತು. ಒಳ್ಳೆಯ ಗುಣ ಎಲ್ಲಿದ್ದರೂ ಸರಿಯೇ ಅದನ್ನು ತನ್ನದಾಗಿ ಮಾಡಿಕೊಳ್ಳಬೇಕು."

"ಒಟ್ಟಿಗೆ ಊಟ ಮಾಡುವುದು ಒಳ್ಳೆಯದೇ?" ಎಂದು ಅವಳು ತುಸು ನಕ್ಕು ಹೇಳಿದಳು—"ಹೀಗೆ ಊಟಮಾಡಿಸುವುದರಲ್ಲಿ ಹೆಂಗಸರಿಗೆ ಎಷ್ಟು ಮಹತ್ತ್ವವಿದೆಯೆಂಬುದು ನಿಮಗೆ ಹೇಗೆ ತಿಳಿಯುತ್ತೆ? ನನ್ನ ಜಾತಿಯ ಎಷ್ಟೋ ಅಧಿಕಾರವನ್ನು ಬಿಡಲು ನಾನು ಸಿದ್ಧಳಿದ್ದರೂ, ಇದನ್ನು ಮಾತ್ರ ಬಿಡಲು ಸಿದ್ಧಳಿಲ್ಲ........ಓಹೋ! ಇದೇನು ಹಾಲೆಲ್ಲ ಹಾಗೇ ಉಳಿಯಿತಲ್ಲ.......ಉಹುಂ, ತಲೆಯಲ್ಲಾಡಿಸಿದರೆ ನಾನು ಬಿಡುವವಳಲ್ಲ. ನಿಮಗಿನ್ನೂ ಹೊಟ್ಟೆ ತುಂಬಿಲ್ಲ."

ನರೇಂದ್ರ ನಕ್ಕು ಹೇಳಿದ—"ನನ್ನ ಹೊಟ್ಟೆ ತುಂಬಿದೆಯೋ ಇಲ್ಲವೋ ಎಂಬುದನ್ನೂ ನೀವು ಹೇಳಬಲ್ಲಿರಾ? ಇದೀಗ ಬಹಳ ಆಶ್ಚರ್ಯ!" ಎಂದು ಅವನು ಎದ್ದುನಿಂತ. ಅವನ ಮಾತನ್ನು ಕೇಳಿ ವಿಜಯಳೂ ನಕ್ಕಳು. ಆದರೆ ಅಷ್ಟು ಹಾಲನ್ನು ಉಳಿಸಿದ್ದರಿಂದ ಅವಳಿಗೆ ತುಸು ಅಸಮಾಧಾನವಾಯಿತೆಂದು ಅವಳ ಮುಖದಿಂದ ತೋರುತ್ತಿತ್ತು.

ಸಂಜೆಗೆ ಅಲ್ಲಿಂದ ಹೊರಡುವಾಗ ನರೇಂದ್ರ ಹೇಳಿದ—"ಇವತ್ತು ನನಗೆ ಒಂದಕ್ಕೆ ಬಹಳ ಆಶ್ಚರ್ಯವಾಗುತ್ತಿದೆ. ನನ್ನನ್ನು ಬಿಸಲಿನಲ್ಲಿ ಹೋಗಗೊಡಲಿಲ್ಲ. ನೀವು ಊಟಮಾಡದೆ ನನ್ನನ್ನು ಊಟಮಾಡಿಸಿದಿರಿ, ಅಷ್ಟೇ ಅಲ್ಲ. ನಾನು ತುಸು ಊಟಮಾಡಿದ್ದಕ್ಕೆ ನೀವು ಅಸಮಾಧಾನಪಟ್ಟುಕೊಂಡಿರಿ........ಇದಕ್ಕೆಲ್ಲ ಕಾರಣವೇನು? ಇದನ್ನು ಕೇಳಿದ್ದರಿಂದ ನೀವು ದುಃಖಪಟ್ಟುಕೊಳ್ಳಬೇಡಿ. ನಾನು ಹಾಸ್ಯಕ್ಕಾಗಿಯಾಗಲೀ ವ್ಯಂಗ್ಯದಿಂದಾಗಲೀ ಹೇಳುತ್ತಿಲ್ಲ. ಇದಕ್ಕೆಲ್ಲ ಕಾರಣವೇನು?"

ವಿಜಯಳು ಇದನ್ನು ಮುಗಿಸಲು ಉಪಾಯದಿಂದ ಹೇಳಿದಳು—"ಎಲ್ಲರ ಮನೆಯಲ್ಲೂ ಹೀಗೇ ಇರುತ್ತೆ. ಅದು ಹೋಗಲಿ. ನೀವು ಇನ್ನೆಷ್ಟು ದಿನದಲ್ಲಿ ಬರ್ಮಾಕ್ಕೆ ಹೋಗುತ್ತೀರಿ ?"

ನರೇಂದ್ರ ಅನ್ಯಮನಸ್ಕನಾಗಿ ಹೇಳಿದ—"ನಾಡಿದ್ದು. ಆದರೆ ನಾನು ನಿಮಗೆ ಪರಕೀಯ. ನನ್ನ ಸುಖ-ದುಃಖಗಳಿಂದ ನಿಮಗೇನೂ ಆಗಬೇಕಾಗಿಲ್ಲ. ಆದರೂ ಹೊರಗಿನವರಾರಾದರೂ ನೋಡಿದರೆ ನಾನು ನಿಮ್ಮವನಲ್ಲವೆಂದು ಹೇಳಲಾಗುವುದಿಲ್ಲ. ನಾನೆಲ್ಲಾದರೂ ಅರೆಹೊಟ್ಟೆ ಉಂಡೇನೆಂದು ಅಥವಾ ಇನ್ನೇನಾದರೂ ಊಟ-ಉಪಚಾರದಲ್ಲಿ ಲೋಪದೋಷಗಳಾದೀತೆಂದು ನೀವೇ ಉಪವಾಸ ಎದುರಿಗೆ ಕುಳಿತಿದ್ದಿರಿ. ನನಗೆ ಅಕ್ಕತಂಗಿಯರಿಲ್ಲ. ತಾಯಿಯೂ ಬಾಲ್ಯದಲ್ಲೇ ಹೋಗಿಬಿಟ್ಟಳು. ಅವಳು ಬದುಕಿದ್ದರೆ ಹೀಗೇ ಮನಸ್ಸಿಗೆ ಹಚ್ಚಿಕೊಳ್ಳುತ್ತಿದ್ದಳೋ ಏನೋ ಗೊತ್ತಿಲ್ಲ. ಅಂತೂ ನಿಮ್ಮ ಈ ಸತ್ಕಾರವನ್ನು ನೋಡಿ ನನಗೆ ಆಶ್ಚರ್ಯವಾಗಿದೆ. ಇದು ಸತ್ಯವಲ್ಲವೆಂಬುದು ನಿಮಗೂ ಗೊತ್ತಿದೆ; ನನಗೂ ಗೊತ್ತಿದೆ. ಇದು ಸತ್ಯವೆಂದರೆ ನೀವು ಹಾಸ್ಯಮಾಡುತ್ತಿದ್ದೀರೆನ್ನಬೇಕಾಗುತ್ತೆ...........ಇದನ್ನು ಸುಳ್ಳೆನ್ನುವುದಕ್ಕೂ ಮನಸ್ಸು ಬರುವುದಿಲ್ಲ."

ವಿಜಯಳು ಕಿಟಕಿಯ ಹೊರಗಡೆ ನೋಡುತ್ತಿದ್ದವಳು ಹಾಗೇ ಹೇಳಿದಳು—"ಒಳ್ಳೆಯತನವೆಂಬುದನ್ನು ನೀವೆಲ್ಲೂ ನೋಡಿಲ್ಲವೇ ?"

"ಒಳ್ಳೆಯತನವೇ ? ಅದೇ ಇರಬಹುದು" ಎಂದು ಅವನೊಂದು ಉಸಿರುಬಿಟ್ಟ. ಆಮೇಲೆ ಕೈಯೆತ್ತಿ ಅವನು ನಮಸ್ಕಾರಮಾಡಿ ಹೇಳಿದ—"ಹೇಗೋ ಸದ್ಯ ತಂದೆಯ ಸಾಲವೆಲ್ಲ ತೀರಿತು. ನನಗದರಿಂದ ದೊಡ್ಡ ತೃಪ್ತಿಯಾದಂತಿದೆ. ನಿಮ್ಮ ಮಂದಿರ ದಿನದಿನಕ್ಕೆ ಅಭಿವೃದ್ಧಿಯಾಗಲಿ. ಇಂದಿನ ನೆನಪು ನನಗೆಂದಿಗೂ ಉಳಿಯುವುದು. ನಾನಿನ್ನು ಹೊರಟೆ" ಎಂದು ಅವನು ಕೋಣೆಯಿಂದ ಹೊರಹೊರಟ. ಅಷ್ಟರಲ್ಲೇ "ಕೊಂಚ ನಿಲ್ಲಿ........" ಎಂದು ಒಳಗಿನಿಂದ ಅಸ್ಪಷ್ಟ ದನಿಯೊಂದು ಹೊರಬಂದಿತು.

ನರೇಂದ್ರ ಹಿಂತಿರುಗಿ ಬಂದು ನಿಂತಮೇಲೆ, ವಿಜಯಳು ಮೃದು ದನಿಯಲ್ಲಿ ಕೇಳಿದಳು—"ನಿಮ್ಮ ಸೂಕ್ಷ್ಮದರ್ಶಿನಿಗೆ ಬೆಲೆಯೇನು ?"

ನಾನು ಕೊಳ್ಳುವಾಗ ಐದುನೂರು ರೂಪಾಯಿಗಳಿಗಿಂತ ಹೆಚ್ಚು ಹಿಡಿಯಿತು. ಆದರೆ ಈಗ ಇನ್ನೂರು—ಇನ್ನೂರೈವತ್ತು ರೂಪಾಯಿಗಳಿಗೂ

ಕೊಡಲು ಸಿದ್ಧನಿದ್ದೇನೆ. ಯಾರಾದರೂ ತೆಗೆದುಕೊಳ್ಳುತ್ತಾರೆಯೇ? ನಿಮಗೇನಾದರೂ ಗೊತ್ತಿದ್ದರೆ ಹೇಳಿ. ಅದು ತೀರ ಹೊಸದು."

ಅದನ್ನು ಮಾರುವುದಕ್ಕೆ ಇಷ್ಟು ಉತ್ಸಾಹ ತೋರಿದ್ದನ್ನು ನೋಡಿ ವಿಜಯಳಿಗೆ ಮನಸ್ಸಿನಲ್ಲೇ ಬಹಳ ವ್ಯಥೆಯಾಗಿ ಅವಳು ಕೇಳಿದಳು—"ಇಷ್ಟು ಕಡಿಮೆಗೆ ಕೊಟ್ಟುಬಿಡುತ್ತೀರಾ? ಇದರಿಂದ ನಿಮ್ಮ ಕೆಲಸವೆಲ್ಲ ಆಯಿತೇ?"

ನರೇಂದ್ರ ಒಂದು ನಿಟ್ಟುಸಿರುಬಿಟ್ಟು ಹೇಳಿದ—"ಕೆಲಸವೇ? ಕೆಲಸವೇನೂ ಆಗಿಲ್ಲ"

ಅವನ ಬಿಸಿಯುಸಿರು ಅವಳ ಕಣ್ಣಿಗೆ ಬೀಳದಿರಲಿಲ್ಲ. ಅವಳು ಸ್ವಲ್ಪ ಹೊತ್ತು ಸುಮ್ಮನಿದ್ದು ಹೇಳಿದಳು—"ನಾನೇ ಸ್ವಂತಕ್ಕೆ ಕೊಂಡುಕೊಳ್ಳಬೇಕೆಂದು ಬಹಳ ದಿನಗಳಿಂದ ಮಾಡಿದ್ದೆ. ಆದರೆ ಕೊಳ್ಳಲಾಗಲಿಲ್ಲ. ನಾಳೆ ಅದನ್ನು ಸ್ವಲ್ಪ ತಂದು ತೋರಿಸುತ್ತೀರಾ?"

"ಓಹೋ ಆಗಲಿ. ನಾಳೆ ನಿಮಗೆ ತಂದು ತೋರಿಸುತ್ತೇನೆ."

ಸ್ವಲ್ಪ ಯೋಚಿಸಿ ಹೇಳಿದ—"ಅದನ್ನು ಪರೀಕ್ಷಿಸಿ ನೋಡಲು ಸಮಯವಿಲ್ಲ. ಆದರೆ ಅದನ್ನು ಕೊಂಡರೆ ನಿಮಗೆಂದಿಗೂ ಮೋಸವಾಗುವುದಿಲ್ಲ."

ತುಸುಹೊತ್ತು ಸುಮ್ಮನಿದ್ದು ಮತ್ತೆ ಹೇಳಿದ—"ಇದರ ಬೆಲೆಯನ್ನು ದುಡ್ಡಿನಿಂದ ಅಂದಾಜು ಮಾಡುವುದಕ್ಕಾಗುವುದಿಲ್ಲ. ನನಗಿನ್ನಾವ ದಾರಿಯೂ ಇಲ್ಲ. ಇಲ್ಲದಿದ್ದರೆ........ಉಂ, ಹೋಗಲಿ. ನಾಳೆ ಮಧ್ಯಾನ್ಹ ತರುತ್ತೇನೆ."

ಅವನು ಹೊರಟುಹೋದಮೇಲೆ ಕಣ್ಣಿಗೆ ಕಾಣುವವರೆಗೂ ವಿಜಯಳು ಎವೆಯಿಕ್ಕದೆ ಅವನನ್ನು ನೋಡುತ್ತಿದ್ದು ಎದುರಿಗಿದ್ದ ಕುರ್ಚಿಯಮೇಲೆ ಕುಳಿತಳು. ನೋಡಿದಂತೆಲ್ಲಾ........ಎಲ್ಲವೂ ಶೂನ್ಯವಾದಂತೆ ತೋರಿತು........ ಎಂದೂ ಯಾರಿಂದಲೂ ಅವನಿಗೆ ಉಪಕಾರವಾಗದಿದ್ದ ಹಾಗೂ, ಸಾಯುವವರೆಗೂ ಅವನಿಗೆ ಯಾರಿಂದಲೂ ಏನೂ ಪ್ರಯೋಜನವಾಗಲಾರದ ಹಾಗೂ, ಅವಳಿಗೆ ತೋರಿತು. ಆದರೂ ಅವನಿಗೆ ಸ್ವಲ್ಪವೂ ದುಃಖವಾಗಲೀ, ಗ್ಲಾನಿಯಾಗಲೀ ಆಗಲಿಲ್ಲ. ಹೀಗೇ ಶೂನ್ಯ ದೃಷ್ಟಿಯಿಂದ ಹೊರಗಿನ ಗಿಡಮರಗಳನ್ನು ನೋಡುತ್ತ ಪ್ರತಿಮೆಯಂತೆ ಸ್ತಬ್ಧಳಾಗಿ ಕುಳಿತು ಹೇಗೆ ಕಾಲ

ಕಳೆದಳೆಂಬುದು ಅವಳಿಗೇ ತಿಳಿಯಲಿಲ್ಲ. ಸಂಜೆಯಾದದ್ದೂ, ಆಳು ಬಂದು ದೀಪ ಹಚ್ಚಿದ್ದೊಂದೂ ಅವಳ ಗಮನಕ್ಕೆ ಬರಲಿಲ್ಲ. ಅವಳ ಕಣ್ಣಿಂದ ನೀರು ಹನಿದ ಮೇಲೆ ಅವಳು ಎಚ್ಚರಗೊಂಡಳು. ಕೂಡಲೆ ಅದನ್ನೊರಸಿ ಕೊಂಡು ಅವಳು ಕೈಯಿಂದ ಮುಟ್ಟಿ ನೋಡಿಕೊಂಡಳು. ಅವಳಿಗೆ ತಿಳಿಯು ದಂತೆ ಯಾವಾಗಿನಿಂದಲೋ ಕಣ್ಣೀರಿನಿಂದ ಅವಳ ಎದೆಯ ಮೇಲಿನ ಬಟ್ಟೆ ಯೆಲ್ಲ ತೊಯ್ದು ಹೋಗಿತ್ತು. ಛೀ! ಛೀ! ಆಳು-ಕಾಳುಗಳು ಓಡಾಡು ತ್ತಿದ್ದಾರೆ. ಅವರಿದನ್ನು ನೋಡಿ ಏನು ತಿಳಿದುಕೊಂಡಿರಬಹುದು. ಅವ ಳಿಗೆ ಬೇಕಾಗಿದ್ದರೂ ಸಂಕೋಚದಿಂದ ಯಾರನ್ನೂ ಹತ್ತಿರ ಕರೆಯಲಿಲ್ಲ. ರಾತ್ರಿ ಅವಳು ಹಾಸಿಗೆಯ ಮೇಲೆ ಮಲಗಿ, ಕಿಟಕಿಯ ಬಾಗಿಲನ್ನು ತೆರೆದು ಹೊರಗೆ ಅಂಧಕಾರದಲ್ಲಿ ಹಾಗೇ ನೋಡುತ್ತಿದ್ದಳು. ಶೂನ್ಯ ಅಂಧಕಾರ ದಂತೆ ತನ್ನ ಭವಿಷ್ಯವೆಲ್ಲ ಅವಳ ಮುಂದೆ ಬಂದು ನಿಂತಿತು. ಆಮೇಲೆ ನಿದ್ದೆ ಬಂದುದು ಯಾವಾಗೆಂಬುದು ಅವಳಿಗೇ ತಿಳಿಯಲಿಲ್ಲ. ಆದರೆ ಅವ ಳಿಗೆ ನಿದ್ದೆಯಿಂದ ಎಚ್ಚರವಾದಾಗ, ಕೋಣೆಯಲ್ಲಿ ಪ್ರಭಾತದ ಸೂರ್ಯನ ಪ್ರಕಾಶ ತುಂಬಿತ್ತು. ಮೊಟ್ಟಮೊದಲೇ ಅವಳಿಗೆ ತನ್ನ ಜೀವನದಲ್ಲೆಲ್ಲ ಐದಾರು ದಿನಗಳ ಪರಿಚಯ ಮಾತ್ರವಿದ್ದ ನರೇಂದ್ರನ ನೆನಪಾಯಿತು. ಅವಳ ಮನಸ್ಸಿನಲ್ಲಿ ಆಗುತ್ತಿದ್ದ ಅಜ್ಞಾತ ವೇದನೆಯೊಂದಿಗೆ ಅವನ ನೆನಪೇ ಕಾಯಿತೆಂಬುದೇ ಅವಳಿಗೆ ಬಗೆಹರಿಯದಾಯಿತು.

ಹೊತ್ತೇರುತ್ತ ಬಂದಿತು. ತನ್ನ ಎಲ್ಲ ಕೆಲಸಗಳಲ್ಲೂ ಅವಳ ಕಣ್ಣು ಕಿವಿ ಬೇರೆಲ್ಲೋ ಹೋಗಿಬಿಟ್ಟದ್ದರ ಅನುಭವವಾದೊಡನೆ ಅವಳಿಗೇ ಬಹಳ ಸಂಕೋಚವೆನಿಸಿತು. ಆದಿನ್ನೇನೂ ಇರಲಾರದು. ಆ ಯಂತ್ರವನ್ನು ನೋಡುವ ಕುತೂಹಲ ಮಾತ್ರವಿರಬೇಕು. ಅದನ್ನೊಮ್ಮೆ ನೋಡಿದ ಕೂಡಲೆ ಅದು ಹೊರಟುಹೋಗಬಹುದು. ಇಂದಲ್ಲದಿದ್ದರೂ ನಾಳೆಯಾ ದರೂ ಆ ಆಗ್ರಹ ಮಾಯವಾಗಬಹುದು........ಹೀಗೆ ಅನೇಕ ವಿಧವಾಗಿ ಅವಳು ತನ್ನನ್ನು ಸಮಾಧಾನಪಡಿಸಿಕೊಂಡಳು. ಆದರೆ ಏನೂ ಉಪಯೋಗ ವಾಗಲಿಲ್ಲ. ಹೊತ್ತಾದಂತೆಯೂ ಉತ್ಕಂಠತೆ ಆಶಂಕೆಯೊಂದಿಗೆ ಸೇರಿ ಹೆಚ್ಚಾಗುತ್ತಿತ್ತು. ಪುಷ್ಯಮಾಸದ ಮಧ್ಯಾಹ್ನದ ಸೂರ್ಯ ಇಳಿಯುತ್ತ ಬಂದ. ಬಿಸಿಲು ಸವೆಯುತ್ತ ಬಂದಂತೆಲ್ಲಾ ಅವಳಿಗೆ ನಿರಾಶೆ ಹೆಚ್ಚಾ ಯಿತು. ಮರುದಿನ ದೂರ ದೇಶಕ್ಕೆ ಶಾಶ್ವತವಾಗಿ ಪಯಣ ಬೆಳೆಸುವ ವ್ಯಕ್ತಿ

ಇಂದು ಇಲ್ಲಿಗೆ ಬಂದು ವೇಳೆಯನ್ನು ವ್ಯರ್ಥವಾಗಿ ಕಳೆಯಲಿಷ್ಟಪಡದಿದ್ದರೆ ಅದರಲ್ಲಿ ಆಶ್ಚರ್ಯವೇನೂ ತೋರಲಿಲ್ಲ. ತನ್ನ ಕೊನೆಯ ಪದಾರ್ಥವನ್ನು ಇನ್ನೂ ಹೆಚ್ಚು ಬೆಲೆಗೆ ಇನ್ನಾರಿಗಾದರೂ ಮಾರಿದ್ದರೆ ಅದಕ್ಕಾಗಿ ಯಾರ ಮೇಲೆ ದೋಷಾರೋಪಣೆ ಮಾಡಬೇಕು? ಈ ಕೊನೆಯ ಮಾತು ಅವಳಿಗೆ ನೆನಪಾದಂತಿಲ್ಲ, ತನಗೆ ಒಳಗೆ ಎಷ್ಟೋ ಇಷ್ಟವಿದ್ದರೂ ಹೊರಗೆ ಅದರ ವಿಷಯದಲ್ಲಿ ಹೆಚ್ಚು ಉತ್ಸಾಹ ತೋರಲಿಲ್ಲವೆಂದು ಅವಳು ಯೋಚಿಸು ತ್ತಿದ್ದಳು. ಆದ್ದರಿಂದ ಅವಳ ಉದಾಸೀನವನ್ನು ನೋಡಿ ಅವನು ತನ್ನ ಇಚ್ಛೆಯನ್ನು ಬದಲಿಸಿ ಇನ್ನಾರಿಗಾದರೂ ಕೊಟ್ಟಿದ್ದರೆ ತನ್ನ ದರ್ಪಕ್ಕೆ ಸರಿ ಯಾದ ಶಿಕ್ಷೆ ದೊರೆತಂತಾಯಿತೆಂದುಕೊಂಡು ಅವಳು ತನ್ನನ್ನೇ ತಾನು ಎಷ್ಟೋಬಾರಿ ತಿರಸ್ಕರಿಸಿಕೊಂಡಳು. ಆ ತಿರಸ್ಕಾರಕ್ಕೆ ಎಲ್ಲಿಂದಲೂ ಸಾಂತ್ವನೆ ದೊರೆಯಲಿಲ್ಲ. ಪರೇಶ ಅಥವಾ ಇನ್ನಾರನ್ನಾದರೂ ಏನಾದರೂ ನೆಪಮಾಡಿ ಅವರ ಹತ್ತಿರ ಕಳುಹಿಸಿದರೆ, ಅವರನ್ನು ಹುಡುಕಿದರೂ ಸಿಕ್ಕುತ್ತಾರೋ ಇಲ್ಲವೋ, ಸಿಕ್ಕರೂ ಬರಲು ಒಪ್ಪುತ್ತಾರೋ ಇಲ್ಲವೋ.... ಹೀಗೇ ಅನೇಕ ಊಹಾಪೋಹಗಳನ್ನು ಮಾಡಿಕೊಂಡು ಹೊಯ್ದಾಡುತ್ತಾ ಗಡಿಯಾರದ ಕೆಳಗೆ ನೋಡುತ್ತಾ ಒಳಹೊರಗೆ ಎಷ್ಟು ಓಡಾಡಿದರೂ ಅವಳಿಗೆ ಹೊತ್ತೇ ಕಳೆಯಲಿಲ್ಲ. ಅಷ್ಟರಲ್ಲೇ ಪರೇಶ ಬಂದು—"ಅಮ್ಮಾಜೀ, ಕೆಳಗೆ ಬಾ, ಬಾಬುಗಳು ಬಂದಿದ್ದಾರೆ" ಎಂದ.

ವಿಜಯಳ ಮುಖ ಕೆಂಪೇರಿತು. "ಯಾವ ಬಾಬುಗಳೋ?" ಅವಳು ಕೇಳಿದಳು.

"ನಿನ್ನೆ ಬಂದಿದ್ದವರು. ಅವರ ಕೈಯಲ್ಲಿ ಒಂದು ಭಾರಿ ಚರ್ಮದ ಪೆಟ್ಟಿಗೆ ಇದೆ ಅಮ್ಮಾಜಿ."

"ಉಂ, ನೀನು ಹೋಗಿ ಬಾಬುಗಳನ್ನು ಕೂಡಿರೆಂದು ಹೇಳು. ನಾನೀಗಲೇ ಬರುತ್ತೇನೆ."

ಎರಡು ನಿಮಿಷಗಳಾದ ಮೇಲೆ ವಿಜಯಳು ಕೋಣೆಯಲ್ಲಿ ಬಂದು ನಮಸ್ಕಾರ ಮಾಡಿದಳು. ಇಂದು ಅವಳ ಉಡಿಗೆಯಲ್ಲಿ, ಹಣೆಯ ಮೇಲೆ ಹರಿದಾಡುತ್ತಿದ್ದ ಅವಳ ಕೆಲವು ಕೂದಲುಗಳಲ್ಲಿದ್ದ ವಿಶೇಷ ಎಲ್ಲರ ದೃಷ್ಟಿ ಯನ್ನೂ ಸೆಳೆಯುವಂತಿತ್ತು. ನಿನ್ನಿನ ಅನುಭವದೊಂದಿಗೆ ಇಂದಿನ ಈ ಬದಲಾವಣೆಯನ್ನು ನೋಡಿ ನರೇಂದ್ರನ ಬಾಯಿಂದ ಒಂದು ಮಾತೂ

ಹೊರಡಲಿಲ್ಲ. ಅವನ ಆಶ್ಚರ್ಯದಿಂದ ಕೂಡಿದ ದೃಷ್ಟಿಯನ್ನನುಸರಿಸಿ ವಿಜಯಳ ದೃಷ್ಟಿ ತನ್ನ ದೇಹದ ಮೇಲೆ ಬಿದ್ದೊಡನೆ ನಾಚಿಕೆಯಿಂದ ಅವಳು ಉಡುಗಿಹೋಗಿದ್ದಳು. ಸೂಕ್ಷ್ಮದರ್ಶಿನಿಯ ಪೆಟ್ಟಿಗೆ ಇದುವರೆಗೂ ಅವನ ಕೈಯಲ್ಲೇ ಇತ್ತು. ಅದನ್ನವನು ಮೇಜಿನ ಮೇಲಿಟ್ಟು ನಿಧಾನವಾಗಿ ಹೇಳಿದ—"ನಮಸ್ಕಾರ. ನಾನು ವಿಲಾಯತಿಯಲ್ಲಿದ್ದಾಗ ಚಿತ್ರ ಬರೆಯುವುದನ್ನೂ ಅಭ್ಯಾಸ ಮಾಡಿದ್ದೆ. ನಿಮ್ಮನ್ನು ಎಷ್ಟೋ ಬಾರಿ ನೋಡಿದ್ದೆ. ಆದರೆ ಇಂದು ನೀವು ಈ ಕೋಣೆಯಲ್ಲಿ ಹೆಜ್ಜೆ ಇಟ್ಟ ಕೂಡಲೆ ನನ್ನ ಕಣ್ಣು ತೆರೆದಂತಾಯಿತು. ನಿಮ್ಮನ್ನು ಇಂದು ಯಾರಾದರೂ ಚಿತ್ರಕಾರರು ನೋಡಿದರೆ ಅವರ ಮನಸ್ಸೆಳೆಯದೇ ಇರುವುದಿಲ್ಲವೆಂದು ನಾನು ನಿಶ್ಚಯವಾಗಿ ಹೇಳುತ್ತೇನೆ. ಆಹಾ! ಇದೆಂತಹ ಸೌಂದರ್ಯ!"

ಈ ಸೌಂದರ್ಯೋಪಾಸನೆಯು ಅಂತರಂಗದಲ್ಲಿ ಅಡಗಿರುವುದು ನಿಷ್ಕಪಟ ಹಾಗೂ ಶ್ರದ್ಧಾಪೂರ್ಣ ಭಕ್ತಿಯೆಂದೂ, ಇದರಲ್ಲಿ ಸ್ವಾರ್ಥ ಸಾದನೆಯೇನೂ ಇಲ್ಲವೆಂದೂ, ಇದು ಇವರ ಬಾಯಲ್ಲಿ ಮಾತ್ರ ಬರತಕ್ಕದೆಂದೂ ವಿಜಯಳು ಮನಸ್ಸಿನಲ್ಲಿ ಯೋಚಿಸಿದಳು. ಆದರೆ ತನ್ನ ನಸುಗೆಂಪೇರಿದ ಮುಖವನ್ನು ಹೇಗೆ ಮುಚ್ಚಿಟ್ಟುಕೊಳ್ಳಬೇಕೆಂಬುದು ಅವಳಿಗೆ ತಿಳಿಯಲಿಲ್ಲ. ಸ್ವಲ್ಪಹೊತ್ತಿನ ಮೇಲೆ ಸರಿಪಡಿಸಿಕೊಂಡು ಹೇಳಿದಳು—"ನನ್ನನ್ನು ಹೀಗೆ ಅಪ್ರತಿಭಳನ್ನಾಗಿ ಮಾಡುವುದುಚಿತವೇ? ನಿಮ್ಮನ್ನು ಕರೆಸಿದ್ದು ಒಂದು ಪದಾರ್ಥವನ್ನು ಕೊಳ್ಳುವುದಕ್ಕೋಸ್ಕರ, ಚಿತ್ರ ಬರೆಸುವುದಕ್ಕೋಸ್ಕರವಲ್ಲ." ಈ ಉತ್ತರನನ್ನು ಕೇಳಿ ನರೇಂದ್ರನ ಮುಖ ಬಾಡಿತು. ಅವನು ಬಹಳ ಸಂಕೋಚದಿಂದ ಕುಂಠಿತನಾಗಿ ತಡವರಿಸುತ್ತಾ—"ನಾನಿನ್ನೇನೂ ಯೋಚಿಸಿ ಹೀಗೆ ಹೇಳಲಿಲ್ಲ. ನನ್ನದು ದೊಡ್ಡ ತಪ್ಪಾಯಿತು. ಇನ್ನಾವಾಗಲೂ ನಾನು........" ಎಂದು ಏನೋ ಮೆಲ್ಲಗೆ ಹೇಳಿಕೊಂಡ. ಅವನ ಅನುತಾಪದ ಪರಿಣಾಮವನ್ನು ನೋಡಿ ವಿಜಯಳು ನಕ್ಕಳು. ಸ್ನಿಗ್ಧ ಹಾಸ್ಯದಿಂದ ಅವಳ ಮುಖ ಉಜ್ವಲವಾಯಿತು. ಅವಳು "ನಿಮ್ಮ ಯಂತ್ರವೆಲ್ಲಿ ನೋಡೋಣ" ಎಂದು ಕೇಳಿದಳು.

ನರೇಂದ್ರ ಚೇತರಿಸಿಕೊಂಡು "ನೋಡಿ ತೋರಿಸುತ್ತೇನೆ" ಎಂದು ಮುಂದೆ ಸರಿದು ತನ್ನ ಪೆಟ್ಟಿಗೆಯನ್ನು ಬಿಚ್ಚಲು ಷುರುಮಾಡಿದ. ಈ ಕೋಣೆಯಲ್ಲಿ ಅಷ್ಟು ಹೆಚ್ಚು ಬೆಳಕು ಇಲ್ಲದ್ದನ್ನು ನೋಡಿ ವಿಜಯಳು ಮಗ್ಗುಲು

ಕೋಣೆಯನ್ನು ತೋರಿಸಿ ಹೇಳಿದಳು—"ಆ ಕೋಣೆಯಲ್ಲಿ ಪ್ರಕಾಶ ಹೆಚ್ಚು ಇದೆ. ಅಲ್ಲಿಗೆ ಹೋಗೋಣ ನಡೆಯಿರಿ" ಎಂದಳು.

"ಓಹೋ, ಆಗಲಿ ನಡೆಯಿರಿ" ಎಂದು ಆ ಪೆಟ್ಟಿಗೆಯನ್ನು ಹೊತ್ತು ಕೊಂಡು ಅವಳನ್ನು ಹಿಂಬಾಲಿಸಿ ಅವನು ಮಗ್ಗಲು ಕೋಣೆಗೆ ಹೋದ. ಒಂದು ಸಣ್ಣ ಮೇಜಿನ ಮೇಲೆ ಯಂತ್ರವನ್ನಿಟ್ಟು ಅವರಿಬ್ಬರೂ ಎದುರು ಬದಿರಿಗೆ ಎರಡು ಕುರ್ಚಿಯನ್ನೆಳೆದುಕೊಂಡು ಕುಳಿತುಕೊಂಡರು. ನರೇಂದ್ರ ಹೇಳಿದ—"ನೋಡಿ ಈಗ ಇದನ್ನು. ಉಪಯೋಗಿಸುವ ಬಗೆಯನ್ನು ಆಮೇಲೆ ಹೇಳುತ್ತೇನೆ."

"ಈ ಸೂಕ್ಷ್ಮದರ್ಶಿನಿಯನ್ನು ಕಣ್ಣಿನಿಂದ ನೋಡದಿದ್ದವರಿಗೆ ಇಷ್ಟು ಸಣ್ಣ ಪದಾರ್ಥದಲ್ಲಿ ಇಷ್ಟು ದೊಡ್ಡ ಆಶ್ಚರ್ಯವನ್ನು ನೋಡಬಹುದೆಂಬುದರ ಕಲ್ಪನೆಯೂ ಬರುವುದಿಲ್ಲ. ಹೊರಗಿನ ಅನಂತ ಬ್ರಹ್ಮಾಂಡದಷ್ಟೇ ವಿಶಾಲ ವಾದ ವಿಶ್ವವನ್ನು ಮನುಷ್ಯ ತನ್ನ ಸಣ್ಣ ಮುಷ್ಟಿಯಲ್ಲಿ ಇಟ್ಟುಕೊಳ್ಳಬಲ್ಲ. ಇದು ಈ ಯಂತ್ರದ ಸಹಾಯದಿಂದ ಅರ್ಥವಾಗುತ್ತೆ." ಅವನು ಇಷ್ಟು ಭೂಮಿಕೆಯನ್ನು ರಚಿಸಿ ವಿಜಯಳ ಗಮನವನ್ನು ತನ್ನ ಕಡೆ ಸೆಳೆದ. ವಿಲಾಯತಿಯಲ್ಲಿ ಅವನು ಡಾಕ್ಟರ್ ವಿದ್ಯೆಯನ್ನು ಕಲಿತಮೇಲೆ ಅವನ ಜ್ಞಾನ ಪಿಪಾಸೆ ಜೀವಾಣು ತತ್ತ್ವದ ಕಡೆ ಓಡಿತು. ಆದ್ದರಿಂದ ಅವನ ಜ್ಞಾನ ಸಂಗ್ರಹವೂ ಪ್ರತಿದಿನ ಹೆಚ್ಚುತ್ತ ಹೋಯಿತು. ಅವನು ಈ ಯಂತ್ರ ದೊಂದಿಗೆ ಅದೆಲ್ಲವನ್ನೂ ಹೇಳಬೇಕೆಂದು ಮಾಡಿದ್ದ. ಇದೆಲ್ಲ ತಿಳಿಯದೆ ಬರಿಯ ಯಂತ್ರದಿಂದ ಯಾರಿಗೂ ಉಪಯೋಗವಾಗುವುದಿಲ್ಲವೆಂದು ಅವನು ಯೋಚಿಸಿದ. ಮೊದಲು ವಿಜಯಳಿಗೆ ಅದರಲ್ಲಿ ಏನೂ ಕಾಣಲಿಲ್ಲ........ ಅದರಲ್ಲೇನೋ ಮಸಕುಮಸಕಾಗಿ ಕಂಡಿತು. ಅದರಲ್ಲಿ ಏನು ಕಾಣುತ್ತಿದೆ ಯೆಂದು ನರೇಂದ್ರ ಆಗ್ರಹದಿಂದ ಕೇಳಿದಂತೆಲ್ಲ ಅವಳಿಗೆ ಹೆಚ್ಚು ನಗುಬರುತ್ತಿತ್ತು. ನೋಡುವ ಪ್ರಯತ್ನವನ್ನೂ ಅವಳು ಮಾಡಲಿಲ್ಲ. ಅದರಲ್ಲಿ ಅವಳಿಗೆ ಮನಸ್ಸೂ ಇರಲಿಲ್ಲ. ಅದನ್ನು ಹೀಗೆ ನೋಡಬೇಕು ಎಂದು ಅವಳಿಗೆ ತಿಳಿಸಲು ಅವನು ಎಷ್ಟೋ ಪ್ರಯತ್ನಪಟ್ಟ. ಆ ಯಂತ್ರದ ಪ್ರತಿಯೊಂದು ಭಾಗವನ್ನೂ ತಿರುಗಿಸಿ ಸರಿಪಡಿಸಿದ........ಆದರೆ ನೋಡುವವರು ಯಾರು? ನರೇಂದ್ರನ ಕಂಠಸ್ವರದಿಂದ ವಿಜಯಳ ಅಂತರಂಗದಲ್ಲಿ ಕೋಲಾಹಲವೇಳು

ತ್ತಿತ್ತು. ಅವನ ದೀರ್ಘನಿಶ್ವಾಸದಿಂದ ಅವಳ ಹಣೆಮೇಲೆ ಕೆದರಿದ್ದ ಕೂದಲು ಹಾರಾಡಿ ಅವಳ ಸರ್ವಾಂಗಗಳೂ ಪುಲುಕಿತವಾಗುತ್ತಿದ್ದವು. ಅವನ ಕೈ ಅವಳ ಕೈಗಳೊಂದಿಗೆ ತಗುಲಿ ಅವಳ ದೇಹವನ್ನೇ ಅವಶವನ್ನಾಗಿ ಮಾಡಿತು. ಜೀವಾಣುಗಳೊಳಗೆ ಏನಿದೆಯೆಂಬುದನ್ನು ನೋಡುವುದರಿಂದ ಅವಳಿಗೇನಾಗ ಬೇಕು?....ಯಾವ ಹಳ್ಳಿ ಮಲೇರಿಯಾದಿಂದ ನಾಶವಾಗುತ್ತಿದೆ? ಯಾವ ಮನೆ ಕ್ಷಯರೋಗದಿಂದ ಶೂನ್ಯವಾಗಿದೆಯೆಂಬುದನ್ನು ತಿಳಿದುಕೊಳುವುದ ರಿಂದ ಅವಳಿಗೇನು ಲಾಭ? ಅದು ತಿಳಿದರೂ ಅವಳೇನೂ ಅದನ್ನು ನಿವಾರಿ ಸುವಂತಿಲ್ಲ. ಅವಳೇನೂ ಡಾಕ್ಟರಲ್ಲ. ಹತ್ತುನಿಮಿಷ ಏನೇನೋ ಒದರು ತ್ತಿದ್ದು ತಲೆ ಚಚ್ಚಿಕೊಂಡಾದ ಮೇಲೆ ನರೇಂದ್ರ ಬೇಸರಪಟ್ಟುಕೊಂಡು ಹೇಳಿದ—“ಹೋಗಿ ಇದು ನಿಮಗೆ ಸರಿಯಲ್ಲ. ಇಷ್ಟು ಮಂದಬುದ್ಧಿಯವ ರನ್ನು ನಾನು ನನ್ನ ಜೀವನದಲ್ಲೆಲ್ಲೂ ನೋಡಲಿಲ್ಲ.”

ವಿಜಯಳು ಬಹಳ ಪ್ರಯತ್ನಪಟ್ಟು ನಗುವನ್ನು ತಡೆದು ಹೇಳಿ ದಳು—“ನನ್ನದು ಮಂದಬುದ್ಧಿಯೋ? ನಿಮಗೆ ತಿಳಿಸಲು ಬರುವುದಿ ಲ್ಲವೋ?”

ತನ್ನ ಒರಟು ಮಾತಿಗೆ ನರೇಂದ್ರ ಲಜ್ಜಿಪಟ್ಟುಕೊಂಡು ಹೇಳಿದ— “ಇನ್ನು ತಿಳಿಸುವುದು ಹೇಗೆ ಹೇಳಿ? ನಿಮ್ಮ ಬುದ್ಧಿ ಮಂದವಲ್ಲ. ಆದರೆ ನೀವು ಇದರಲ್ಲಿ ಮನಸ್ಸಿಟ್ಟಿಲ್ಲವೆಂದು ತೋರುತ್ತೆ. ನಾನು ಹೇಳಿ ಹೇಳಿ ಸಾಕಾದರೂ ನೀವು ಮಾತ್ರ ಸುಮ್ಮನೆ ಕಣ್ಣು ಬಿಟ್ಟುಕೊಂಡು ತಲೆ ತಗ್ಗಿಸಿ ನಗುತ್ತಿದ್ದೀರಿ?”

“ನಾನು ನಗುತ್ತಿದ್ದೇನೆಂದು ಯಾರು ಹೇಳಿದರು?”

“ನಾನೇ ಹೇಳುತ್ತಿದ್ದೇನೆ.”

“ಉಹುಂ, ನೀವು ತಪ್ಪು ಹೇಳುತ್ತಿದ್ದೀರಿ?”

“ನಾನು ತಪ್ಪು ಹೇಳುತ್ತಿದ್ದೇನೆ? ಉಂ, ಆಗಲಿ. ಆದರೆ ಯಂತ್ರ ವೇನೂ ತಪ್ಪಾಗಿಲ್ಲವಲ್ಲ. ಅದರಲ್ಲಿ ಕಾಣುವುದಿಲ್ಲವೇಕೆ?”

“ನಿಮ್ಮ ಯಂತ್ರ ಚೆನ್ನಾಗಿಲ್ಲ, ಆದ್ದರಿಂದ.”

ನರೇಂದ್ರ ಆಶ್ಚರ್ಯದಿಂದ ಅವಾಕ್ಕಾಗಿ ಹೇಳಿದ—“ಚೆನ್ನಾಗಿಲ್ಲವೇ? ಇಷ್ಟು ಉತ್ತಮ ಯಂತ್ರ ಈ ದೇಶದಲ್ಲಿ ಬಹಳ ಜನರಲ್ಲಿಲ್ಲ. ಇದರಲ್ಲಿ ಎಷ್ಟು ಚೆನ್ನಾಗಿ........” ಎಂದು ಅವನು ಆ ಯಂತ್ರದಲ್ಲಿ ನೋಡಲು ತಲೆ ತಗ್ಗಿಸಿದ.

ಕೂಡಲೆ ಅವನ ತಲೆ ವಿಜಯಳ ತಲೆಗೆ ತಗುಲಿತು.

'ಉಃ' ಎಂದು ವಿಜಯಳು ತನ್ನ ಕೈಯಲ್ಲಿ ತಲೆಯನ್ನು ಸವರಿಕೊಳ್ಳ ಹತ್ತಿದಳು. ನರೇಂದ್ರ ಅಪ್ರತಿಭನಾಗಿ ಏನೋ ಹೇಳಬಯಸಿದ. ಅಷ್ಟರಲ್ಲೇ ಅವಳು ಕಿಲಕಿಲನೆ ನಕ್ಕು ಹೇಳಿದಳು—"ತಲೆ ತಗುಲಿದರೆ ಏನಾಗುತ್ತೆ, ಗೊತ್ತಿದೆಯೇ? ಹುಚ್ಚು ಹಿಡಿಯುತ್ತೆ."

ನರೇಂದ್ರ ನಕ್ಕು ಹೇಳಿದ—"ಹಾಗಾದರೆ ಅದು ನಿಮ್ಮ ತಲೆಗೇ ಹಿಡಿಯುವುದು ಸರಿಯೆಂದು ತೋರುತ್ತೆ."

"ಓಹೋ! ಅಷ್ಟಲ್ಲವೇ ಏನು! ನಿಮ್ಮ ಯಂತ್ರ ಚೆನ್ನಾಗಿಲ್ಲವೆಂದು ಹೇಳಿದ್ದಕ್ಕೆ ನನ್ನ ತಲೆಗೆ ಹುಚ್ಚು ಹಿಡಿಯಬೇಕೋ?"

ನರೇಂದ್ರ ನಕ್ಕರೂ, ಅವನ ಮುಖ ಬಾಡಿತು. ಅವನು ತಲೆಯಲ್ಲಾಡಿಸಿ ಹೇಳಿದ—"ಯಂತ್ರ ಮುರಿದಿಲ್ಲ. ನಿಮಗೆ ಖಂಡಿತ ಹೇಳುತ್ತೇನೆ. ನನ್ನ ಹತ್ತಿರ ಏನೂ ಇಲ್ಲ; ಆದ್ದರಿಂದ ನಿಮ್ಮನ್ನು ಮೋಸ ಮಾಡಿ ದುಡ್ಡು ತೆಗೆದುಕೊಂಡು ಹೋಗಬೇಕೆಂದಿದ್ದೇನೆಂದು ನಿಮಗೆ ಸಂದೇಹವಾಗಿರಬಹುದು. ಆದರೆ ಇದನ್ನು ನೀವು ಆಮೇಲೆ ನೋಡಿ, ಗೊತ್ತಾಗುತ್ತೆ."

"ಆಮೇಲೆ ನೋಡಿ ಏನು ಮಾಡಲಿ ಹೇಳಿ. ಆಮೇಲೆ ನೀವೆಲ್ಲಿ ಸಿಕ್ಕುತ್ತೀರಿ?"

"ಹಾಗಾದರೆ ನೀವೇಕೆ ಕೊಳ್ಳುತ್ತೇನೆಂದು ಹೇಳಿದಿರಿ? ನನಗೇಕೆ ವ್ಯರ್ಥವಾಗಿ ತೊಂದರೆಕೊಟ್ಟಿರಿ?" ನರೇಂದ್ರ ಸ್ವಲ್ಪ ಕಹಿಯಾಗೇ ಹೇಳಿದ.

"ಆಗ ಇದು ಮುರಿದಿದೆಯೆಂದೇಕೆ ನೀವು ಹೇಳಲಿಲ್ಲ?" ವಿಜಯಳು ಗಂಭೀರಳಾಗಿ ಕೇಳಿದಳು.

ನರೇಂದ್ರ ಬಹಳ ಬೇಸರದಿಂದ ಹೇಳಿದ—"ಇದು ಮುರಿದಿಲ್ಲವೆಂದು ನಾನು ನೂರು ಬಾರಿ ಹೇಳಿದರೂ ಇದು ಮುರಿದಿದೆಯೆಂದೇ ನೀವು ಹೇಳುತ್ತಿರುವಿರಿ."

ಮರುಕ್ಷಣವೇ ಅವನು ಸಮಾಧಾನದಿಂದ ಎದ್ದು ನಿಂತು ಹೇಳಿದ—"ಉಂ, ಸರಿ. ನಾನಿನ್ನು ಹೆಚ್ಚು ಚರ್ಚೆ ಮಾಡಬಯಸುವುದಿಲ್ಲ. ಇದು ಮುರಿದಿದೆಯೆಂದೇ ತಿಳಿಯಿರಿ. ನಾನು ನಾಳೆ ಹೋಗದಂತೆ ಮಾಡಿದುದೊಂದೇ ನಿಮ್ಮಿಂದ ನನಗಾದ ನಷ್ಟ. ಆದರೆ ಎಲ್ಲರೂ ನಿಮ್ಮಂತೆ ಕುರುಡರಲ್ಲ. ಕಲಿಕತ್ತೆಯಲ್ಲಿ ಇದನ್ನು ಅನಾಯಾಸವಾಗಿ ಮಾರಬಲ್ಲೆ, ತಿಳಿಯಿರಿ.

ಸರಿ, ನಾನಿನ್ನು ಹೊರಟೆ........" ಎಂದು ಅವನು ಯಂತ್ರವನ್ನು ಪೆಟ್ಟಿಗೆಯ ಲ್ಲಿಡುವ ಯತ್ನಮಾಡಿದ.

ವಿಜಯಳು ಗಂಭೀರಭಾವದಿಂದ ಹೇಳಿದಳು—"ಇಷ್ಟು ಹೊತ್ತಿನಲ್ಲಿ ಹೇಗೆ ಹೋಗುತ್ತೀರಿ. ಇಲ್ಲಿ ಊಟಮಾಡದೇ ಹೋಗುವುದಕ್ಕಾಗುವುದಿಲ್ಲ."

"ಉಹುಂ, ಅದರ ಅಗತ್ಯವಿಲ್ಲ."

"ಅದೇಕೆ ?"

ನರೇಂದ್ರ ಮುಖವೆತ್ತಿ ಹೇಳಿದ—"ನೀವು ಮನಸ್ಸಿನಲ್ಲೇ ನಗುತ್ತಿದ್ದೀರಿ. ನೀವು ನನ್ನನ್ನು ಹಾಸ್ಯಮಾಡುತ್ತಿದ್ದೀರಾ ?"

"ನಿನ್ನೆ ಊಟಕ್ಕೇಳಿರೆಂದು ಹೇಳಿದಾಗ ನಿಮ್ಮನ್ನು ಹಾಸ್ಯಮಾಡಿದೆನೇ ?....ಉಹುಂ....ಅದು ಸಾಧ್ಯವಿಲ್ಲ. ನೀವಿಂದು ಊಟಮಾಡದೇ ಹೋಗಕೂಡದು. ಸ್ವಲ್ಪ ಕೂಡಿ. ನಾನೀಗಲೇ ಬರುತ್ತೇನೆ" ಎಂದು ಅವಳು ನಗುವನ್ನು ತಡೆದುಕೊಂಡು ತನ್ನ ಸೌಂದರ್ಯದ ಹೊನಲನ್ನು ಕೋಣೆಯಲ್ಲೆಲ್ಲ ಹರಸಿ ಹೊರಗೆ ಹೋದಳು. ಸುಮಾರು ಐದು ನಿಮಿಷಗಳಾದ ಮೇಲೆ ಅವಳು ತನ್ನ ಕೈಯಲ್ಲಿ ಊಟದ ತಟ್ಟೆಯನ್ನೂ, ಆಳಿನ ಕೈಯಲ್ಲಿ ಚಹದ ಸಲಕರಣೆಗಳನ್ನೂ ತೆಗೆಸಿಕೊಂಡು ಬಂದಳು. ಮೇಜು ಖಾಲಿ ಇದ್ದುದನ್ನು ನೋಡಿ ಅವಳು ಕೇಳಿದಳು—"ಇಷ್ಟು ಬೇಗ ಇದನ್ನು ಮುಚ್ಚಿಟ್ಟುಬಿಟ್ಟಿರಾ ? ನಿಮಗೆ ಸಿಟ್ಟೇನೂ ಕಡಿಮೆಯಿಲ್ಲ."

ನರೇಂದ್ರ ಉದಾಸೀನದಿಂದ ಉತ್ತರ ಹೇಳಿದ—"ನೀವು ಅದನ್ನು ತೆಗೆದುಕೊಳ್ಳುವುದಿಲ್ಲ. ಇದರಲ್ಲಿ ಸಿಟ್ಟಿನ ವಿಷಯವೇನು ? ಆದರೆ ಇಷ್ಟು ಭಾರಿ ಪದಾರ್ಥವನ್ನು ಇಷ್ಟು ದೂರ ಹೊತ್ತು ತಂದು ಮತ್ತೆ ಕೊಂಡೆಯ್ಯಲು ಎಷ್ಟು ತೊಂದರೆಯಾಗುತ್ತೆಂಬುದನ್ನು ಒಮ್ಮೆ ಯೋಚಿಸಿ ನೋಡಿ."

ತಟ್ಟೆಯನ್ನು ಮೇಜಿನ ಮೇಲಿಟ್ಟು ವಿಜಯಳು ಹೇಳಿದಳು—"ಇರಬಹುದು. ಆದರೆ ನೀವು ನನಗೋಸ್ಕರವೇನೂ ಕಷ್ಟಪಡಲಿಲ್ಲ. ನಿಮಗಾಗಿ ತೊಂದರೆಪಟ್ಟುಕೊಂಡಿರಿ. ಹೋಗಲಿ ಊಟಕ್ಕೇಳಿ. ನಾನು ಚಹವನ್ನು ಸಿದ್ಧಪಡಿಸುತ್ತೇನೆ."

ನರೇಂದ್ರ ಸುಮ್ಮನಿದ್ದುದನ್ನು ನೋಡಿ ಅವಳು ಇನ್ನೊಮ್ಮೆ ಹೇಳಿದಳು—"ಹೋಗಲಿ ನಾನೇ ಅದನ್ನು ಇಟ್ಟುಕೊಳ್ಳುತ್ತೇನೆ. ನೀವೇನೂ ಅದನ್ನು ಹೊತ್ತುಕೊಂಡು ಹೋಗಬೇಕಾಗಿಲ್ಲ. ಈಗಲಾದರೂ ಊಟಕ್ಕೆ ಏಳಿ."

" ನೀವು ಕರುಣೆ ತೋರಬೇಕೆಂದು ನಾನೇನೂ ಕೇಳಲಿಲ್ಲ." ನರೇಂದ್ರ ನಿಗೆ ಅವಮಾನವಾದಂತಾಗಿ ಹೇಳಿದ.

" ಅಂದು ನೀವು ನಿಮ್ಮ ಮಾವನ ಪರವಾಗಿ ಮಾತನಾಡಲು ಬಂದಿದ್ದಾಗ ಕೇಳಿರಲಿಲ್ಲವೇ ? "

" ಅದು ಇನ್ನೊಬ್ಬರಿಗಾಗಿ, ನನಗಾಗಿಯಲ್ಲ. ನನಗೆ ಆ ಅಭ್ಯಾಸವಿಲ್ಲ."

ಇದು ಎಷ್ಟರಮಟ್ಟಿಗೆ ನಿಜವೆಂಬುದು ವಿಜಯಳಿಗೆ ಚೆನ್ನಾಗಿ ತಿಳಿದಿತ್ತು. ಆದ್ದರಿಂದ ಈ ಮಾತಿನಿಂದ ಅವಳಿಗೆ ಗಾಸಿಯಾದಂತಾಗಿ ಅವಳು ಹೇಳಿದಳು—" ಅವೇನೇ ಆಗಲಿ. ನೀವಿನ್ನು ಅದನ್ನು ವಾಪಸು ಒಯ್ಯಬೇಕಾದ್ದಿಲ್ಲ. ನಾನದನ್ನು ಕೊಳ್ಳುತ್ತೇನೆ. ಇನ್ನೇನು ?........ಊಟಕ್ಕೇಳಿ."

" ಅಂದರೆ ? " ನರೇಂದ್ರ ಸಂದಿಗ್ಧ ಸ್ವರದಲ್ಲಿ ಕೇಳಿದ.

" ಅಂದರೇನೂ ಇಲ್ಲ."

ಈ ಉತ್ತರವನ್ನು ಕೇಳಿ ಒಂದು ಕ್ಷಣ ನರೇಂದ್ರ ಸ್ತಬ್ಧನಾದ. ಅದಕ್ಕೆ ಕಾರಣವನ್ನು ಮನಸ್ಸಿನಲ್ಲೇ ಯೋಚಿಸಿ ಅದರಿಂದ ಅವನು ಬಹಳ ಸಿಟ್ಟಾಗಿ ಹೇಳಿದ—" ಅದೇನು ಸ್ಪಷ್ಟವಾಗಿ ಹೇಳಿ. ನೀವಿದನ್ನು ಕೊಂಡುಕೊಳ್ಳುವ ನೆಪಮಾಡಿ ಇದನ್ನು ತರಿಸಿ ನಿಮ್ಮಲ್ಲೇ ಇಟ್ಟುಕೊಳ್ಳುವ ಹಂಚಿಕೆಮಾಡಿದ್ದೀರಾ ? ತಂದೆಯವರು ಇದನ್ನೂ ನಿಮ್ಮ ಹತ್ತಿರ ಅಡವಿಟ್ಟಿದ್ದರೇ? ಹಾಗಾದರೆ ನೀವು ನನ್ನನ್ನೂ ಹಿಡಿದುಹಾಕುವಿರೆಂದು ತೋರುತ್ತೆ. ನನ್ನನ್ನೂ ನಿಮ್ಮ ಹತ್ತಿರ ಅಡವು ಹಾಕಿದ್ದಾರೆಂದು ಹೇಳುವುದಕ್ಕೂ ನೀವು ಹಿಂಜರಿಯುವುದಿಲ್ಲ."

ವಿಜಯಳ ಮುಖ ನಸುಗೆಂಪಾಯಿತು. ಅವಳು ಕೊರಳುಕೊಂಕಿಸಿ ಹೇಳಿದಳು—" ಕಾಲಿಪದ, ಇಲ್ಲಿ ನಿಂತು ಏನು ನೋಡುತ್ತಿದ್ದೀಯೋ ? ಅದೆಲ್ಲ ಇಲ್ಲಿಟ್ಟು ಪಾನೀಯವನ್ನು ತೆಗೆದುಕೊಂಡು ಬಾ ಹೋಗು ? "

ಆಳು ಚಹದ ಪಾತ್ರೆಯನ್ನು ಮೇಜಿನ ಪಕ್ಕದಲ್ಲಿಟ್ಟು ಹೊರಟುಹೋದ. ವಿಜಯಳು ತಲೆತಗ್ಗಿಸಿಕೊಂಡು ಚಹ ಬೆರೆಸಲು ಶುರುಮಾಡಿದಳು. ನರೇಂದ್ರ ಸಿಟ್ಟನಿಂದ ಮುಖ ದಪ್ಪಗೆ ಮಾಡಿಕೊಂಡು ಕುರ್ಚಿಯಮೇಲೆ ಕುಳಿತ.

೧೨

ಸೃಷ್ಟಿ ನಿಯಮದ ವಿಷಯವಾಗಿ ವಿಜಯಳು ದೊಡ್ಡ ದೊಡ್ಡ ಪಂಡಿತರ ಬಾಯಿಂದ ಅನೇಕ ಚರ್ಚೆಗಳನ್ನೂ ಅನೇಕ ಸಂಶೋಧನೆಗಳನ್ನೂ ಕೇಳಿದ್ದಳು. ಆದರೆ ಅದರಲ್ಲಿ ತಿಳಿಯಲು ಶಕ್ಯವಾದ ಅಂಶದ ಸ್ವರೂಪವೇನು? ಅದೆಲ್ಲಿಂದ ಆರಂಭವಾಗುತ್ತೆ? ಅದರ ಕಾರ್ಯವೇನು? ಅದರ ರೂಪರೇಷೆಗಳೆಂತು? ಅದರ ಇತಿಹಾಸವೇನು? ಇವೆಲ್ಲವನ್ನೂ ಇಷ್ಟು ಸ್ಪಷ್ಟ ಭಾಷೆಯಲ್ಲಿ ತಿಳಿಸಿಕೊಟ್ಟದ್ದು ಅವಳಿಗೆ ನೆನಪಿರಲಿಲ್ಲ. ಅವಳು ಈಗ ತಾನೆ ಮುರಿದದ್ದೆಂದು ಹಾಸ್ಯಮಾಡಿದ ಯಂತ್ರದ ಸಹಾಯದಿಂದ ಅವಳೆಂತಹ ಅದ್ಭುತ ದೃಶ್ಯಗಳನ್ನು ನೋಡಿದಳು! ಈ ನರಪೇತಲ ಮತ್ತು ಹುಚ್ಚನಂತಹ ವ್ಯಕ್ತಿ ಡಾಕ್ಟರ್ ಪರೀಕ್ಷೆಯನ್ನು ಪಾಸು ಮಾಡಿದ್ದಾನೆಂಬುದನ್ನೂ ನಂಬುವಂತಿರಲಿಲ್ಲ. ಅಷ್ಟೇ ಅಲ್ಲ, ಜೀವವಿಜ್ಞಾನದಲ್ಲಿ ಅವನಿಗಿದ್ದ ಅಗಾಧ ಪಾಂಡಿತ್ಯ, ಅದರಲ್ಲಿದ್ದ ದೃಢ ವಿಶ್ವಾಸ, ಆ ವಿಷಯಗಳನ್ನು ನೆನಪಿಟ್ಟುಕೊಳ್ಳುವುದರಲ್ಲಿ ಅವನ ವಿಚಿತ್ರ ಶಕ್ತಿ—ಇವನ್ನು ನೋಡಿ ವಿಜಯಳು ಬೆಪ್ಪಾದಳು. ಇದೆಲ್ಲದರ ಜೊತೆಗೆ ಅವನನ್ನು ರೇಗಿಸುವುದು ಬಹಳ ಸುಲಭವಾದ ಕೆಲಸ. ಅವಳೆಷ್ಟೋ ವಿಷಯಗಳನ್ನು ಕೇಳುತ್ತಿದ್ದರೂ, ಅದರಲ್ಲಿ ವಿಷಯಗಳು ಅವಳ ಕಿವಿಗೇ ಬೀಳುತ್ತಿರಲಿಲ್ಲ. ಅವಳು ಸುಮ್ಮನೆ ಅವನ ಮುಖವನ್ನು ನೋಡುತ್ತ ಕುಳಿತಿರುತ್ತಿದ್ದಳು. ನರೇಂದ್ರ ವಿಷಯದಲ್ಲಿ ತಲ್ಲೀನನಾಗಿ ದೊಡ್ಡ ಭಾಷಣವನ್ನೇ ಕೊಡುತ್ತಿದ್ದಾಗ ವಿಜಯಳು ಅವನ ತ್ಯಾಗ, ಅವನ ಸಾಧುಗುಣ, ಸರಳತನ ಇದನ್ನು ನೆನೆನೆನೆದು ಅವನಲ್ಲಿ ಇಮ್ಮಡಿಯಾಗಿ ಸ್ನೇಹ, ಶ್ರದ್ಧೆ ಮತ್ತು ಭಕ್ತಿ ಇಡುತ್ತಿದ್ದಳು.

ಇದ್ದಕ್ಕಿದ್ದಂತೆ ತಾನು ಹೇಳುತ್ತಿರುವುದೆಲ್ಲ ವ್ಯರ್ಥವೆಂದು ನರೇಂದ್ರನಿಗೆ ತೋರಿ ಅವನು ಹೇಳಿದ—"ನೀವೇನೂ ಕೇಳುತ್ತಿಲ್ಲವಲ್ಲ?"

"ಕೇಳುತ್ತಿದ್ದೇನಲ್ಲ?" ವಿಜಯಳು ಚಕಿತಳಾಗಿ ಹೇಳಿದಳು.

"ಏನು ಕೇಳುತ್ತಿದ್ದೀರಿ? ಹೇಳಿ."

"ಆಹಾ! ಒಂದೇ ದಿನದಲ್ಲಿ ಎಲ್ಲವನ್ನೂ ಕಲಿತುಕೊಳ್ಳುವುದಕ್ಕೆ ಸಾಧ್ಯವೇ?"

ನರೇಂದ್ರ ಹತಾಶಭಾವದಿಂದ ಹೇಳಿದ—"ಉಹುಂ, ನಿಮಗೇನೂ

ಕಲಿಯಲು ಸಾಧ್ಯವಿಲ್ಲ. ನಿಮ್ಮಂತಹ ಅನ್ಯಮನಸ್ಕರನ್ನು ನಾನು ನನ್ನ ಜೀವನದಲ್ಲೇ ಎಲ್ಲೂ ನೋಡಲಿಲ್ಲ."

ವಿಜಯಳು ಸ್ವಲ್ಪವೂ ಅಪ್ರತಿಭಳಾಗದೆ ಹೇಳಿದಳು—"ಒಂದು ದಿನದಲ್ಲೇ ಕಲಿತುಕೊಳ್ಳಲು ಸಾಧ್ಯವೇ? ನೀವೆಲ್ಲ ಒಂದೇ ದಿನದಲ್ಲೇ ಕಲಿತಿರಾ?"

ನರೇಂದ್ರ ಕೇಕೆ ಹಾಕಿ ನಕ್ಕು ಹೇಳಿದ—"ನೀವು ಒಂದು ನೂರು ವರ್ಷದಲ್ಲೂ ಕಲಿಯಲಾರಿರಿ. ಅಲ್ಲದೆ ಇದೆಲ್ಲ ನಿಮಗೆ ಹೇಳಿಕೊಡುವವರು ಯಾರು?"

ವಿಜಯಳು ತುಟಿ ಕಚ್ಚಿ ನಗು ತಡೆದು ಹೇಳಿದಳು—"ನೀವು ಇಲ್ಲ ದಿದ್ದರೆ ಈ ಮುರುಕಲು ಯಂತ್ರವನ್ನು ಕೊಳ್ಳುವವರು ಯಾರು?"

ನರೇಂದ್ರ ಗಂಭೀರನಾಗಿ ಹೇಳಿದ—"ನೀವು ಇದನ್ನು ತೆಗೆದುಕೊಳ್ಳು ವುದೂ ಬೇಡ; ನಾನು ನಿಮಗೆ ಕಲಿಸಲೂ ಸಾಧ್ಯವಿಲ್ಲ."

"ಹೋಗಲಿ............ಹಾಗಾದರೆ ಚಿತ್ರ ಬರೆಯುವುದನ್ನು ಕಲಿಸಿರಿ. ಅದನ್ನಾದರೂ ಕಲಿತುಕೊಳ್ಳುತ್ತೇನೆ."

"ಅದೂ ನಿಮ್ಮ ಕೈಯಲ್ಲಿ ಆಗುವುದಿಲ್ಲ. ಇದನ್ನು ನೋಡುತ್ತಿದ್ದರೆ ಮನುಷ್ಯನಿಗೆ ಊಟ-ನಿದ್ರೆಗಳೂ ಬೇಕಾಗುವುದಿಲ್ಲ. ಇದರಲ್ಲೇ ನಿಮಗೆ ಆಸಕ್ತಿ ಇಲ್ಲವೆಂದಮೇಲೆ, ಚಿತ್ರ ಬರೆಯುವುದರಲ್ಲಿ ನಿಮಗೆ ಆಸಕ್ತಿ ಬರುತ್ತ ದೆಯೇ? ಉಹುಂ, ಅದೆಂದಿಗೂ ಸಾಧ್ಯವಿಲ್ಲ."

"ಹಾಗಾದರೆ ಚಿತ್ರ ಬರೆಯುವುದೂ ಬರುವುದಿಲ್ಲವೇ?"

"ಉಹುಂ."

ವಿಜಯಳು ಕೃತಕ ಗಾಂಭೀರ್ಯದಿಂದ ಹೇಳಿದಳು—"ಏನು ಬರ ದಿದ್ದರೂ ತಲೆಯಂತೂ ಕೆಡುತ್ತದೆ."

ಅವಳ ಮುಖದ ಭಾವ ಮತ್ತು ಅವಳ ಮಾತಿನ ಭಂಗಿಯನ್ನು ನೋಡಿ ನರೇಂದ್ರ ಮತ್ತೊಮ್ಮೆ ಕೇಕೆ ಹಾಕಿ ಹೇಳಿದ—"ಅದೇ ನಿಮಗೆ ಸರಿಯಾದ ಶಿಕ್ಷೆಯಾಗುತ್ತೆ."

ವಿಜಯಳು ಮುಖ ತಿರುಗಿಸಿ ನಗುವನ್ನು ಮುಚ್ಚಿಕೊಂಡು ಹೇಳಿ ದಳು—"ಓಹೋ, ಹೌದು. ನಿಮ್ಮಲ್ಲಿ ಹೇಳಿಕೊಡುವ ಶಕ್ತಿಯಿದೆಯೆಂದೇಕೆ

ಹೇಳಬಾರದು?....ಅಂದಹಾಗೆ ಆಳುಕಾಳುಗಳು ಏನು ಮಾಡುತ್ತಿದ್ದಾರೋ. ಏನೋ?........ಇನ್ನೂ ದೀಪವನ್ನೂ ಹಚ್ಚಿಲ್ಲ........ನೀವು ಸ್ವಲ್ಪ ತಡೆಯಿರಿ, ನಾನು ದೀಪ ಹಚ್ಚುವಂತೆ ಹೇಳಿಬರುತ್ತೇನೆ" ಎಂದು ಅವಳು ಗಡಿಬಿಡಿ ಯಿಂದ ಎದ್ದು ಹೋಗಿ ಬಾಗಿಲ ಪರದೆಯನ್ನು ತೆರೆದಳು. ಕೂಡಲೆ ಭೂತ ನೋಡಿದವಳಂತೆ ಬೆಪ್ಪಾದಳು. ಎದುರಿಗೇ ದಿವಾನಕೋಣೆಯ ಕೈಸಾಲೆಯಲ್ಲಿ ಎರಡು ಕುರ್ಚಿಯ ಮೇಲೆ ರಾಸಬಿಹಾರಿ ಮತ್ತು ವಿಲಾಸ ಇವರಿಬ್ಬರೂ ಕುಳಿತಿದ್ದರು. ವಿಲಾಸನ ಮುಖ ಕಪ್ಪಿಟ್ಟಿತ್ತು. ವಿಜಯಳು ಸುಧಾರಿಸಿ ಕೊಂಡು ಮುಂದೆ ಬಂದು ಕೇಳಿದಳು—"ನೀವು ಯಾವಾಗ ಬಂದಿರಿ ಕಕ್ಕ? ನನ್ನನ್ನೇಕೆ ಕರೆಯಲಿಲ್ಲ?"

ರಾಸಬಿಹಾರಿ ಒಣನಗೆಯೊಂದನ್ನು ನಕ್ಕು ಹೇಳಿದ—"ಸುಮಾರು ಅರ್ಧಗಂಟೆಯಾಯಿತು. ನೀನು ಮಾತಾಡುತ್ತಿದ್ದಿ. ಆದ್ದರಿಂದ ಕರೆಯ ಲಿಲ್ಲ. ಅವನು ಜಗದೀಶನ ಮಗನೇನು? ಅವನಿಗೇನು ಬೇಕಂತೆ?"

ವಿಜಯಳು ಕೋಣೆಯ ಒಳಗೂ ಕೇಳಿಸದಂತೆ ಹೇಳಿದಳು—"ಒಂದು ಸೂಕ್ಷ್ಮದರ್ಶಿನಿಯನ್ನು ಮಾರಿ ಬರ್ಮಾಕ್ಕೆ ಹೋಗಬೇಕೆಂದು ಮಾಡಿದ್ದಾರೆ. ಅದನ್ನೇ ತೋರಿಸುತ್ತಿದ್ದರು."

ವಿಲಾಸ ಗಟ್ಟಿಯಾಗಿ ಹೇಳಿದ—"ಸೂಕ್ಷ್ಮದರ್ಶಿನಿಯೋ? ಮೋಸ ಮಾಡಲು ಅವನಿಗೆ ಬೇರೆಲ್ಲೂ ಸ್ಥಳ ಸಿಗಲಿಲ್ಲವೋ?"

ರಾಸಬಿಹಾರಿ ಜಬರಿಸಿ ಹೇಳಿದರು—"ಅದೇಕೆ ಹಾಗೆ ಹೇಳುತ್ತೀ ವಿಲಾಸ? ನಮಗೆ ಅವನ ಉದ್ದೇಶ ಗೊತ್ತಿಲ್ಲ....ಅದು ಯೋಗ್ಯವಾಗಿದ್ದರೂ ಇರಬಹುದು."

ವಿಜಯಳ ಮುಖವನ್ನು ನೋಡಿ ತುಸು ನಕ್ಕು ಹೇಳಿದ—"ಗೊತ್ತಿ ಲ್ಲದ ವಿಚಾರದಲ್ಲಿ ಅಭಿಪ್ರಾಯ ವ್ಯಕ್ತಪಡಿಸುವುದು ನನಗೆ ಸರಿಹೋಗುವು ದಿಲ್ಲ. ಅವನ ಉದ್ದೇಶ ಕೆಟ್ಟದ್ದಲ್ಲದಿರಬಹುದು ಅಲ್ಲವೇ ಮಗು?" ಎಂದು ಕೊಂಚ ತಡೆದು ಮತ್ತೆ ಹೇಳಿದ—"ಬಲವಂತದಿಂದ ಯಾವುದನ್ನೂ ಹೇಳ ವುದಕ್ಕಾಗುವುದಿಲ್ಲವೆಂಬುದು ಸರಿಯೇ? ಅದೇನೇ ಇರಲಿ, ನಮಗೆ ಅದರ ಅಗತ್ಯವೇನು? ದುರ್ಬೀನಾಗಿದ್ದರೆ ಯಾವಾಗಲಾದರೂ ದೂರದ ಪದಾರ್ಥ ಗಳನ್ನು ನೋಡಲು ಉಪಯೋಗವಾಗುತ್ತಿತ್ತು....ಲೋ ಯಾರೋ? ಕಾಲಿ ಪದನೇ? ಆ ಕೋಣೆಯಲ್ಲಿ ದೀಪ ಹಚ್ಚಿಬರಲು ಹೋಗುತ್ತಿದ್ದೀಯೇನೋ?

ಅಲ್ಲಿರುವ ಬಾಬುಗಳಿಗೆ ನಾವದನ್ನು ಕೊಂಡುಕೊಳ್ಳುವುದಿಲ್ಲವೆಂದು ಹೇಳು. ಅವರು ಹೊರಡಬಹುದು. "

"ನಾನು ಕೊಳ್ಳುತ್ತೇನೆಂದು ಅವರ ಮುಂದೆ ಹೇಳಿರುವೆನಲ್ಲ." ವಿಜಯಳು ಹೆದರುತ್ತ ಹೇಳಿದಳು.

ರಾಸಬಿಹಾರಿ ತುಸು ಆಶ್ಚರ್ಯದಿಂದ ಕೇಳಿದ–"ಅದನ್ನೇಕೆ ಕೊಂಡುಕೊಳ್ಳುತ್ತೀ? ಅದರ ಅಗತ್ಯವೇನು?"

ವಿಜಯಳು ಸುಮ್ಮನಿದ್ದಳು.

"ಎಷ್ಟು ಖರೀದಿ ಕೇಳುತ್ತಾನೆ?"

"ಇನ್ನೂರು ರುಪಾಯಿ"

ರಾಸಬಿಹಾರಿ ಎರಡು ಹುಬ್ಬುಗಳನ್ನೂ ಮೇಲಕ್ಕೇರಿಸಿ ಹೇಳಿದ—"ಇನ್ನೂರೇ? ಇನ್ನೂರು ರುಪಾಯಿ ಕೇಳುತ್ತಾನೆಯೇ? ಹಾಗಾದರೆ ವಿಲಾಸ ಬಹಳ........ಏನು ವಿಲಾಸ, ನೀವು ಕಾಲೇಜಿನಲ್ಲಿ ಎಫ್. ಎ. ಕ್ಲಾಸಿನಲ್ಲಿ ಇಂತಹುದನ್ನು ಎಷ್ಟೋ ನೋಡಿದ್ದೀರಲ್ಲವೇ? ಒಂದು ಸೂಕ್ಷ್ಮದರ್ಶಿನಿಗೆ ಇನ್ನೂರು ರುಪಾಯೀ?........ಕಾಲೀಪದ ಈ ಚಾತುರ್ಯವೆಲ್ಲ ಇಲ್ಲಿ ನಡೆಯುವುದಿಲ್ಲವೆಂದು ಆ ಬಾಬುಗಳಿಗೆ ಹೇಳು ಹೋಗು."

ಈ ಮಾತುಗಳೆಲ್ಲ ನರೇಂದ್ರನ ಕಿವಿಗೇ ಬಿದ್ದಿತು. ಕಾಲೀಪದ ಹೊರಡಲುಸುವಾದದ್ದನ್ನು ನೋಡಿ ವಿಜಯಳು ಗಂಭೀರವಾಗಿ ದೃಢವಾದ ದನಿಯಲ್ಲಿ ಹೇಳಿದಳು—"ನೀನು ಸುಮ್ಮನೆ ದೀಪ ಹಚ್ಚಿ ಬಾ. ಹೇಳಬೇಕಾದದ್ದನ್ನು ನಾನೇ ಹೇಳುತ್ತೇನೆ."

ವಿಲಾಸ ತನ್ನ ತಂದೆಗೆ ವ್ಯಂಗ್ಯವಾಗಿ ಹೇಳಿದ—"ಅಪ್ಪ ನೀನೇಕೆ ವ್ಯರ್ಥವಾಗಿ ನಿನ್ನ ಅಪಮಾನಮಾಡಿಕೊಳ್ಳುತ್ತೀ? ಅವರಿನ್ನೂ ಸ್ವಲ್ಪ ನೋಡುವುದು ಬಾಕಿ ಇವೆಯೋ ಏನೋ?"

ರಾಸಬಿಹಾರಿ ಏನೂ ಹೇಳಲಿಲ್ಲ. ಆದರೆ ವಿಜಯಳ ಮುಖ ಸಿಟ್ಟಿನಿಂದ ಕೆಂಪೇರಿತು. ವಿಲಾಸ ಅದನ್ನು ನೋಡಿಯೂ ಹೇಳಿದ—"ನಾನೂ ಅನೇಕ ಸೂಕ್ಷ್ಮದರ್ಶಿನಿಯನ್ನು ನೋಡಿದ್ದೇನೆ ಅಪ್ಪ. ಆದರೆ ಅದಾವುದರಲ್ಲೂ ಕೇಕೆ ಹಾಕಿ ನಗುವ ವಿಷಯವಿಲ್ಲ."

ಹಿಂದಿನ ದಿನ ಅವನು ಊಟಮಾಡಿದ್ದೂ ಅವನಿಗೆ ತಿಳಿದಿತ್ತು. ಇಂದು ಅವನು ಗಟ್ಟಿಯಾಗಿ ನಕ್ಕಿದ್ದನ್ನೂ ಅವನು ಕಿವಿಯಾರೆ ಕೇಳಿದ್ದ.

ವಿಜಯಳ ಇಂದಿನ ಅಲಂಕಾರವೂ ಅವನ ಕಣ್ಣಿಗೆ ಬೀಳದಿರಲಿಲ್ಲ. ಆದ್ದರಿಂದ ಅವನು ಹೊಟ್ಟೆಕಿಚ್ಚಿನಿಂದ ಉರಿದುಬೀಳುತ್ತಿದ್ದ. ಅವನಿಗೆ ಹಿಂದು ಮುಂದಿನ ಪರಿಜ್ಞಾನವೇ ಇರಲಿಲ್ಲ. ವಿಜಯಳು ಅವನಿಗೆ ಬೆನ್ನುಮಾಡಿ ರಾಸಬಿಹಾರಿಗೆ ಹೇಳಿದಳು—"ನನ್ನೊಂದಿಗೆ ನೀವೇನಾದರೂ ಮುಖ್ಯವಾದ ವಿಷಯ ಮಾತನಾಡಬೇಕಾಗಿತ್ತೇ ?"

ಯಾರಿಗೂ ಕಾಣದಂತೆ ಮಗನ ಮೇಲೊಂದು ಸಿಟ್ಟಿನ ದೃಷ್ಟಿಯನ್ನು ಬೀರಿ ರಾಸಬಿಹಾರಿ ಸ್ನೇಹದಿಂದ ಹೇಳಿದ—"ಮಾತೇನೋ ಆಡಬೇಕಾಗಿದೆ. ಆದರೆ ಅದಕ್ಕೇಕಿಷ್ಟು ಅವಸರ ಮಗು ?"

ಮತ್ತೆ ಸ್ವಲ್ಪ ತಡೆದು ಹೇಳಿದ—"ಉಂ, ಅವನಿಗೆ ಮಾತು ಕೊಟ್ಟ ಮೇಲೆ ಅದೇನೇ ಆಗಲಿ ನಾವು ಅದನ್ನು ಕೊಳ್ಳಲೇಬೇಕೆಂದು ನನಗೆ ತೋರುತ್ತೆ. ಇನ್ನೂರು ರುಪಾಯಿ ಹೆಚ್ಚೋ? ಮಾತಿನ ಬೆಲೆ ಹೆಚ್ಚೋ? ಅವನನ್ನು ನಾಳೆ ಬಂದು ದುಡ್ಡು ತೆಗೆದುಕೊಂಡು ಹೋಗುವಂತೆ ಹೇಳು ಮಗು."

ವಿಜಯಳು ಈ ಪ್ರಶ್ನೆಗೆ ಉತ್ತರ ಕೊಡದೇ ಕೇಳಿದಳು—"ನಿಮ್ಮೊಂದಿಗೆ ನಾಳೆ ಮಾತಾಡಿದರಾಗುವುದಿಲ್ಲವೇ ಕಾಕಾಜಿ?"

"ಅದೇಕೆ ಮಗು?" ರಾಸಬಿಹಾರಿ ತುಸು ಆಶ್ಚರ್ಯದಿಂದ ಕೇಳಿದ.

ವಿಜಯಳು ಒಂದು ಕ್ಷಣ ಸುಮ್ಮನಿದ್ದು ಸಂಕೋಚವನ್ನೆಲ್ಲಾ ಬದಿಗೊತ್ತಿ ಹೇಳಿದಳು—"ಅವರಿಗೆ ರಾತ್ರಿ ಹೊತ್ತಾಗುತ್ತದೆ. ಅವರು ಸ್ವಲ ದೂರ ಹೋಗಬೇಕಾಗಿದೆ. ನಾನು ಅವರೊಂದಿಗೆ ಸ್ವಲ್ಪ ಮಾತಾಡಬೇಕಾಗಿದೆ "

ಅವಳ ಈ ಮಾತಿನಿಂದ ರಾಸಬಿಹಾರಿ ಬೆಪ್ಪಾದರೂ ಹೊರಗೆ ಇದನ್ನು ಲೇಶಮಾತ್ರವೂ ತೋರಗೊಡಲಿಲ್ಲ. ಅಂತಹ ಕತ್ತಲಿನಲ್ಲೂ ವಿಜಯಳ ಎರಡು ಕಣ್ಣುಗಳೂ ಹಿಂಸ್ರಪಶುವಿನ ಕಣ್ಣುಗಳಂತೆ ಹೊಳೆಯುತ್ತಿದ್ದವು. ಅವಳೇನೋ ಹೇಳಬಯಸಿದಳು. ಇದನ್ನು ಕೂಡಲೇ ಆ ಧೂರ್ತ ರಾಸಬಿಹಾರಿ ಗ್ರಹಿಸಿ ಅದನ್ನು ತಡೆದು ನಗುಮುಖದಿಂದ ಹೇಳಿದ—"ಒಳ್ಳೆಯದು ಮಗು. ನಾನು ಹಾಗಾದರೆ ನಾಳೆ ಬೆಳಿಗ್ಗೆಯೇ ಬರುತ್ತೇನೆ. ವಿಲಾಸ, ಕತ್ತಲಾಗುತ್ತಿದೆ ಏಳಪ್ಪ ಹೋಗೋಣ" ಎಂದು ಅವನು ಎದ್ದು ನಿಂತು ಮಗನ ತೋಳನ್ನು ಬಲವಾಗಿ ಹಿಡಿದುಕೊಂಡು ಅವನ ಸಿಟ್ಟು

ಹೊರಹೊಮ್ಮುವಷ್ಟರಲ್ಲೇ ಅವನನ್ನು ಎಳೆದುಕೊಂಡು ಹೊರಗೆ ಹೊರಟು ಹೋದ.

ಇದುವರೆಗೆ ವಿಜಯುಳು ವಿಲಾಸನ ಕಡೆ ನೋಡಿರಲಿಲ್ಲ. ಆದ್ದರಿಂದ ಅವನ ಮುಖದ ಭಾವ, ಅವನ ದೃಷ್ಟಿ, ಅದೊಂದೂ ಅವಳ ಕಣ್ಣಿಗೆ ಬೀಳಲಿಲ್ಲ. ಆದರೂ ಅವಳೆಲ್ಲ ಊಹಿಸಿ ಕಲ್ಲಿನಂತೆ ಬಹಳಹೊತ್ತು ನಿಂತುಬಿಟ್ಟಳು.

ಕಾಲೀಪದ ಈ ಕೋಣೆಯಲ್ಲಿ ದೀಪ ಹಚ್ಚಲು ಬಂದು "ಆ ಕೋಣೆಯಲ್ಲಿ ದೀಪ ಹಚ್ಚಿದ್ದೇನೆಂ"ದು ಹೇಳಿದ.

"ಸರಿ" ಎಂದು ವಿಜಯುಳು ಪರದೆಯನ್ನು ತೆರೆದು ಒಳಗೆ ಬಂದಳು. ನರೇಂದ್ರ ತಲೆ ತಗ್ಗಿಸಿಕೊಂಡು ಏನೋ ಯೋಚಿಸುತ್ತಿದ್ದವನು ಎದ್ದುನಿಂತ. ಅವನು ನಿಟ್ಟುಸಿರನ್ನು ತಡೆದದ್ದೂ ವಿಜಯುಳಿಗೆ ತಿಳಿಯದಿರಲಿಲ್ಲ. ಸ್ವಲ್ಪ ಹೊತ್ತು ಸುಮ್ಮನಿದ್ದು ಅವನು ದುಃಖದಿಂದ ಹೇಳಿದ—"ಇದನ್ನು ನಾನು ಜೊತೆಗೆ ಒಯ್ಯುತ್ತೇನೆ. ನಿಮಗೆ ಇವತ್ತು ಬಹಳ ದುಃಖದಿಂದ ಕಳೆಯಿತು. ನೀವು ಯಾರ ಮುಖ ನೋಡಿ ಬೆಳಿಗ್ಗೆ ಎದ್ದಿದ್ದಿರೋ ಏನೋ? ನಿಮಗೆ ನಾನೂ ಅನೇಕ ಕಟು ಮಾತಾಡಿದೆ, ಅವರೂ ಆಡಿದರು."

ವಿಜಯುಳ ಮನಸ್ಸಿನಲ್ಲಿ ಆಗಲೂ ಕೋಪಜ್ವಾಲೆ ಉರಿಯುತ್ತಲೇ ಇತ್ತು. ಮುಖವೆತ್ತುತ್ತಲೇ ಅವಳ ಎರಡು ಕಣ್ಣುಗಳಲ್ಲೂ ಅದು ಕಿಡಿಯಾಯಿತು. ಅವಳು ದೃಢವಾಗಿ ಹೇಳಿದಳು—"ನಿತ್ಯವೂ ಅವರ ಮುಖ ನೋಡಿಯೇ ನನಗೆ ನಿದ್ದೆ ಹರಿಯಲೆಂದು ನಾನು ಬಯಸುತ್ತೇನೆ. ಅವರಾಡಿದ ಮಾತೆಲ್ಲ ನೀವು ಕಿವಿಯಾರೆ ಕೇಳಿದ್ದೀರಿ. ಆದ್ದರಿಂದಲೇ ಹೇಳುತ್ತಿದ್ದೇನೆ. ನಿಮ್ಮ ವಿಚಾರವಾಗಿ ಅವರು ಆಡಿದ ಅಗೌರವದ ಮಾತೆಲ್ಲ ಅಧಿಕಪ್ರಸಂಗವನ್ನು ತೋರಿಸುತ್ತದೆ. ನಾನು ನಾಳೆ ಅವರಿಗೆ ಅದನ್ನು ತೋರಿಸಿಕೊಡುತ್ತೇನೆ."

ಅತಿಥಿಗೆ ಆದ ಅಗೌರವದಿಂದ ಅವಳಿಗೆ ಎಂತಹ ಗಾಸಿಯಾಯಿತೆಂಬುದು ನರೇಂದ್ರನಿಗೆ ತಿಳಿಯಿತು. ಅವನು ಶಾಂತಸ್ವರದಲ್ಲಿ ಹೇಳಿದ—"ಅದರ ಅಗತ್ಯವೇನು? ಈ ಪದಾರ್ಥಗಳ ವಿಷಯ ಅವರಿಗೆ ಗೊತ್ತಿಲ್ಲ. ಆದ್ದರಿಂದ ಅವರಿಗೆ ಸಂದೇಹವಾಗಿದೆ. ಇಲ್ಲದಿದ್ದರೆ ನನ್ನನ್ನು ಅವಮಾನ ಮಾಡಿದ್ದರಿಂದ ಅವರಿಗೇನೂ ಲಾಭವಿಲ್ಲ. ನಿಮಗೂ ಮೊದಲು ಅನೇಕ

ಸಂದೇಹಗಳಿತ್ತು. ಅವೆಲ್ಲ ನನ್ನ ಅಗೌರವಕ್ಕಾಗಿಯೇ? ಅವರು ನಿಮಗೆ ಆತ್ಮೀಯರು, ಶುಭಾಕಾಂಕ್ಷಿಗಳು. ನನಗಾಗಿ ಅವರನ್ನು ದುಃಖಪಡಿಸಬೇಡಿ. ಇನ್ನು ರಾತ್ರಿಯಾಯಿತು, ನಾನು ಹೊರಡುತ್ತೇನೆ."

"ನಾಳೆ ಅಥವಾ ನಾಡಿದ್ದು ಒಮ್ಮೆ ಬರುತ್ತೀರಾ?"

"ನಾಳೆ—ನಾಡಿದ್ದೇ? ಇನ್ನು ನನಗೆ ಪುರುಸೊತ್ತು ಸಿಕುವುದಿಲ್ಲ. ನಾಳೆ ನಾನು ಹೊರಡುತ್ತೇನೆ. ನಾಳೆ ಬರ್ಮಾಕ್ಕೆ ಹೋಗಲು ಸಾಧ್ಯವಾಗದಿದ್ದರೂ, ಕಲಿಕತ್ತೆಗೆ ಹೋಗಿ ಅಲ್ಲಿ ಕೆಲವು ದಿನ ಇರಬೇಕಾಗಿದೆ. ಮತ್ತೆ ಭೇಟಿಯಾಗುವ........"

ವಿಜಯಳ ಕಣ್ಣುಗಳಲ್ಲಿ ನೀರು ಹನಿಯಿತು. ಅವಳಿಗೆ ಮುಖವೆತ್ತಲಾಗಲಿಲ್ಲ. ಅವಳ ಬಾಯಿಂದ ಮಾತು ಹೊರಡಲಿಲ್ಲ. ನರೇಂದ್ರ ತಸು ನಕ್ಕು ಹೇಳಿದ—"ನೀವೆಷ್ಟು ನಗಿಸುತ್ತೀರಿ? ಇಷ್ಟು ಸಣ್ಣ ವಿಷಯಕ್ಕೆ ನೀವೇ ಇಷ್ಟು ಸಿಟ್ಟಾದರಲ್ಲ? ನಾನೇ ರೇಗಿ ನಿಮ್ಮನ್ನು ಮಂದ ಬುದ್ಧಿಯವರು ಎಂದು ಮುಂತಾಗಿ ಎಷ್ಟೋ ಮಾತುಗಳನ್ನು ಬೈದಿದ್ದೇನೆ. ಆದರೆ ಅದಾವುದಕ್ಕೂ ಸಿಟ್ಟಾಗದೆ, ತುಟಿ ಕಚ್ಚಿ ನಗುತ್ತಿದ್ದಿರಿ. ಅದರಿಂದ ನನಗೆ ಸಿಟ್ಟು ಇನ್ನೂ ಹೆಚ್ಚು ಬಂದಿತ್ತು. ನೀವು ಯಾವಾಗಲೂ ಜ್ಞಾಪಕಕ್ಕೆ ಬರುತ್ತಿರುತ್ತೀರಿ. ನೀವೊಳ್ಳೇ ಚೆನ್ನಾಗಿ ನಗಿಸುತ್ತೀರಿ."

ಗಾಳಿ ಬೀಸಿ ಮರದ ಎಲೆಗಳಿಂದ ಮಳೆಯ ಹನಿಯುದುರುವಂತೆ ಈ ಕೊನೆಯ ಮಾತಿನಿಂದ ಅವಳ ಕಣ್ಣಿನಿಂದ ನೀರು ಉದುರಿತು. ಕೈಯಿಂದ ಒರೆಸಿಕೊಂಡರೆ ನರೇಂದ್ರನ ಕಣ್ಣಿಗೆಲ್ಲಿ ಬೀಳುತ್ತೋ ಎಂಬ ಭಯದಿಂದ ಅವಳು ಸುಮ್ಮನೆ ತಲೆ ತಗ್ಗಿಸಿಕೊಂಡು ನಿಂತಿದ್ದಳು.

ನರೇಂದ್ರ ಹೇಳಿದ—"ಇದನ್ನು ಕೊಳ್ಳಲಿಕ್ಕಾಗಲಿಲ್ಲ, ಆದ್ದರಿಂದ ನಿಮಗೆ ಬಹಳ ದುಃಖವಾಗಿರಬೇಕು" ಎಂದು ಅವನು ವ್ಯವಹಾರಕ್ಕೆ ವಿರುದ್ಧವಾದ ಪ್ರಸಂಗವನ್ನು ತಂದಿಟ್ಟ. ಅಕಸ್ಮಾತ್ ಅವನು ಅವಳ ಮುಖವನ್ನು ಹಿಡಿದೆತ್ತಿ ಆಶ್ಚರ್ಯದಿಂದ ಕೇಳಿದ—"ಇದೇನು? ನೀವು ಅಳುತ್ತೀರಾ?"

ಮಿಂಚಿನಂತೆ ವಿಜಯಳು ಎರಡು ಹೆಜ್ಜೆ ಹಿಂದೆ ಸರಿದು ಕಣ್ಣೊರಿಸಿಕೊಂಡಳು. ನರೇಂದ್ರನಿಗೆ ಒಂದೂ ತೋಚದೆ "ಏನಾಯಿತು?" ಎಂದು ಕೇಳಿದ.

ಇವೆಲ್ಲ ಅವನ ಬುದ್ಧಿಗೆ ನಿಲುಕದ ವಿಷಯ. ಅವನಿಗೆ ಜೀವಾಣು ಗಳ ವಿಷಯ ತಿಳಿದಿತ್ತು. ಅವುಗಳ ಹೆಸರು, ಕುಲ, ಎಲ್ಲ ಗೊತ್ತಿತ್ತು. ಅವುಗಳ ರೂಪ ವೇಷಗಳ ಪರಿಚಯ ಚೆನ್ನಾಗಿತ್ತು. ಅವುಗಳ ಕೆಲಸ ಕಾರ್ಯ ಗಳ ವಿಷಯದಲ್ಲಿ ಅವನು ಎಳ್ಳಷ್ಟು ತಪ್ಪು ತಿಳಿದಿರಲಿಲ್ಲ. ಆದರೆ ಇದೇನು? ಮಂಕು ಬುದ್ಧಿಯವಳಿಂದು ಬೈದರೆ ನಗುವುದು, ಭಕ್ತಿಯಿಂದ ಹೊಗಳಿದರೆ ಅಳುವುದು....ಇಂತಹ ವಿಚಿತ್ರ ವ್ಯಕ್ತಿಯೊಡನೆ ವಿಜ್ಞಾನಿಯ ನಡವಳಿಕೆಗಳು ಹೇಗೆ ನಡೆಯಬೇಕು? ಅವನು ಸ್ವಲ್ಪಹೊತ್ತು ಸ್ತಬ್ಧನಾಗಿ ನಿಂತಿದ್ದ. ಆಮೇಲೆ ಅವನು ತನ್ನ ಪೆಟ್ಟಿಗೆಯನ್ನು ಕೈಯಲ್ಲಿ ತೆಗೆದುಕೊಳ್ಳುವಷ್ಟರಲ್ಲಿ ವಿಜಯಳು ಭಾರವಾದ ದನಿಯಿಂದ ಹೇಳಿದಳು—“ಅದು ನನ್ನದು. ನೀವು ಅದನ್ನು ಇಟ್ಟುಬಿಡಿ” ಎಂದು ಅಳುವನ್ನು ಹೆಚ್ಚಾಗಿ ತಡೆಯಲಾಗದ್ದರಿಂದ ಜಾಗತ್ರೆಯಾಗಿ ಕೋಣೆಯಿಂದ ಹೊರಗೆ ಹೊರಟುಹೋದಳು.

ಅದನ್ನು ಕೆಳಗಿಟ್ಟುಬಿಟ್ಟು ನರೇಂದ್ರ ಏನೂ ತೋಚದೆ ಸುಮ್ಮನೆ ನಿಂತುಬಿಟ್ಟ. ಆಮೇಲೆ ಹೊರಗೆ ಬಂದು ನೋಡಿದ. ಅಲ್ಲಿ ಯಾರೂ ಇರಲಿಲ್ಲ. ಇನ್ನೂ ಸ್ವಲ್ಪಹೊತ್ತು ನೋಡುತ್ತಿದ್ದು ಅವನು ಬರಿಗೈಯಲ್ಲೇ ಕತ್ತಲಿನಲ್ಲಿ ಹೊರಟುಹೋದ.

ವಿಜಯಳು ಬಂದು ನೋಡಿದಳು. ಪೆಟ್ಟಿಗೆ ಇತ್ತು. ಆದರೆ ನರೇಂದ್ರ ಹೊರಟುಹೋಗಿದ್ದ. ಅವಳು ದುಡ್ಡು ತರಲು ತನ್ನ ಕೋಣೆಗೆ ಹೋಗಿ ದ್ದಳು. ಆದರೆ ಹಾಸಿಗೆಯಲ್ಲಿ ಮುಖ ಮುಚ್ಚಿಕೊಂಡು ಅಳುವನ್ನು ಮುಗಿ ಸಲು ಎಷ್ಟುಹೊತ್ತು ಹಿಡಿಯಿತೆಂಬುದೇ ಅವಳಿಗೆ ತಿಳಿಯಲಿಲ್ಲ. ಅವಳು ಕೂಗಿದ್ದಕ್ಕೆ ಕಾಲೀಪದ ಹೊರಗೆ ಬಂದ. ಅವನನ್ನು ಕೇಳಿದ್ದಕ್ಕೆ ಅವನು ತನ್ನ ಕೆಲಸಗಳದೊಂದು ಪಟ್ಟಿಯನ್ನೇ ಕೊಟ್ಟು “ನಾನು ಒಳಗಿದ್ದೆ ಬಾಬುಗಳು ಯಾವಾಗ ಹೋದರೋ ತಿಳಿಯದು” ಎಂದು ಹೇಳಿದ. “ನಾನು ಅಡಿಗೆಮಾಡುತ್ತಿದ್ದೆ, ಬಾಬುಗಳು ಯಾವಾಗ ಹೋದರೋ ತಿಳಿ ಯಲಿಲ್ಲ”ವೆಂದು ಮುದಿ ಕನ್ನಯ್ಯಸಿಂಹ ಹೇಳಿದ.

೧೩

ವಿಲಾಸಬಿಹಾರಿಯ ಪ್ರಚಂಡ ಕೀರ್ತಿ—ಹಳ್ಳಿಯಲ್ಲಿ ಬ್ರಹ್ಮಮಂದಿರ ಸ್ಥಾಪನೆಯ ಶುಭದಿವಸ ಸಮೀಪಿಸಿತು. ಅತಿಥಿಗಳು ಒಬ್ಬೊಬ್ಬರಾಗಿ ಬರಲು ಷುರು ಮಾಡಿದರು. ಕಲಿಕತ್ತೆಯಿಂದ ಮಾತ್ರವಲ್ಲದೆ ಸುತ್ತುಮುತ್ತ

ಲಿಂದಲೂ ಕೆಲವರು ಕುಟುಂಬ ಸಮೇತರಾಗಿ ಬಂದಿದ್ದರು. ಮರುದಿನವೇ ಸ್ಥಾಪನೆಯ ಸಮಾರಂಭ. ಇಂದು ಸಂಜೆಗೆ ರಾಸಬಿಹಾರಿ ತನ್ನ ಮನೆಯಲ್ಲಿ ಒಂದು ಸತ್ಕಾರಕೂಟವನ್ನೇರ್ಪಡಿಸಿದ್ದ.

ಪ್ರಪಂಚದಲ್ಲಿ ಸ್ವಾರ್ಥ-ಹಾನಿಯ ಆಶಂಕೆ ಜನರನ್ನು ಎಷ್ಟು ಕುಶಾಗ್ರ ಬುದ್ಧಿಯವರನ್ನಾಗಿ ಮಾಡುತ್ತೆಂಬುದು ಈ ಪ್ರೀತಿ-ಭೋಜನದ ಘಟನೆಯಿಂದ ತಿಳಿಯುತ್ತದೆ.

ಭೋಜನಕ್ಕೆ ದಯಮಾಡಿಸಿದ್ದ ಮಾನ್ಯ ಅತಿಥಿಗಳ ಮಧ್ಯದಲ್ಲಿ ರಾಸಬಿಹಾರಿ ತನ್ನ ನರೆತಗಡ್ಡದಮೇಲೆ ಕೈಯಾಡಿಸುತ್ತ, ಅರ್ಧ ಮುಚ್ಚಿದ ಕಣ್ಣಿನಿಂದ ತನ್ನ ಬಾಲ್ಯ ಸ್ನೇಹಿತ....ಪರಲೋಕವಾಸಿಯಾದ ವನಮಾಲಿಯನ್ನು ನೆನೆಯುತ್ತಾ ಗಂಭೀರನಾಗಿ ಹೇಳಿದ—"ಭಗವಂತ ಅವನನ್ನು ಅಕಾಲದಲ್ಲಿ ಕರೆದುಕೊಂಡ. ಭಗವಂತನ ಇಚ್ಛೆಗೆ ವಿರುದ್ಧವಾಗಿ ನಮ್ಮದೇನೂ ದೂರಿಲ್ಲ. ಆದರೆ ಹೊರಗಿನ ವಿಚಾರ ನೋಡಿದರೆ, ಅವನು ನನ್ನನ್ನಿಂತಹ ಸ್ಥಿತಿಯಲ್ಲಿ ಬಿಟ್ಟುಹೋದನೆಂಬುದು ನಿಮಗೆ ಅರ್ಥವಾಗುವುದಿಲ್ಲ. ನಮ್ಮಿಬ್ಬರ ಭೇಟಿಯ ಕಾಲ ಸಮೀಪಿಸುತ್ತಿದೆಯಾದರೂ....ಹಾಗೆಂದು ನನಗೆ ಅನಿಸಹತ್ತಿದೆ....ಆ ಶುಭ ದಿನ ಇನ್ನೂ ಹತ್ತಿರ ಬರಲೆಂದು ನಾನು ಯಾವಾಗಲೂ ಆ ಅದ್ವಿತೀಯ-ನಿರಾಕಾರ-ಬ್ರಹ್ಮನ ಶ್ರೀಚರಣದಲ್ಲಿ ಪ್ರಾರ್ಥನೆಮಾಡುತ್ತಿದ್ದೇನೆ" ಎಂದು ಅವನು ತನ್ನ ಹೊದೆಯುವ ವಸ್ತ್ರದಂಚಿನಿಂದ ಕಣ್ಣೊರೆಸಿಕೊಂಡ. ಆಮೇಲೆ ಸ್ವಲ್ಪಹೊತ್ತಿನವರೆಗೂ ಅವನು ಆತ್ಮ-ಸಮಾಧಿ-ಮಗ್ನನಾಗಿ ಮೌನವಾಗಿದ್ದು ಪ್ರಸನ್ನನಾದ. ತಮ್ಮ ಬಾಲ್ಯದ ಆಟಪಾಟಗಳ, ಹುಡುಗತನದ ಓದುಬರೆಹದ, ಯೌವನದ, ಸತ್ಯಧರ್ಮದೀಕ್ಷೆಯ ಇತಿಹಾಸವನ್ನೆಲ್ಲಾ ವಿವರಿಸಿ ಅವನು ಹೇಳಿದ—"ಆದರೆ ವನಮಾಲಿಯ ಕೋಮಲ ಹೃದಯಕ್ಕೆ ಹಳ್ಳಿಗರ ಅತ್ಯಾಚಾರ ಸಹನೆಯಾಗಲಿಲ್ಲ. ಆದ್ದರಿಂದ ಅವನು ಕಲಿಕತ್ತೆಗೆ ಹೊರಟುಹೋದ. ಆದರೆ ನಾನು ಮಾತ್ರ ಕಷ್ಟಪರಂಪರೆಗಳನ್ನೆಲ್ಲ ಸಹಿಸಿ ಈ ಹಳ್ಳಿಯಲ್ಲೇ ಇರಬೇಕೆಂದು ಪಣತೊಟ್ಟೆ. ಅಬ್ಬ! ಅದೆಂತಹ ಭಯಾನಕ ಸನ್ನಿವೇಶ! ಆದರೂ ಸತ್ಯಕ್ಕೇ ಜಯವಾಗುತ್ತೆಂದು ನಾನು ನಿಶ್ಚಯಿಸಿದೆ. ಇವನ ದಯೆಯಿಂದ ಒಂದು ದಿನ ಜಯಶಾಲಿಯಾಗಿಯೇ ತೀರುತ್ತೇನೆ. ಇಂದು ಆ ಶುಭ ದಿನ ನಮ್ಮ ಮುಂದಿದೆ. ಆದ್ದರಿಂದಲೇ ಇಲ್ಲಿ ಇಂದು ನಿಮ್ಮೆಲ್ಲರ ಪಾದಧೂಳಿ ಬಿದ್ದಿದೆ. ಇಂದು ವನಮಾಲಿ ನಮ್ಮ ಮಧ್ಯ

ದಲ್ಲಿಲ್ಲ. ಅವನು ಎರಡು ದಿನ ಮುಂಚಿತವಾಗಿಯೇ ಹೊರಟುಹೋಗಿದ್ದಾನೆ. ಆದರೂ ನನಗೆ ಅವನು ಮೇಲೆ ನಿಂತು ನಮ್ಮನ್ನು ನೋಡಿ ಮೃದುವಾಗಿ ನಗುತ್ತಿರುವುದು ಚೆನ್ನಾಗಿ ಕಾಣಿಸುತ್ತಿದೆ" ಎಂದು ಅವನು ಮತ್ತೆ ಕಣ್ಣು ಮುಚ್ಚಿ ಸ್ಥಿರವಾಗಿ ಕುಳಿತ.

ಅಲ್ಲಿ ಸೇರಿದ್ದವರ ಮನಸ್ಸೆಲ್ಲ ಉತ್ತೇಜಿತವಾಯಿತು. ವಿಜಯಳ ಕಣ್ಣು ತೇವವಾಯಿತು. ರಾಸಬಿಹಾರಿ ಕಣ್ಣೊರಸಿಕೊಂಡು ಕೂಡಲೆ ತನ್ನ ಬಲಗೈಯಿಂದ ತೋರಿಸಿ ಹೇಳಿದ—"ಇವಳು ವನಮಾಲಿಯ ಏಕಮಾತ್ರ ಪುತ್ರಿ....ವಿಜಯ. ತಂದೆಯ ಎಲ್ಲ ಗುಣಗಳನ್ನೂ ಪಡೆದಿರುವುದಲ್ಲದೆ, ಇವಳು ಕರ್ತವ್ಯಪಾಲನೆಯಲ್ಲಿ ಅತಿ ನಿಷ್ಠುರಳು, ಸತ್ಯ ಹೇಳುವುದರಲ್ಲಿ ಅತಿ ನಿರ್ಭೀತಳು. ಇವನು ನನ್ನ ಮಗ ವಿಲಾಸಬಿಹಾರಿ. ಅಷ್ಟೇ ದೃಢಚಿತ್ತ ಮತ್ತು ಸ್ಥೈರ್ಯವಂತ. ಇವರಿಬ್ಬರೂ ಹೊರಗಿನಿಂದ ಇದುವರೆಗೂ ಬೇರೆ ಯಾಗಿದ್ದರೂ, ಆದರೂ ಒಳಗೆ .......ಹೌದು. ಇನ್ನೊಮ್ಮೆ ನಿಮ್ಮ ಪಾದ ಧೂಳಿಯಿಂದ ಈ ಸಮ್ಮಿಲಿತ ನವಜೀವನ ಧನ್ಯವಾಗುವ ಮಂಗಳದಿನವೂ ಸಮಾಪಿಸುತ್ತಿದೆ."

ಒಂದು ಅಸ್ಪಷ್ಟ ಮಧುರ ಕೋಲಾಹಲ ಸಭಿಕರಲ್ಲಿ ಮೂಡಿತು. ವಿಜಯಳ ಹತ್ತಿರ ಕುಳಿತಿದ್ದ ಹೆಂಗಸೊಬ್ಬಳು ವಿಜಯಳ ಕೈಯನ್ನೊತ್ತಿದಳು. ರಾಸಬಿಹಾರಿ ಒಂದು ದೀರ್ಘ ನಿಟ್ಟುಸಿರನ್ನು ಬಿಟ್ಟು ಹೇಳಿದ—"ಇವಳು ಅವನ ಏಕಮಾತ್ರ ಸಂತಾನ. ಈ ಶುಭ ಪ್ರಸಂಗವನ್ನು ನೋಡುವ ಅಭಿಲಾಷೆ ಅವನಿಗೆ ಹೆಚ್ಚಾಗಿತ್ತು. ಆದರೆ ಆ ತಪ್ಪೆಲ್ಲ ನನ್ನದು. ಇದನ್ನು ಮುಕ್ತ ಕಂಠನಾಗಿ ಇಂದು ನಿಮ್ಮೆಲ್ಲರ ಮುಂದೆ ಒಪ್ಪಿಕೊಳ್ಳುತ್ತಿದ್ದೇನೆ. ಇದಕ್ಕೆಲ್ಲ ನಾನೊಬ್ಬನೇ ಹೊಣೆ. ಮಾನವ ಜೀವನ ಕಮಲದ ಎಲೆಯ ಮೇಲೆ ನೀರಿನ ಗುಳ್ಳೆಯಿದ್ದಂತೆ. ನಾವು ಬಾಯಿಂದ ಮಾತ್ರ ಈ ಮಾತಾಡುತ್ತೇವೆ ಆದರೆ ಕಾರ್ಯರೂಪಕ್ಕೆ ತರುವುದಿಲ್ಲ. ಜೀವನ ಇಷ್ಟು ಬೇಗ ಆಗಿಹೋಗುತ್ತೆಂಬುದರ ಅರಿವೂ ನನಗೆ ಆಗಿರಲಿಲ್ಲ."

ಇಷ್ಟು ಹೇಳಿ ಅವನು ಒಂದು ಕ್ಷಣ ಸುಮ್ಮನಾದ. ಅವನ ಅನುತಾಪದಿಂದ ಹೃದಯದಲ್ಲಡಗಿದ್ದ ದುಃಖ ಆ ದೀಪದ ಬೆಳಕಿನಲ್ಲಿ ಮುಖದಿಂದ ಹೊರಸೂಸಿತು. ಅವನು ಒಂದು ನಿಟ್ಟುಸಿರನ್ನು ಬಿಟ್ಟು ಶಾಂತ–ಗಂಭೀರ ಸ್ವರದಲ್ಲಿ ಹೇಳಿದ—"ಆದರೆ ಈಗ ನನಗೆ ಅರಿವಾಗಿದೆ. ಆದ್ದರಿಂದ ಈ

ನನ್ನ ದೇಹವನ್ನು ನೋಡಿಕೊಂಡರೆ ಈ ಫಾಲ್ಗುಣಕ್ಕಿಂತ ಹೆಚ್ಚು ತಡಮಾ ಡಲು ಧೈರ್ಯವಿಲ್ಲ. ನಾನೂ ಕಣ್ಣಿಂದ ನೋಡದೆ ಹೋಗುತ್ತೇನೋ ಏನೋ? ಯಾರು ಬಲ್ಲರು?"

ಮತ್ತೊಂದು ಅವ್ಯಕ್ತ ಹರ್ಷಧ್ವನಿ ಹೊರಸೂಸಿತು. ರಾಸಬಿಹಾರಿ ತನ್ನ ಎಡಬಲಗಳ ಕಡೆ ನೋಡಿ ವಿಜಯಳನ್ನು ಸೂಚಿಸಿ ಹೇಳಿದ—"ವನ ಮಾಲಿ ತನ್ನ ಸರ್ವಸ್ವದ ಜೊತೆಗೆ ತನ್ನ ಮಗಳನ್ನೂ ನನ್ನ ಕೈಯಲ್ಲಿ ಒಪ್ಪಿಸಿ ದುದಕ್ಕೆ ಸರಿಯಾಗಿ ನಾನೂ ಧರ್ಮದ ದೃಷ್ಟಿಯಿಂದ ನನ್ನ ಕರ್ತವ್ಯವನ್ನು ಪೂರ್ಣಮಾಡುತ್ತೇನೆ. ಇವರಿಬ್ಬರೂ ಅದೇ ರೀತಿ ನಿಮ್ಮ ಆಶೀರ್ವಾದ ಪಡೆದು ಸತ್ಯವನ್ನವಲಂಬಿಸಿ ತಮ್ಮ ಕರ್ತವ್ಯಪಾಲನೆಯನ್ನು ಮಾಡಲಿ. ಇವಳ ತಂದೆಯು ಸ್ವರ್ಗವಾಸಿಯಾದ ಸ್ಥಳದಲ್ಲೇ ಇವರಿಬ್ಬರೂ ದೀಕ್ಷೆ ಯಿಂದ ಸತ್ಯ ಸ್ಥಾಪನೆ ಮಾಡಲೆಂಬುದೇ ನನ್ನ ಏಕಮಾತ್ರ ಪ್ರಾರ್ಥನೆ."

ವೃದ್ಧ ದಯಾಲಚಂದ್ರಧಾಡಾರವರು ಆಶೀರ್ವಾದ ಮಾಡಿದರು.

ಆಗ ರಾಸಬಿಹಾರಿಯು ವಿಜಯಳನ್ನು ಕೂಗಿ ಹೇಳಿದ—"ಮಗು, ನಿನ್ನ ತಂದೆಯೂ ಇಲ್ಲ. ಸತೀ–ಸಾಧ್ವೀ ತಾಯಿಯೂ ಬಹಳ ಪೂರ್ವ ದಲ್ಲೇ ಸ್ವರ್ಗವಾಸಿಯಾದಳು. ಇಲ್ಲದಿದ್ದರೆ ನಾನಿಂದು ನಿನ್ನನ್ನು ಕುರಿತು ಈ ಮಾತನ್ನು ಕೇಳುವ ಅಗತ್ಯವಿರಲಿಲ್ಲ. ಸಂಕೋಚಪಡಬೇಡ ಮಗು ಹೇಳು—"ಈ ಮಾನ್ಯ ಅತಿಥಿಗಳನ್ನು ಮುಂದಿನ ಫಾಲ್ಗುಣಕ್ಕೆ ಇಲ್ಲಿಗೆ ಇನ್ನೊಮ್ಮೆ ಆಹ್ವಾನ ಕೊಡಲೇ?"

ವಿಜಯಳು ಏನು ಹೇಳಿಯಾಳು? ಬೇಸರದಿಂದ ಕ್ಷೋಭದಿಂದ ಮತ್ತು ಭಯದಿಂದ ಅವಳ ಕಂಠ ಬಿಗಿಯಿತು. ಅವಳು ತಲೆ ತಗ್ಗಿಸಿ ಸುಮ್ಮನೆ ಕುಳಿತಿದ್ದಳು. ರಾಸಬಿಹಾರಿ ಒಂದುಕ್ಷಣ ನಿರೀಕ್ಷಣೆ ಮಾಡಿ ಮೃದುವಾಗಿ ನಕ್ಕು ಹೇಳಿದ—"ಆಯುಷ್ಮತಿಯಾಗು ಮಗು, ನೀನಿನ್ನೇನೂ ಹೇಳುವ ಅಗತ್ಯವಿಲ್ಲ. ನಮಗೆಲ್ಲ ಅರ್ಥವಾಗಿದೆ."

ಆಮೇಲೆ ಅವನು ನಿಂತು ಹೇಳಿದ—"ನಾನು ಮುಂದಿನ ಫಾಲ್ಗುಣ ದಲ್ಲೇ ತಮ್ಮೆಲ್ಲರ ಪಾದಧೂಳಿ ಇಲ್ಲಿ ಬೀಳಬೇಕೆಂದು ಪ್ರಾರ್ಥಿಸುತ್ತೇ."

ಎಲ್ಲರೂ ತಮ್ಮ ಸಮ್ಮತಿಯನ್ನು ಕೊಟ್ಟರು. ವಿಜಯಳಿಗೆ ಇನ್ನು ಸಹಿ ಲಾಗದೆ ಅವ್ಯಕ್ತ ಸ್ವರದಲ್ಲಿ ಹೇಳಿದಳು—"ತಂದೆಯವರು ತೀರಿಕೊಂಡ

ಒಂದು ವರ್ಷದಲ್ಲೇ........" ಅಷ್ಟರಲ್ಲೇ ಕಂಠ ಬಿಗಿದು ಬಂದಿದ್ದರಿಂದ ಅವಳು ಮಾತನ್ನು ಮುಂದುವರಿಸದಾದಳು.

ರಾಸಬಿಹಾರಿ ತಕ್ಷಣವೇ ಇದನ್ನು ತಿಳಿದು ಅನುತಾಪದಿಂದ ಹೇಳಿದ —" ಸರಿಯೇ ಮಗು. ನೀನು ಹೇಳಿದ್ದು ಸರಿ. ನನಗಿದರ ನೆನಪೇ ಇರಲಿಲ್ಲ. ನೀನು ನನಗೆ ತಾಯಿಯಿದ್ದಂತೆ ಮಗು. ಆದ್ದರಿಂದಲೇ ನೀನು ನಿನ್ನ ಈ ವೃದ್ಧ ಮಗನ ತಪ್ಪನ್ನು ಕಂಡುಹಿಡಿದೆ. "

ವಿಜಯಳು ಸುಮ್ಮನೆ ಸೆರಗಿನಿಂದ ಕಣ್ಣೊರೆಸಿಕೊಂಡಳು. ರಾಸಬಿಹಾರಿ ಇದನ್ನು ನೋಡಿ ನಿಟ್ಟುಸಿರೊಂದನ್ನು ಬಿಟ್ಟು ಆರ್ದ್ರಸ್ವರದಲ್ಲಿ ಹೇಳಿದ—" ಎಲ್ಲ ಅವನ ಇಚ್ಛೆ" ಎಂದು ಸ್ವಲ್ಪ ತಡೆದು ಹೇಳಿದ— " ಹಾಗೇ ಆಗಲಿ. ಆದರೆ ಅದಕ್ಕೂ ಏನೂ ತಡವಿಲ್ಲವಲ್ಲ. "

ಎಲ್ಲರ ಕಡೆಗೂ ತಿರುಗಿ ಅವನು ಹೇಳಿದ—" ಸರಿ. ಮುಂದಿನ ವೈಶಾಖದಲ್ಲೇ ಈ ಶುಭಕಾರ್ಯ ನೆರವೇರಲಿ. ಇದೇ ಕೊನೆಯ ಮಾತು. ವಿಲಾಸಬಿಹಾರಿ, ಮಗು, ರಾತ್ರಿಯಾಗುತ್ತಿದೆ. ನಾಳೆ ಬೆಳಗಿನಿಂದ ಕೆಲಸ ವಿಪರೀತವಾಗಿರುತ್ತೆ....ನಮ್ಮ ಭೋಜನದ ವ್ಯವಸ್ಥೆ....ಉಹುಂ, ಆಳುಕಾಳುಗಳಮೇಲೆ ಬಿಡುವುದು ಸರಿಯಲ್ಲ....ನೀನು....ಏಳು ನಾನೂ ಬರುತ್ತೇನೆ. ಹಾಗಾದರೆ ನಿಮ್ಮ ಅಪ್ಪಣೆಯಾದರೆ ನಾನು ಸ್ವಲ್ಪ...." ಎನ್ನುತ್ತಾ ಅವನು ಮಗನೊಂದಿಗೆ ಒಳಗೆ ಎದ್ದು ಹೋದ.

ಸಮಯಕ್ಕೆ ಸರಿಯಾಗಿ ಭೋಜನ ನೆರವೇರಿತು. ವ್ಯವಸ್ಥೆ ಚೆನ್ನಾಗಿತ್ತು. ಆದ್ದರಿಂದ ಯಾವುದರಲ್ಲೂ ಯಾವ ಲೋಪವೂ ಬರಲಿಲ್ಲ. ರಾತ್ರಿ ಹನ್ನೆರಡರ ಸಮಯ. ಒಂದು ಕಂಬದ ಮರೆಯಲ್ಲಿ ನಿಂತು ವಿಜಯಳು ಪಲ್ಲಕ್ಕಿಗಾಗಿ ಕಾಯುತ್ತಿದ್ದಳು. ಇದ್ದಕ್ಕಿದ್ದಂತೆ ಅವಳನ್ನಲ್ಲಿ ನೋಡಿ ರಾಸಬಿಹಾರಿ ಚಕಿತನಾಗಿ ಹೇಳಿದ—"ಇಲ್ಲಿ ಒಬ್ಬಳೇ ಏಕೆ ನಿಂತಿದ್ದೀ ಮಗು ? ನಡೆ, ಒಳಗೆ ಹೋಗು."

" ಉಹುಂ, ಕಕ್ಕ ನಾನು ಬೇಕೆಂದು ನಿಂತಿದ್ದೇನೆ. "

" ಶೀತವಾಗುತ್ತಲ್ಲಮ್ಮ. "

" ಉಹುಂ, ಏನೂ ಆಗುವುದಿಲ್ಲ. "

ರಾಸಬಿಹಾರಿ ಇನ್ನೂ ಹತ್ತಿರದಲ್ಲಿ ನಿಂತುಕೊಂಡು ಗೃಹ....ಲಕ್ಷ್ಮೀ

ಎಂದು ಮುಂತಾಗಿ ಏನೇನೋ ಆಶೀರ್ವಾದ ಮಾಡಿದ. ವಿಜಯಳು ಕಲ್ಲಿನ ಪ್ರತಿಮೆಯಂತೆ ನಿಂತು ಸ್ನೇಹದ ನಾಟಕವನ್ನು ಸಹಿಸುತ್ತಿದ್ದಳು.

ಅವನಿಗೆ ಏನೋ ನೆನಪಾದಂತಾಗಿ ಹೇಳಿದ—"ನಿನಗೆ ಒಂದು ಮಾತು ಹೇಳುವುದನ್ನು ಮರೆತೇಬಿಟ್ಟೆ. ನಾನು ಆ ಸೂಕ್ಷ್ಮದರ್ಶಿನಿಯ ದುಡ್ಡು ಕೊಟ್ಟುಬಿಟ್ಟೆ."

ನರೇಂದ್ರ ಅದನ್ನು ಅಲ್ಲಿಟ್ಟು ಹೋಗಿ ಎಂಟು-ಹತ್ತು ದಿನಗಳಾಗಿದ್ದರೂ ಇಕಡೆ ಬಂದಿರಲಿಲ್ಲ. ವಿಜಯಳು ಈ ಕೆಲವು ದಿವಸಗಳನ್ನು ಹೇಗೆ ಕಳೆದ ಳೆಂಬುದು ಅವಳಿಗೇ ಗೊತ್ತು. ಅವನತ್ತೆಮನೆ ಎಷ್ಟು ದೂರವೆಂಬುದು ಅವಳಿಗೆ ಗೊತ್ತಿದ್ದರೂ, ಅದು ಎಲ್ಲಿದೆ? ಅದಕ್ಕೆ ದಾರಿ ಯಾವುದೆಂಬು ದೊಂದೂ ಗೊತ್ತಿರಲಿಲ್ಲ. ಅದನ್ನವಳು ಕೇಳಿ ತಿಳಿದುಕೊಂಡಿರಲಿಲ್ಲ. ತನ್ನ ಈ ತಪ್ಪಿಗಾಗಿ ಅವಳು ಎಷ್ಟೋಸಲ ಪಶ್ಚಾತ್ತಾಪ ಪಡುತ್ತಿದ್ದಳು. ಆದರೆ ಇದಕ್ಕೆ ಅವಳಿಗೆ ಯಾವ ಉಪಾಯವೂ ತೋರಲಿಲ್ಲ. ಆದ್ದರಿಂದ "ಯಾವಾಗ ಕೊಟ್ಟರಿ?" ಎಂದು ಅವಳು ಚಕಿತಳಾಗಿ ಕೇಳಿದಳು.

ರಾಸಬಿಹಾರಿ ತುಸು ಯೋಚಿಸಿ ಹೇಳಿದ—"ಅದರ ಮರುದಿನವೇ ಕೊಟ್ಟರಬೇಕೋ ಏನೋ ಗೊತ್ತಿಲ್ಲ. ಅದನ್ನು ಕೊಂಡುಕೊಳ್ಳುವ ಇಚ್ಛೆ ಯಿಂದ ನೀನದನ್ನು ಇಟ್ಟುಕೊಂಡೆಯೆಂದು ತಿಳಿಯಿತು. ಮಾತು ಕೊಟ್ಟ ಮೇಲೆ ಆಗಿಹೋಯಿತು. ಅದು ಮೋಸವಾಗಲಿ, ಏನಾದರಾಗಲಿ ಹಣಕೊಟ್ಟ ದ್ದಾಯಿತು. ಇದರ ಅಗತ್ಯ ಅವನಿಗೆ ಬಹಳ ಇರಬಹುದು. ಆದ್ದರಿಂದ ಹಣ ಬಂದ ಕೂಡಲೆ ಅವನಿಲ್ಲಿಂದ ಹೊರಟುಹೋಗಿ ಜೀವನಕ್ಕೇನಾದರೂ ವ್ಯವಸ್ಥೆಮಾಡಿಕೊಳ್ಳಬಹುದೆಂದು ಕೊಟ್ಟೆ. ಏನಾದರೂ ಅವನೇನು ಪರ ಕೀಯನಲ್ಲ, ನಮ್ಮಲ್ಲೇ ಸೇರಿದವನು. ನಮ್ಮ ಬಾಲ್ಯ ಸ್ನೇಹಿತನ ಮಗ. ಪಾಪ ಹೊರಟುಹೋಗಲು ಬಹಳ ಚಡಪಡುತ್ತಿರಬಹುದು. ದುಡ್ಡು ಕೊಟ್ಟ ಕೂಡಲೆ ಹೊರಟುಹೋಗುತ್ತಾನೆಂದುಕೊಂಡೆ. ಕೊಡಬೇಕದದ್ದಾದಮೇಲೆ ನೀನು ಕೊಡುವುದಾದರೂ ಏನು? ನಾನು ಕೊಡುವುದಾದರೇನು? ಎಲ್ಲ ಒಂದೇ. ಆದ್ದರಿಂದಲೇ ನಾನಾಗಲೇ ಕೊಟ್ಟುಬಿಟ್ಟೆ. ಅವನ ಧರ್ಮ ಅವ ನಿಗೆ....ಹತ್ತು ರೂಪಾಯಿ ಹೆಚ್ಚು ತೊಗೊಂಡುಹೋದರೆ ಹೋಗಲಿ.

ವಿಜಯಳ ನಾಲಿಗೆ ಒಣಗಿಹೋಯಿತು. ಇನ್ನು ಮಾತಾಡಲು ಬರು

ವುದಿಲ್ಲವೋ ಏನೋ ಎನಿಸಿತು. ಸ್ವಲ್ಪ ಹೊತ್ತಾದ ಮೇಲೆ ಅವಳು ಬಹಳ ಪ್ರಯತ್ನದಿಂದ "ಅವರಿಗೆ ಎಲ್ಲಿ ಹಣ ಕೊಟ್ಟಿರಿ?" ಎಂದು ಕೇಳಿದಳು.

ರಾಸಬಿಹಾರಿ ಅದು ಹೇಗೋ ಅವಳ ಈ ಪ್ರಶ್ನೆಯನ್ನು ವಿರುದ್ಧವಾಗಿ ಅರ್ಥಮಾಡಿಕೊಂಡು ಗಾಬರಿಯಿಂದ ಕೇಳಿದ—"ಉಹುಂ, ಇದೇನು? ಎರಡು ಸಲ ಹಣ ತೆಗೆದುಕೊಂಡನೋ? ಆದರೆ ಅವನ ಮುಖ ನೋಡಿದರೆ ಹಾಗೆ ಕಾಣಲಿಲ್ಲ. ಇನ್ನಾರ ಮೇಲೆ ತಪ್ಪುಹಾಕಬೇಕು. ಹೀಗೆ ಜನರನ್ನು ನಂಬಿ ನಂಬಿ ಮೋಸ ಹೋಗೀ ನನ್ನ ಕೂದಲು ಬೆಳ್ಳಗಾಯಿತು. ಉಂ, ಹೋದರೆ ಹೋಗಲಿ ಇನ್ನೊಂದು ಇನ್ನೂರು ಹೋಯಿತು. ಹಾಗಾದರೆ ಆ ಹಣವನ್ನು ನಾನೇ ಕೊಡುತ್ತೇನೆ ಮಗು. ಯಾವಾಗಲೂ ಹೀಗೆ ಶಿಕ್ಷೆ ಅನುಭವಿಸೀ ನನ್ನ ಮೈ ಜಡ್ಡುಕಟ್ಟಿಹೋಯಿತು. ಇನ್ನು ಸರಿಯಲ್ಲ, ಹೋಗಲಿ ನಾನೇ...."

ವಿಜಯಳಿಗೆ ಇನ್ನು ಹೆಚ್ಚು ಸಹಿಸಲಾಗಲಿಲ್ಲ. ಅವಳು ತೀಕ್ಷ್ಣವಾಗೇ ಹೇಳಿದಳು—"ನೀವೇಕೆ ಸುಮ್ಮನೆ ಹೆದರುತ್ತಿದ್ದೀರಿ ಕಾಕಾಜಿ? ಹೊಟ್ಟೆಗಿಲ್ಲದೆ ಸತ್ತರೂ ಚಿಂತೆಯಿಲ್ಲ. ಅವರು ಎರಡಾವರ್ತಿ ಹಣ ತೆಗೆದುಕೊಳ್ಳುವವರಲ್ಲ. ಅವರೆಲ್ಲಿ ಸಿಕ್ಕಿದ್ದರು? ಯಾವಾಗ ದುಡ್ಡು ಕೊಟ್ಟಿರಿ?"

ರಾಸಬಿಹಾರಿ ಬಹಳ ಸಮಾಧಾನದ ಉಸಿರೊಂದನ್ನು ಬಿಟ್ಟು ಹೇಳಿದ—"ಹೋಗಲಿ, ಸದ್ಯ ಹಣವೇನು ಕಡಿಮೆಯೇ?.... ಇನ್ನೂರು ರೂಪಾಯಿ! ಅವನು ಹೋಗಬೇಕೆಂದು ಆತುರನಾಗಿದ್ದ." ಅಕಸ್ಮಾತ್ ಏನನ್ನೋ ನೋಡಿ ಹೇಳಿದ—"ಯಾರು ನಿಂತಿರುವವರು? ವಿಲಾಸನೇ? ಪಲ್ಲಕ್ಕಿ ಏನಾಯಿತಪ್ಪ? ಇಲ್ಲಿ ಶೀತವಾಗುತ್ತೆ. ನಾನು ನೋಡದಿದ್ದರೆ ಒಂದು ಕೆಲಸವೂ ಆಗುವುದಿಲ್ಲ" ಎಂದು ಅವನು ಬಹಳ ಸಿಟ್ಟಾಗಿ ಆಕಡೆಗಿದ್ದ ಒಂದು ಕಂಬವನ್ನೇ ವಿಲಾಸನೆಂದು ತಿಳಿದು ಇದ್ದಕ್ಕಿದ್ದಂತೆ ಜಾಗ್ರತೆಯಾಗಿ ಅಲ್ಲಿಂದ ಹೊರಟುಹೋದ.

## ೧೪

ವಿಲಾಸನಿಗೆ ಆತ್ಮಸಮರ್ಪಣೆ ಮಾಡುವುದು ಹಿಂದೊಮ್ಮೆ ವಿಜಯಳಿಗೆ ಸುಲಭವಾಗಿತ್ತು. ಆದರೆ ಇಂದು ವಿಲಾಸನೇ ಏಕೆ........ಈ ಎಲ್ಲ ವಿಶ್ವದ ಕೋಟ್ಯಾಂತರ ಜನಗಳಲ್ಲಿ ಒಬ್ಬನ ವಿನಹ ಇತರರನ್ನು ಮುಟ್ಟುವುದನ್ನು ಯೋಚಿಸಿದರೂ ಅವಳಿಗೆ ಒಂದು ದೊಡ್ಡ ಪಾಪವಿದ್ದಂತೆ ಎನಿಸುತ್ತಿತ್ತು.

ಅಲ್ಲದೆ ಇದರಿಂದ ಸಂಕೋಚ ಮತ್ತು ತಿರಸ್ಕಾರ ಹುಟ್ಟುತ್ತಿತ್ತು. ಅವಳು ಪಲ್ಲಕ್ಕಿಯಲ್ಲಿ ಕುಳಿತು ರಾಸಬಿಹಾರಿಯ ಮನೆಯಿಂದ ಬರುವಾಗ ಇದನ್ನೇ ನಾನಾರೀತಿಯಲ್ಲಿ ಯೋಚಿಸುತ್ತಿದ್ದಳು.

ಅವಳ ವಿಷಯದಲ್ಲಿ ಅವಳ ತಂದೆಯ ಅಭಿಪ್ರಾಯವೇನಿತ್ತೆಂಬುದನ್ನು ತಿಳಿಯುವಷ್ಟು ಅವಕಾಶವಿರಲಿಲ್ಲ. ಆದರೆ ಅವನು ತೀರಿಕೊಂಡಮೇಲೆ ತನ್ನ ಭವಿಷ್ಯದಲ್ಲಿ ತಾನು ವಿಲಾಸಬಿಹಾರಿಯೊಂದಿಗೆ ಜೀವನ ಯಾತ್ರೆಯನ್ನು ಸಾಗಿಸಬೇಕೆಂಬುದಂತೂ ನಿರ್ಧರವಾಗಿತ್ತು. ಇದಕ್ಕೆ ಏನಾದರೂ ಅಡ್ಡಿ ಬರಬಹುದೆಂಬ ಯೋಚನೆಯೂ ಅವಳಿಗುಂಟಾಗಿರಲಿಲ್ಲ.

ಈಗ ಒಬ್ಬ ಅನಾಸಕ್ತ ಉದಾಸೀನ ವ್ಯಕ್ತಿ ಯಾವುದೋ ಆಕಾಶದಿಂದ ಇದ್ದಕಿದ್ದಂತೆ ಒಂದು ಧೂಮಕೇತುವಿನಂತೆ ಬಂದು ಎಲ್ಲವನ್ನೂ ತಲೆಕೆಳಗೆ ಮಾಡಿ ತನ್ನ ಜೀವನದ ನಿರ್ದಿಷ್ಟ ಮಾರ್ಗವನ್ನೇ ಅಳಿಸಿಬಿಟ್ಟದ್ದು ನಿಜವೋ ಅಥವಾ ಅದೊಂದು ಸ್ವಪ್ನವೋ ಎಂದು ವಿಜಯಳು ತನ್ನನ್ನೇ ತಡಕಿ ಕೊಳ್ಳುತ್ತಾ ಪ್ರಶ್ನೆಮಾಡಿಕೊಳ್ಳುತ್ತಿದ್ದಳು. ಅದೇನಾದರೂ ಸ್ವಪ್ನವಾದರೆ ಆ ಮೋಹ ಹೋಗುವುದು ಹೇಗೆ? ಅದು ನಿಶ್ಚಯವಾದರೆ ಅದು ಜೀವನ ದಲ್ಲಿ ಸಾರ್ಥಕವಾಗುವುದು ಹೇಗೆ?

ಮನೆಗೆ ಬಂದು ಅವಳು ಮಂಚದ ಮೇಲೆ ಮಲಗಿದಳು. ಆದರೆ ಅವಳ ಹತ್ತಿರವೇ ನಿದ್ದೆಯೆಂಬುದು ಸುಳಿಯಲಿಲ್ಲ. ಅವಳ ಮನಸ್ಸಿನಲ್ಲಿ ಕೆಲವು ದಿನಗಳಿಂದ ಆಗುತ್ತಿದ್ದ ಯೋಚನಾಕ್ರಾಂತಿಯಲ್ಲಿ ಸತ್ಯಾಂಶವೇನಾ ದರೂ ಇದ್ದಿತೇ? ಅಥವಾ ಅದು ಆಕಾಶ ಕುಸುಮದಂತೆ ಬರಿಯ ಭ್ರಾಂತಿಯೇ? ಈ ದಾರುಣ ಸಮಸ್ಯೆಯನ್ನು ಬಗೆಹರಿಸುವವರು ಯಾರು? ಇದೇ ಅವಳಿಗೆ ಯಾವಾಗಲೂ ಆಗುತ್ತಿದ್ದ ಯೋಚನೆ.

ಅವಳಿಗೆ ತಾಯಿಯಿಲ್ಲ. ತಂದೆಯೂ ಪರಲೋಕವಾಸಿ. ಒಡಹುಟ್ಟಿ ದವರಂತೂ ಇರಲೇ ಇಲ್ಲ....ತನ್ನವರೆಂದು ಹೇಳಿಕೊಳ್ಳಲು ರಾಸಬಿಹಾರಿ ಯೊಬನನ್ನು ಬಿಟ್ಟರೆ ಇನ್ನಾರೂ ಇಲ್ಲ. ಅವನೇ ಅವಳಿಗೆ ಬಂಧು, ಮಿತ್ರ ಮತ್ತು ರಕ್ಷಕ. ಈಗ ಅವನು ಯಾವ ಶುಭ ಉದ್ದೇಶಕ್ಕಾಗಿ ಇಷ್ಟು ಬೇಗ ತನ್ನನ್ನು ಕಲಿಕತ್ತೆಯಿಂದ ಇಲ್ಲಿಗೆ ಕರೆದುಕೊಂಡು ಬಂದನೆಂಬುದು ಅವಳಿಗೆ ಸುಸ್ಪಷ್ಟವಾಯಿತು. ಅದರಲ್ಲಿ ಸ್ವಲ್ಪವೂ ಸಂಶಯ ಉಳಿಯಲಿಲ್ಲ. ದೂರ ದೇಶಕ್ಕೆ ಹೋಗಲು, ನರೇಂದ್ರನಿಗೆ ತಾನಾಗಿಯೇ ಸಹಾಯಮಾಡಿದ್ದು,

ತನ್ನ ಮನೆಯಲ್ಲಿ ಏರ್ಪಡಿಸಿದ್ದ ಭೋಜನಸಮಾರಂಭ, ಅಲ್ಲಿ ನೆರೆದಿದ್ದ ಅತಿಥಿಗಳ ಮುಂದೆ ವಿವಾಹದ ಪ್ರಸ್ತಾಪಮಾಡಿದ್ದು, ಅವಳು ನಾಚಿಕೆಯಿಂದ ಮೌನವಾಗಿದ್ದುದಕ್ಕೆ ತನ್ನ ಸಮ್ಮತಿಯಿದೆಯೆಂದು ಅರ್ಥಮಾಡಿ ಅದನ್ನು ಧಾರಾಳವಾಗಿ ಪ್ರಚಾರಮಾಡಿದ್ದು, ಹೀಗೆ ರಾಸಬಿಹಾರಿಯು ತನ್ನನ್ನು ಕಟ್ಟಿಹಾಕಬೇಕೆಂದು ಮಾಡಿದ ಒಂದೊಂದು ಪ್ರಯತ್ನವೂ ಅವಳಿಗೆ ಸ್ಪಷ್ಟವಾಗಿ ಅರ್ಥವಾಯಿತು.

ಆದರೆ ರಾಸಬಿಹಾರಿಯ ಯಾವ ಕೆಲಸದಲ್ಲೂ ಅತ್ಯಾಚಾರ–ಉಪದ್ರವದ ಗುರುತೂ ಇರಲಿಲ್ಲ. ಇದು ಬಹಳ ಗೂಢವಾದ ಸಮಸ್ಯೆಯಾಗಿತ್ತು. ಆದರೂ ಆ ವೃದ್ಧ ಧೂರ್ತ ಸ್ನೇಹ....ಸರಸವಾದ ಶುಭಾಕಾಂಕ್ಷೆಯ ಮರೆಯಲ್ಲಿ ಪ್ರತಿಕ್ಷಣವೂ ದುರ್ಲಂಘ್ಯವಾದ ಘೋರಶಾಸನವನ್ನು ತನ್ನ ಮೇಲೆ ಮಾಡುತ್ತಿದ್ದುದು ಅವಳಿಗೆ ಸ್ಪಷ್ಟವಾಯಿತು. ಅದರೊಂದಿಗೇ ತನ್ನ ಕೇವಲ ನಿಸ್ಸಹಾಯತೆಯ ಚಿತ್ರವೂ ಒಡಮೂಡಿ ಆ ಏಕಾಂತದಲ್ಲೂ ಅವಳದಕ್ಕಾಗಿ ನಡುಗಿದಳು. ರಾತ್ರಿಯೆಲ್ಲ ಒಂದು ಕ್ಷಣವೂ ಅವಳು ನಿದ್ದೆಮಾಡಲಿಲ್ಲ. ಮತ್ತೆ ಮತ್ತೆ ಅವಳು ತನ್ನ ತಂದೆಯನ್ನು ಕೂಗಿಕೂಗಿ ಹೇಳಿದಳು—"ಅಪ್ಪ, ನಿನಗೆ ಇವರ ವಿಚಾರ ಚೆನ್ನಾಗಿ ಗೊತ್ತಿದ್ದರೂ ನನ್ನನ್ನು ಹೀಗೆ ನಿಸ್ಸಹಾಯಳನ್ನಾಗಿ ಮಾಡಿ ಇವರ ಕೈಯಲ್ಲೇಕೆ ಒಪ್ಪಿಸಿಹೋದೆ?"

ಹಿಂದೊಮ್ಮೆ ಅವಳೇ ವಿಲಾಸನನ್ನು ಮೆಚ್ಚಿ, ಅವನೊಂದಿಗೆ ಸೇರಿ ನರೇಂದ್ರನ ಸರ್ವನಾಶವನ್ನು ಬಗೆದಿದ್ದಳು. ಇಂದು ಅವಳ ಎಲ್ಲ ಶುಭಾಕಾಂಕ್ಷೆಗಳನ್ನೂ ತುಳಿದು ಆ ಮೋಹವೇ ತನ್ನನ್ನು ಅಣಕಿಸುತ್ತಿರುವಂತೆ ಅವಳಿಗೆ ಭಾಸವಾಯಿತು. ಅವಳು ಹೇಳಿಕೊಳ್ಳುತ್ತಿದ್ದಳು—"ಅಪ್ಪ, ಸ್ನೇಹದ ಮೋಹದಿಂದ ನೀನೇಕೆ ಈ ಸರ್ವನಾಶದ ಬೇರನ್ನು ಕಿತ್ತೊಗೆಯಲಿಲ್ಲ." ನನ್ನ ಬುದ್ಧಿ ವಿವೇಚನೆಗೇ ಎಲ್ಲವನ್ನೂ ಬಿಟ್ಟು ಹೋದೆಯೇಕೆ? ಹಾಗೆ ಮಾಡಬಯಸಿದ್ದರೂ, ನನ್ನ ಸ್ವಾಧೀನವಾಗಿರಬೇಕಾದ ಮಾರ್ಗವನ್ನು ಹೀಗೇಕೆ ಸುತ್ತಲೂ ಬಂಧಿಸಿಟ್ಟುಬಿಟ್ಟೆ? ಇಂದು ಈ ದೂರು ತಂದೆಗೆ ತಲುಪುವುದಿಲ್ಲವೇ? ಇದಕ್ಕೆ ಪ್ರತೀಕಾರ ಮಾಡಲು ನನ್ನಲ್ಲಿ ಏನೂ ಉಪಾಯವಿಲ್ಲವೇ?" ಹೀಗೆ ಯೋಚಿಸುತ್ತಿದ್ದಾಗ ಅಳುವಿನಿಂದ ಅವಳ ತಲೆದಿಂಬೆಲ್ಲ ತೊಯ್ದುಹೋಯಿತು.

ಮರುದಿನ ಬೆಳಿಗ್ಗೆ ಪರೇಶನ ತಾಯಿ ಬಂದು ಅವಳನ್ನು ಕೂಗಿ ಎಬ್ಬಿಸಿದಾಗ ಬೆಳಗಾಗಿ ಹೊತ್ತೇರಿತ್ತು. ಅವಳೆದ್ದಕೂಡಲೇ, ಹೊರಗಿನ ಕೋಣೆ

ಆಹ್ವಾನಿತರಿಂದ ತುಂಬಿಹೋಗಿವೆಯೆಂದು ತಿಳಿಯಿತು. ಅವಳೊಬ್ಬಳಿಗಾಗಿ ಕಾದಿದ್ದರು. ಇದಕ್ಕಾಗಿ ಅವಳು ಆತುರಮಾಡುವುದಂತೂ ಹಾಗಿರಲಿ, ಇಂದಿನ ಉತ್ಸವದ ಕಾರ್ಯಕ್ರಮದ ನೆನಪಾಗಿ ಅವಳಿಗೆ ಸ್ವಲ್ಪವೂ ಉತ್ಸಾಹ ಉಂಟಾಗಲಿಲ್ಲ. ಶೀತಕಾಲದ ಪ್ರಭಾತ-ಸೂರ್ಯನ ಪ್ರಕಾಶ ತೋಟದ ಮಾವಿನ ಮರದಮೇಲೆ ಹರಡಿತ್ತು. ಎದುರಿನ ಮೈದಾನದಲ್ಲಿ ಹಾರಾಡುತ್ತ ಹೋಗಿ ಆ ಮರದ ಕೊಂಬೆಗಳಮೇಲೆ ಕೂಡುತ್ತಿದ್ದ ಪಕ್ಷಿಗಳು ಅವಳ ಕಣ್ಣಿಗೆ ಬಿದ್ದವು. ಅವಳಿಲ್ಲಿಗೆ ಬಂದಾಗಿನಿಂದ ಈ ದೃಶ್ಯವನ್ನು ನೋಡುತ್ತ ನೋಡುತ್ತ ಅವಳ ಗ್ಲಾನಿಯೆಲ್ಲ ನಾಶವಾಗುತ್ತಿತ್ತು. ಎಷ್ಟೋಸಲ ಅವಳು ಅನೇಕ ಅಗತ್ಯದ ಕೆಲಸಗಳಿದ್ದರೂ ಅದನ್ನೆಲ್ಲ ಬದಿಗೊತ್ತಿ, ಇದನ್ನೇ ನೋಡುತ್ತ ಕುಳಿತುಬಿಡುತ್ತಿದ್ದಳು. ಇಷ್ಟುದಿನ ಇವುಗಳಲ್ಲಿ ಎಂತಹ ಆಕರ್ಷಣೆ ಇತ್ತೆಂಬುದನ್ನು ಇಂದು ಅವಳು ಯೋಚಿಸದಾದಳು. ಇದು ಬಹಳ ಹಳೆಯದರಂತೆ ಅವಳಿಗೆ ನೀರಸವಾಗಿ ತೋರಿತು. ಅವಳು ಈ ದೃಶ್ಯದಿಂದ ತನ್ನ ಬಳಲಿದ್ದ ಕಣ್ಣುಗಳನ್ನು ಹೊರಳಿಸುತ್ತಿರುವಾಗಲೇ ಕಾಲೀಪದ ಒಂದೇ ಉಸುರಿಗೆ ಎರಡು ನೂರು ಮೆಟ್ಟಲುಗಳನ್ನು ಹತ್ತುತ್ತಾ ಮೇಲೆ ಬರುತ್ತಿದ್ದ. ಅವಳನ್ನು ನೋಡಿದ ಕೂಡಲೆ ಅವನು ತಡೆದು ಹೇಳಿದ—“ ಅಮ್ಮಾ, ಏಳಿ, ಜಾಗ್ರತೆ ಮಾಡಿ. ಚಿಕ್ಕಬಾಬುಗಳು ಬಹಳ ಸಿಟ್ಟಾಗಿದ್ದಾರೆ. ಇವತ್ತಿಲ್ಲಾದರೂ ಇಷ್ಟು ಹೊತ್ತು ಮಾಡುತ್ತಾರೆಯೇ ? ”

ಬೆಂಕಿಕಡ್ಡಿಯೊಂದು ಹತ್ತಿರಾಶಿಯಲ್ಲಿ ಬಿದ್ದಂತೆ, ಕಾಲೀಪದನ ಈ ಮಾತುಗಳು ಅವಳ ಅಂತರಂಗದಲ್ಲಿ ಒಂದು ವಿಪ್ಲವವನ್ನು ಹುಟ್ಟಿಸಿತು. ತಲೆಯಿಂದ ಕಾಲಿನವರೆಗೂ ಬೆಂಕಿಯು ಉರಿಯೆದ್ದಂತೆ ಅವಳಿಗೆ ಭಾಸವಾಯಿತು. ಆದರೆ ಅವಳೇನೂ ಮಾತನಾಡದಾದಳು. ಅವಳ ಕಣ್ಣುಗಳೆರಡೂ ಬೆಂಕಿಕಡ್ಡಿಗಳಂತೆ ಹೊಳೆಯತೊಡಗಿದುವು. ಅವಳ ಕಣ್ಣುಗಳನ್ನು ನೋಡಿ ಕಾಲೀಪದ ಭಯದಿಂದ ಸುರುಟಿಹೋದ. ಅವನಿನ್ನೇನೋ ಹೇಳಬಯಸುವಷ್ಟರಲ್ಲೇ ವಿಜಯಳು ಸುಧಾರಿಸಿಕೊಂಡು “ ಕಾಲೀಪದ ನೀನು ಕೆಳಗೆ ಹೋಗು ” ಎಂದು ಕೈತೋರಿಸಿ ಹೇಳಿದಳು.

ಈ ಮನೆಯಲ್ಲಿ ‘ ಚಿಕ್ಕಬಾಬು ’ಗಳೆಂದರೆ ವಿಲಾಸನೆಂದೂ ‘ ದೊಡ್ಡಬಾಬು ’ಗಳೆಂದರೆ ರಾಸಬಿಹಾರಿಯೆಂದೂ ವಿಜಯಳಿಗೆ ಗೊತ್ತಿತ್ತು. ಅವರ ಸಿಟ್ಟು ಇಂದು ಮನೆಯ ಯಜಮಾನಿಯ ಮೇಲೂ ಪರಿಣಾಮವಾಗುತ್ತೆಂ

ಬುದು ಆಳುಕಾಳುಗಳಿಗೆ ತಿಳಿಯುವಷ್ಟು ಅವರು ಮನೆಯಲ್ಲಿ ಗೊಡ್ಡವರಾಗಿದ್ದಾರೆಂದು ಇಂದೇ ಮೊಟ್ಟಮೊದಲು ವಿಜಯಳಿಗೆ ಗೊತ್ತಾದುದು. ಇಷ್ಟು ಅಲ್ಪಾವಕಾಶದಲ್ಲೇ ವಿಲಾಸನೇ ಈ ಮನೆಯ ನಿಜವಾದ ಯಜಮಾನನಾಗಿದ್ದಾನೆಂದು ತಾನು ಅವನಿಗೆ ಆಶ್ರಿತಳಾಗಿ ಅವನ ಅನುಗ್ರಹದಿಂದ ಬದುಕಿರುವವಳಂತೆ ಆಗಿದ್ದಾಳೆಂಬುದೂ ಅವಳಿಗೆ ಸ್ಪಷ್ಟವಾಗಿ ಕಂಡಿತು. ಇದರಿಂದ ಅವಳಿಗೆ ದುಃಖ ಅಸಹನೀಯವಾಯಿತು.

ಅರ್ಧಗಂಟೆಯಾದಮೇಲೆ ಅವಳು ಮುಖ ತೊಳೆದು ಬಟ್ಟೆ ಬದಲಿಸಿಕೊಂಡು ಕೆಳಗಿಳಿದು ಬಂದಾಗ ಎಲ್ಲರೂ ಚಹ ಕುಡಿಯುತ್ತಿದ್ದರು. ಅಲ್ಲಿದ್ದವರೆಲ್ಲ ಎದ್ದು ವಂದನೆ ಮಾಡಿದರು. ಅವಳ ಬಾಡಿದ ಮುಖ ಮತ್ತು ಕಣ್ಣುಗಳನ್ನು ನೋಡಿ ಅನೇಕರು ಉದ್ವಿಗ್ನರಾಗಿ ಗೊಣಗುಟ್ಟಿದರು. ಕೂಡಲೆ ವಿಲಾಸಬಿಹಾರಿ ತನ್ನ ಚಹದ ಬಟ್ಟಲನ್ನು ಮೇಜಿನ ಮೇಲೆ ಕುಕ್ಕಿ ಕಟುವಾಗಿ ಹೇಳಿದ—"ಈಗಲೂ ಸಿಟ್ಟು ಮುಗಿಯದಿದ್ದರೂ ನಡೆಯುತ್ತಿತ್ತು. ನಿನ್ನ ನಡತೆಯಿಂದ ನನಗೆ ಬರಬರುತ್ತ ಬೇಸರ ಹುಟ್ಟುತ್ತಿದೆಯೆಂದು ಹೇಳದೆ ವಿಧಿಯಿಲ್ಲ."

ಅವನಿಗೆ ಸಿಟ್ಟನ್ನು ತೋರಿಸುವ ಅಧಿಕಾರವೇನೋ ಇತ್ತು. ಆದರೆ ಇಷ್ಟು ಜನ ಮಾನ್ಯ ಅತಿಥಿಗಳೆದುರಿಗೆ ಭಾವೀ ಪತಿಯ ಈ ಕರ್ತವ್ಯ ಪರಾಯಣತೆ ಎಲ್ಲರಿಗೂ ಬಹಳ ಅಶ್ಲೀಲವಾಗಿ ತೋರಿ ಎಲ್ಲರೂ ಆಶ್ಚರ್ಯವನ್ನು ವ್ಯಕ್ತಪಡಿಸಿದರು. ಆದರೆ ವಿಜಯಳು ಅವನ ಕಡೆ ಕಣ್ಣೆತ್ತಿ ಸಹ ನೋಡಲಿಲ್ಲ. ಏನೂ ನಡೆದಿಲ್ಲವೇನೋ ಎನ್ನುವಂತೆ ಅವಳು ಎಲ್ಲರಿಗೂ ಪ್ರತಿ ನಮಸ್ಕಾರ ಮಾಡಿ ವೃದ್ಧ ದಯಾಳಬಾಬುಗಳಿದ್ದಲ್ಲಿಗೆ ಹೋದಳು. ಅವರು ಬಹಳ ಸಂಕೋಚಪಟ್ಟುಕೊಂಡರು. ವಿಜಯಳು ಅವಳ ಹತ್ತಿರ ಹೋಗಿ ಶಾಂತಸ್ವರದಲ್ಲಿ ಹೇಳಿದಳು—"ತಮಗೆ ಚಹ ಕುಡಿಯುವುದಕ್ಕೇನೂ ತೊಂದರೆಯಾಗಲಿಲ್ಲವಷ್ಟೆ? ನನ್ನದು ತಪ್ಪಾಯಿತು....—ಏಳುವುದು ಸ್ವಲ್ಪ ಹೊತ್ತಾಯಿತು."

ವೃದ್ಧ ದಯಾಳುಗಳು ಸ್ನೇಹಪೂರಿತ ದನಿಯಲ್ಲಿ 'ಮಗು' ಎಂದು ಸಂಬೋಧಿಸಿ ಹೇಳಿದರು—"ಇಲ್ಲ ಮಗು, ನಮ್ಮಲ್ಲಿ ಯಾರಿಗೂ ಏನು ತೊಂದರೆಯೂ ಆಗಲಿಲ್ಲ. ವಿಲಾಸಬಾಬುಗಳು ರಾಸಬಿಹಾರಿಬಾಬುಗಳು

ಯಾವ ಲೋಪಗಳಿಗೂ ಅವಕಾಶಕೊಟ್ಟಿಲ್ಲ. ನೀನೇಕೆ ಅಷ್ಟು ಚೆನ್ನಾಗಿದ್ದ ಹಾಗೆ ಕಾಣುವುದಿಲ್ಲ. ಆರೋಗ್ಯ ಚೆನ್ನಾಗಿದೆ ತಾನೆ."

ಇವರು ಯಾವಾಗಲೂ ಕಲಿಕತ್ತೆಯಲ್ಲಿ ಇರುತ್ತಿರಲಿಲ್ಲವಾದ್ದರಿಂದ ಇವರ ಪರಿಚಯು ವಿಜಯಳಿಗಿರಲಿಲ್ಲ. ಹಿಂದಿನದಿನವೂ ಅವಳು ಅವರನ್ನು ಅಷ್ಟು ಲಕ್ಷ್ಯವಿಟ್ಟು ನೋಡಿರಲಿಲ್ಲ. ಆದರೆ ಇಂದು ಅವಳು ಕೋಣೆಯಲ್ಲಿ ಕಾಲಿಟ್ಟ ಕೂಡಲೆ ಅವರ ಶಾಂತ ಮುಖ ಅವಳ ಆತ್ಮೀಯರಂತೆ ಆಕರ್ಷಿಸಿತು. ಆದ್ದರಿಂದ ಅವಳು ಎಲ್ಲರನ್ನೂ ಬಿಟ್ಟು ಅವರ ಹತ್ತಿರ ಹೋಗಿ ನಿಂತಳು. ಈಗಲೂ ಅವಳಿಗೆ ಅವರ ಸ್ನಿಗ್ಧ ಕಂಠಸ್ವರದಿಂದ ಅರ್ಧ ಸಾಂತ್ವನೆಯಾದಂತಾಯಿತು. ಅವರ ದನಿಯಲ್ಲಿ ಅವಳಿಗೆ ತನ್ನ ಸ್ವರ್ಗವಾಸಿ ತಂದೆಯ ದನಿಯ ನೆನಪಾಯಿತು.

ದಯಾಲರು ಒಂದು ಸೋಫದ ಮೇಲೆ ಕುಳಿತಿದ್ದರು. ಅವರ ಮಗ್ಗುಲಲ್ಲಿ ಸ್ವಲ್ಪ ಜಾಗವಿತ್ತು. ಅವರು ಆಕಡೆ ತೋರಿಸಿ ಹೇಳಿದರು—"ನಿಂತಿದ್ದೀಯೇಕೆ ಮಗು? ಇಲ್ಲಿ ಕುಳಿತುಕೋ. ದೇಹಸ್ಥಿತಿ ಚೆನ್ನಾಗಿದೆ ತಾನೇ?"

ವಿಜಯಳು ಮಗ್ಗುಲಲ್ಲಿ ಕುಳಿತಳು, ಆದರೆ ಉತ್ತರ ಕೊಡದೆ ಮುಖ ತಿರುಗಿಸಿಕೊಂಡಳು. ಕಣ್ಣೀರನ್ನು ತಡೆಯುವುದು ಅವಳಿಗೆ ಬಹಳ ಕಷ್ಟವಾಯಿತು. ಆ ವೃದ್ಧರು ಮತ್ತೆ ಅದೇ ಪ್ರಶ್ನೆ ಮಾಡಿದರು. ಇದಕ್ಕೆ ಪ್ರತ್ಯುತ್ತರವಾಗಿ ವಿಜಯಳು ಬಹಳ ಕಷ್ಟದಿಂದ ಹೇಗೋ ತಲೆಯಲ್ಲಾಡಿಸಿ 'ಇಲ್ಲ' ಎಂದಳು. ಅವಳ ಬಿಗಿದ ಕಂಠದಿಂದ ಬಂದ ಆ ಉತ್ತರದ ಅರಿವು ಅವರಿಗಾಗದಿರಲಿಲ್ಲ. ಅವರು ಒಂದು ಕ್ಷಣ ಸುಮ್ಮನಿದ್ದು ವಿಷಯ ತಿಳಿದುಕೊಂಡು ಮನಸ್ಸಿನಲ್ಲೇ ನಕ್ಕರು. ಈ ಮನೆಯ ಯಜಮಾನನ ಸ್ಥಾನದಲ್ಲಿ ಈಗ ಸ್ವಲ್ಪಹೊತ್ತಿಗೆ ಮುಂಚೆ ವಿಲಾಸ ತನ್ನ ಭಾವಿ ಪ್ರಣಯಿನಿಗೆ ಆಡಿದ ಮಾತುಗಳು ಅನನುಭವಿಗಳಿಗೆ ಎಷ್ಟೇ ಒರಟಾಗಿ ಕಂಡರೂ, ಜ್ಞಾನವೃದ್ಧರಾಗಿ ಯೌವನದ ಸಿಹಿ-ಕಹಿಗಳನ್ನು ಕಂಡ ಅವರು ನಗುವುದು ಸ್ವಾಭಾವಿಕವಾದದ್ದೆ."

ಆಗ ಆ ವೃದ್ಧರು ತಮ್ಮ ಮಗ್ಗುಲಲ್ಲೇ ಕುಳಿತಿದ್ದ ವಿಜಯಳನ್ನು ಸಂತೈಸುವುದಕ್ಕಾಗಿ ನಿಧಾನವಾಗಿ ಮಾತನ್ನು ಶುರುಮಾಡಿದರು. ಇಷ್ಟು ಚಿಕ್ಕ ವಯಸ್ಸಿನಲ್ಲೇ ಧರ್ಮದಲ್ಲಿ ಇಷ್ಟು ಅಚಲಶ್ರದ್ಧೆ ಇರುವುದನ್ನು ನೋಡಿ

ಪ್ರಶಂಸಿಸಿ ಕೊನೆಗೆ ಹೇಳಿದರು—"ದೇವರ ದಯೆಯಿಂದ ನಿಮ್ಮ ಈ ಮಹೋದ್ದೇಶ ದಿನದಿನಕ್ಕೂ ಹೆಚ್ಚು ಅಭಿವೃದ್ಧಿಯಾಗಲಿ. ಆದರೆ ನಿಮ್ಮ ಹಳ್ಳಿಯಲ್ಲಿ ಸ್ಥಾಪನೆ ಮಾಡಿದ ಈ ಮಂದಿರವನ್ನು ಸರಿಯಾಗಿ ನಡೆಸಿ ಕೊಂಡು ಬರಲು ನೀವು ಅಸೀಮ ಸ್ವಾರ್ಥತ್ಯಾಗವನ್ನು ಮಾಡಬೇಕು. ನಾನು ಹಳ್ಳಿಯಲ್ಲಿರುವವನೇ. ಈ ಧರ್ಮ ಈಗಲೂ ಹಳ್ಳಿಗರಲ್ಲಿ ಚೇತನ ವನ್ನುಂಟುಮಾಡಿಲ್ಲ. ಆ ಕೆಲಸ ನಿನ್ನಿಂದ ಆಗುವುದಾದರೆ ಮಗು ಆಗ ಈ ದೇಶದ ಮುಖ್ಯವಾದ ಸಮಸ್ಯೆಯೊಂದು ಬಗೆಹರಿದಂತೆ ಎಂದೆನಿಸುತ್ತದೆ. ನಿಮ್ಮ ಈ ಮಹೋದ್ಯಮಕ್ಕೆ ನಾನೇನೆಂದು ಆಶೀರ್ವಾದಮಾಡಲೆಂಬುದೇ ನನಗೆ ತಿಳಿಯದಾಗಿದೆ."

ಈ ಮಂದಿರ ಸ್ಥಾಪನೆಯಲ್ಲಿ ತನಗೆ ಎಳ್ಳಷ್ಟೂ ಉತ್ಸಾಹವಿಲ್ಲವೆಂದೂ ಇದರ ಸಫಲತೆಯಲ್ಲಿ ತನಗೆ ನಂಬಿಕೆ ಇಲ್ಲವೆಂದೂ ಹೇಳಬೇಕೆಂದು ಅವಳು ಬಾಯಿ ತೆರೆದವಳು ಅಷ್ಟರಲ್ಲೇ ನಿಲ್ಲಿಸಿ ಮೃದುವಾಗಿ ಹೇಳಿದಳು—"ಇದ ರಿಂದ ಒಂದು ದೊಡ್ಡ ಸಮಸ್ಯೆ ಬಗೆಹರಿದಂತೆ ಎಂದು ಹೇಗೆ ಹೇಳುತ್ತೀರಿ?"

ದಯಾಳರು ಹೇಳಿದರು—"ಅಷ್ಟಲ್ಲದೇ ಏನು ಮಗು? ಬಂಗಾಳದ ಹಳ್ಳಿಗಳಲ್ಲಿ ಬಹಳ ದಿನಗಳಿಂದ ನಡೆದುಬಂದ ಸಾವಿರಾರು ಕುಸಂಸ್ಕಾರ ಗಳಿಗೆ ಇದೊಂದರಿಂದ ಮಾತ್ರವೇ ಮುಕ್ತಿ ದೊರೆಯಬಲ್ಲುದು. ಆದರೆ ಇದಕ್ಕೆ ಇಲ್ಲಿ ಸ್ಥಾನವಿಲ್ಲದಿದ್ದಮೇಲೆ, ಇದರಿಂದ ಇಲ್ಲಿ ಉಪಯೋಗವಿಲ್ಲದಿದ್ದ ಮೇಲೆ ಈ ಧರ್ಮ ಇಲ್ಲಿ ಉಳಿಯಲಾರದು. ಆದರೂ ವಿಶೇಷ ಪ್ರಯತ್ನ ದಿಂದ ಇಲ್ಲಿ ಒಬ್ಬನಾದರೂ ಸರಿಯಾದ ದಾರಿ ಹಿಡಿಯುವಂತೆ ಮಾಡಿದರೆ ಅದೇ ದೊಡ್ಡ ಭರವಸೆಯಾಗುವುದಿಲ್ಲವೇ? ನಮ್ಮ ಬಂಗಾಳೀ ಸಂಸಾರಗಳಲ್ಲಿನ ಲೋಪದೋಷಗಳು ನಿನಗೂ ಚೆನ್ನಾಗಿ ತಿಳಿದೇ ಇದೆ. ಇದನ್ನೆಲ್ಲಾ ಚೆನ್ನಾಗಿ ವಿಚಾರಮಾಡಿ ನೋಡು ಮಗು."

ವಿಜಯಳು ಮತ್ತೆ ಪ್ರಶ್ನೆಮಾಡದೆ ಮೌನದಿಂದ ಯೋಚಿಸಲು ಶುರು ಮಾಡಿದಳು. ಸ್ವಾಭಾವಿಕವಾಗಿಯೇ ಅವಳಲ್ಲಿ ಸ್ವದೇಶದ ಬಗ್ಗೆ ವಿಶೇಷ ಭಕ್ತಿಯಿತ್ತು. ಆಚಾರ್ಯರು ಆಡಿದ ಕೊನೆಯ ಮಾತಿನಿಂದ ಅವಳಲ್ಲಿ ಒಂದು ಆಂದೋಳನವೇ ಎದ್ದಂತಾಯಿತು. ಮಂದಿರ-ಪ್ರತಿಷ್ಠೆಯ ನೆವ ದಲ್ಲಿ ವಿಲಾಸ ಅನೇಕಬಾರಿ ಅವಳಿಗೆ ಅತ್ಯಂತ ದುಃಖದಾಯಕವಾದ ಕೆಲಸ ವನ್ನೇ ಮಾಡುತ್ತಿದ್ದ. ಅವಳು ಬಾಯಿ ಮುಚ್ಚಿಕೊಂಡು ಆ ವೇದನೆಯನ್ನು

ಅನುಭವಿಸುತ್ತಿದ್ದಳು. ಅದಕ್ಕೆ ಅವಳಿಗೆ ಯಾವ ಉಪಾಯವೂ ತೋರು ತ್ತಿರಲಿಲ್ಲ. ಆದ್ದರಿಂದ ಮಂದಿರ ಪ್ರತಿಷ್ಠೆಯೆಂದರೆ ಅವಳಿಗೆ ಬೇಸರ ಹುಟ್ಟಿತು. ಆದರೆ ದಯಾಳರು ಬಹಳ ಶಾಂತವಾಗಿ ಪ್ರಸನ್ನ ಮುದ್ರೆಯಿಂದ ಈ ಕಡೆ ಅವಳ ಗಮನವನ್ನು ಸೆಳೆದ ಕೂಡಲೆ ವಿಜಯಳಿಗೆ ತನ್ನ ತಪ್ಪಿನ ಅರಿವಾಯಿತು. ವಿಲಾಸ ನಿಜವಾಗಿಯೂ ನಿಷ್ಠುರಿ ಮತ್ತು ಹೃದಯಶೂನ್ಯ ನಲ್ಲವೆಂದು ಅವಳು ಅಂದುಕೊಂಡಳು. ಅವನ ಆ ಕ್ರೂರತನ ಧರ್ಮದಲ್ಲಿ ಅವನಿಗಿರುವ ಅಚಲ ದೀಕ್ಷೆಯನ್ನೇ ತೋರಿಸುತ್ತೆ ಎಂದು ಅವಳಿಗೆ ಅನಿ ಸಿತ್ತು. ಮಾನವ ಇತಿಹಾಸದಲ್ಲಿ ಇಂತಹ ನಿದರ್ಶನಗಳಿಗೇನೂ ಕಡಿಮೆ ಇಲ್ಲ. ಪ್ರಪಂಚದಲ್ಲಿ ಯಾವುದೇ ದೊಡ್ಡ ಕೆಲಸವಾಗಲೀ ಒಬ್ಬೊಬ್ಬರಿಗೆ ಹಾನಿಕರವಾಗಿಯೇ ಆಗುತ್ತೆಂದು ಯಾವುದೋ ಪುಸ್ತಕದಲ್ಲಿ ಓದಿದ್ದು ಅವಳ ಸ್ಮರಣೆಗೆ ಬಂದಿತು. ಇಂತಹ ದೊಡ್ಡ ಕಾರ್ಯಭಾರವನ್ನು ಹೊತ್ತಿ ರುವವರಿಗೆ ಅನೇಕರ ಯೋಗಕ್ಷೇಮಕ್ಕಾಗಿ ಸಾಧಾರಣ ಜನರ ಮಂಗಳದ ಕಡೆ ಲಕ್ಷ್ಯ ಕೊಡಲು ಸಾಧ್ಯವಾಗುವುದಿಲ್ಲ. ಆದ್ದರಿಂದಲೇ ಪ್ರಪಂಚ ಅವರನ್ನು ಅನೇಕಸಲ ನಿರ್ದಯಿಗಳೆಂದೂ ನಿಷ್ಠುರಿಗಳೆಂದೂ ಕರೆಯುತ್ತದೆ. ಬಹಳ ದಿನಗಳ ಸಂಸ್ಕಾರಗಳಿಂದಲೂ ಶಿಕ್ಷಣದಿಂದಲೂ ವಿಜಯಳಿಗೆ ಬ್ರಾಹ್ಮ ಧರ್ಮದಲ್ಲಿ ಇತರರಿಗಿಂತಲೂ ಹೆಚ್ಚಾದ ಅಭಿಮಾನವೇ ಇತ್ತು. ಆ ಧರ್ಮದ ವಿಸ್ತಾರದಿಂದ ದೇಶಕ್ಕೆ ಇಷ್ಟು ಅನುಕೂಲವಾಗುತ್ತೆಂದು ಆಚಾ ರ್ಯರ ಬಾಯಿಂದ ಬಂದಕೂಡಲೆ ಅವಳು ಮನಸಾರೆ ವಿಲಾಸನ ಎಲ್ಲ ಅಪ ರಾಧಗಳನ್ನೂ ಕ್ಷಮಿಸಿಬಿಟ್ಟಳು. ಅಷ್ಟೇ ಅಲ್ಲದೆ ಅವಳು ಮನಸ್ಸಿನಲ್ಲೇ ಹೇಳಿಕೊಂಡಳು—“ಪ್ರಪಂಚದಲ್ಲಿ ಮಹಾಕಾರ್ಯಗಳನ್ನು ಮಾಡಲು ಟೊಂಕ ಕಟ್ಟಿದವರ ನಡೆನುಡಿಗಳು ನಮ್ಮಂತಹ ಸಾಧಾರಣ ಜನರ ನಡೆನುಡಿಗಳಿಗೆ ಹೊಂದದಿದ್ದಗೆ ಅವರನ್ನು ದೂರುವುದು ಅಸಂಗತ ಮತ್ತು ಅನ್ಯಾಯ. ಅಂತಹುದಕ್ಕೆ ನಾನೆಂದಿಗೂ ಆಶ್ರಯ ಕೊಡಲಾರೆ.”

ಹೊತ್ತು ಬಹಳವಾದ್ದರಿಂದ ಸಭಿಕರೆಲ್ಲರೂ ಒಬ್ಬೊಬ್ಬರಾಗಿ ಎದ್ದು ಹೊರಟರು. ವಿಜಯಳು ಎದ್ದುನಿಂತಳು. ರಾಸಬಿಹಾರಿ ಮಗನನ್ನು ಪ್ರತ್ಯೇಕವಾಗಿ ಕರೆದು ಏನೋ ಹೇಳಿದ. ಆಗ ಅವನು ಇಂತಹ ಸುಯೋಗ ವನ್ನೇ ಎದುರುನೋಡುತ್ತಿದ್ದವನಂತೆ ವಿಜಯಳ ಹತ್ತಿರ ಬಂದು ಕೇಳಿದ— “ಬೆಳಿಗ್ಗಿನಿಂದ ನಿನ್ನ ದೇಹಸ್ಥಿತಿ ಚನ್ನಾಗಿಲ್ಲವೇ ವಿಜಯ?”

ಅರ್ಧಗಂಟೆ ಮುಂಚೆ ಈ ಪ್ರಶ್ನೆಗೆ ಉತ್ತರ ಕೊಡದಿದ್ದರೂ ನಡೆಯುತ್ತಿತ್ತು. ಈಗ ವಿಜಯಳು ಮುಖವೆತ್ತಿ ಸರಳರೀತಿಯಿಂದ ಹೇಳಿದಳು—
"ಅದೇನೂ ಇಲ್ಲ, ಆರೋಗ್ಯವಾಗಿದ್ದೇನೆ. ನಿನ್ನೆ ರಾತ್ರಿ ನಿದ್ದೆ ಬರಲಿಲ್ಲ. ಆದ್ದರಿಂದ ನೋಡುವುದಕ್ಕೆ ಹಾಗೆ ಕಾಣುತ್ತಿರಬಹುದು."

ವಿಲಾಸನ ಮುಖ ಆನಂದದಿಂದ ಉಬ್ಬಿತು. ಆ ಘಾತಕ್ಕೆ ಪ್ರತಿಮಾಡದ ಹೊರತು ಕೆಲವರು ಸುಮ್ಮನಾಗುವುದಿಲ್ಲ. ಅದರಿಂದ ತಮಗೆ ತೊಂದರೆಯಾದರೂ ಅವರು ಹಿಂಜರಿಯುವುದಿಲ್ಲ. ವಿಲಾಸ ಆ ಗುಂಪಿಗೆ ಸೇರಿದವನು. ಅವನ ವಿಚಾರದಲ್ಲಿ ವಿಜಯಳ ಆಚರಣೆ ನಿಷ್ಠುರವಾದಷ್ಟೂ ಅವನ ಆಚರಣೆಯೂ ನಿಷ್ಠುರವಾಗುತ್ತಿತ್ತು.

ಹೀಗೆ ಹಿಂಸೆ–ಪ್ರತಿಹಿಂಸೆಯ ನಡೆ ಹೆಚ್ಚಾದಷ್ಟೂ ನರೆತ ಕೂದಲಿನ ರಾಸಬಿಹಾರಿ ಮಗನಿಗೆ ಗಂಭೀರವಾಗಿ ಬಹಳ ಪರಿಯಿಂದ ಸಹಿಷ್ಣುತೆಯ ಪರಮಲಾಭ, ಅಂತ್ಯಗುರಿಯ ವಿಚಾರವಾಗಿ ರಹಸ್ಯೋಪದೇಶವನ್ನು ಮಾಡುತ್ತಿದ್ದ. ಆದರೆ ಅವೊಂದೂ ವಿಲಾಸನ ಮನಸ್ಸಿಗೆ ಬಂದಿರಲಿಲ್ಲ. ಅಂತಹ ಸನ್ನಿವೇಶದಲ್ಲಿ ವಿಜಯಳ ಬಾಯಿಂದ ಬಂದ ಈ ಕೋಮಲವಾದ ನುಡಿಗಳಿಂದ ಅವನ ಸ್ವಭಾವವೇ ಬದಲಾದಂತಾಯಿತು. ತನ್ನ ಸ್ವಾಭಾವಿಕವಾದ ಕರ್ಕಶದನಿಯನ್ನು ಆದಷ್ಟು ಮೃದುವಾಗಿ ಮಾಡಿಕೊಂಡು ಅವನು ಹೇಳಿದ—"ಹಾಗಾದರೆ ನೀನೀಗ ಬಿಸಲಿನಲ್ಲಿ ಹೊರಗೆ ಹೋಗಬೇಡ. ಬೇಗ ಸ್ನಾನ–ಊಟ ಮುಗಿಸಿಕೊಂಡು ಇಲ್ಲೇ ಮಲಗಿಕೊಂಡು ವಿಶ್ರಾಂತಿ ತೆಗೆದುಕೋ. ಹವಾ ಬದಲಾವಣೆಯ ಕಾಲ ಅಷ್ಟು ಒಳ್ಳೆಯದಲ್ಲ. ದೇಹಸ್ಥಿತಿ ಬಹಳ ಬೇಗ ಕೆಟ್ಟುಹೋಗುತ್ತೆ." ಹೀಗೆ ಹೇಳಿ ಕ್ಷಮೆ ಬೇಡುವ ಮುಖಚರ್ಯೆ ಮಾಡಿದ. ಆದರೆ ಕ್ಷಮೆ ಬೇಡುವುದು ಅವನ ಸ್ವಭಾವಕ್ಕೆ ತೀರ ವಿರುದ್ಧವಾದ್ದರಿಂದ ಅವನು ಬಂದಿದ್ದ ಅತಿಥಿಗಳೊಂದಿಗೆ ಹೊರಟುಹೋದ.

ಕಣ್ಣಿಗೆ ಕಾಣುವಷ್ಟು ದೂರ ವಿಜಯ ಅವನನ್ನೇ ನೋಡುತ್ತಿದ್ದಳು. ಆಮೇಲೊಂದು ನಿಟ್ಟುಸಿರುಬಿಟ್ಟು ಅವಳು ಮಹಡಿಯ ಮೇಲೆ ತನ್ನ ಕೋಣೆಗೆ ಹೋದಳು. ಕೆಲವು ಸಮಯದಿಂದ ಅವಳ ಮನಸ್ಸಿನಲ್ಲಿ ಮುಳ್ಳಿನಂತೆ ಕುಟುಕುತ್ತಿದ್ದ ಯಾವುದೋ ಅವ್ಯಕ್ತವೇದನೆ ಈಗ ಮಾಯವಾಯಿತು.

ಸಂಜೆಯಾದಮೇಲೆ ಮಂದಿರ–ಸ್ಥಾಪನೆ ಯಥಾ ಸಾಂಗವಾಗಿ ನೆರ

ವೇರಿತು. ಒಳಗೆ ಒಂದು ಮುಖ್ಯ ಸ್ಥಳದಲ್ಲಿ ಎರಡು ಉತ್ತಮವಾದ ಕುರ್ಚಿಗಳು ಹಾಕಿದ್ದವು. ಅದರಲ್ಲೊಂದರಲ್ಲಿ ವಿಶೇಷ ವೈಭವದಿಂದ ವಿಜಯಳನ್ನು ಕರೆದುಕೊಂಡು ಬಂದು ಕೂಡಿಸಿದ ಮೇಲೆ, ಮಗ್ಗುಲಲ್ಲಿದ್ದ ಕುರ್ಚಿಯಮೇಲೆ ಯಾರು ಕೂಡುತ್ತಾರೆಂಬುದನ್ನು ತಿಳಿಯಲು ಯಾರಿಗೂ ಕಷ್ಟವಾಗಲಿಲ್ಲ. ಒಂದು ಕ್ಷಣ ವಿಜಯಳಿಗೆ ಮನಸ್ಸಿನಲ್ಲಿ ಉರಿಯೆದ್ದಂತಾಯಿತು. ಆದರೆ ವಿಲಾಸ ಬಂದು ಮಗ್ಗುಲಲ್ಲಿ ಕೂಡುತ್ತಲೇ ಅದು ಶಾಂತವಾಗುವುದಕ್ಕೂ ಹೊತ್ತು ಹಿಡಿಯಲಿಲ್ಲ.

೧೫

(ಸುಟ್ಟುಹೋದ ದಾಳಿಂಬೆ ಬೀಜದ ಮೇಲಿನ ಪ್ರೊಸೆಯಂತೆ) ಇಷ್ಟು ವೈಭವದಿಂದ ಉತ್ಸವವಾದಮೇಲೆ, ಜನಗಳಿಗೆ ಬ್ರಾಹ್ಮಮಂದಿರದ ವಿಷಯದಲ್ಲಿ ಉದಾಸೀನ ಭಾವನೆ ಬರದಿರಲೆಂದು ವಿಲಾಸ ಈ ಉತ್ಸವದ ಕಾರ್ಯಕ್ರಮವನ್ನು ಸಮಾಪ್ತಿ ಮಾಡದೆ ಮುಂದುವರೆಸಲಿಚ್ಛಿಸಿದ. ಆದರೆ ಬಂದಿದ್ದ ಮಾನ್ಯ ಅತಿಥಿಗಳಿಗೂ ಮನೆ–ಮಠಗಳಿದ್ದು ಕೆಲಸಕಾರ್ಯಗಳಿದ್ದುದರಿಂದ ಇನ್ನೊಬ್ಬರ ಖರ್ಚಿನಲ್ಲಿ ಸಂತೋಷಪಡುತ್ತಾ ಕುಳಿತಿರಲಾಗಲಿಲ್ಲ. ಆದ್ದರಿಂದ ಉತ್ಸವ ಒಂದು ದಿನ ಮುಗಿಯಲೇ ಬೇಕಾಯಿತು. ಅಂದು ರಾಸಬಿಹಾರಿ ಒಂದು ಪುಟ್ಟ ಭಾಷಣ ಮಾಡಿ ಕೊನೆಯಲ್ಲಿ ಹೇಳಿದ—"ನಾವು ಆ ಏಕಮೇವಾದ್ವಿತೀಯಂ ನಿರಾಕಾರ ಬ್ರಹ್ಮನ ಅನುಗ್ರಹದಿಂದ ಮೂರ್ತಿಪೂಜೆಯೆಂಬ ಅಂಧಕಾರದಿಂದ ಹೊರಬಂದು ಪ್ರಕಾಶವನ್ನು ಕಂಡುಕೊಂಡಿದ್ದೇವೆ. ಈ ಮಂದಿರದಲ್ಲಿ ಆ ಭಗವಂತನ ಆರಾಧನೆಗೆ ಅವಕಾಶವಿತ್ತ ಮಹನೀಯರಿಗೆ ದೇವರು ಕಲ್ಯಾಣವನ್ನುಂಟುಮಾಡಲಿ. ಬಹಳ ನಿಕಟ ಭವಿಷ್ಯದಲ್ಲೇ ಆ ಎರಡು ನಿರ್ಮಲ ನವೀನ ಜೀವನ ಶಾಶ್ವತವಾಗಿ ಬೆರೆತು ಆನಂದಿಸಲಿ ಮತ್ತು ಅಂತಹ ಶುಭ ಮುಹೂರ್ತವನ್ನು ನೋಡುವ ಸುಯೋಗ ಭಗವಂತ ನಮಗೆ ತಂದುಕೊಡಲೆಂದು ನಾನು ಯಾವಾಗಲೂ ಪ್ರಾರ್ಥಿಸುತ್ತಿರುತ್ತೇನೆ" ಎಂದು ಅವನು ಆ ಎರಡು ನವೀನ ಜೀವನಗಳ ಕಡೆ ದೃಷ್ಟಿ ಹೊರಳಿಸಿ ಮುಂದುವರೆಸಿದ—"ಮಗು ವಿಜಯ, ವಿಲಾಸ, ಇಬ್ಬರೂ ಎಲ್ಲರಿಗೂ ನಮಸ್ಕಾರಮಾಡಿ. ತಾವೆಲ್ಲ ನನ್ನ ಸಂತಾನಗಳಿಗೆ ಆಶೀರ್ವಾದ ಮಾಡಿ."

ವಿಜಯಳು ಮತ್ತು ವಿಲಾಸ ನೆಲದಮೇಲೆ ಹತ್ತಿರದಲ್ಲೇ ಎಲ್ಲರಿಗೂ

ನಮಸ್ಕಾರ ಮಾಡಿದರು. ಅಲ್ಲಿ ನೆರೆದಿದ್ದವರೆಲ್ಲ ಅಸ್ಪಷ್ಟದನಿಯಲ್ಲಿ ಇವರಿಗೆ ಆಶೀರ್ವಾದ ಮಾಡಿದರು. ಅದಾದಮೇಲೆ ಸಭೆ ಮುಗಿಯಿತು.

ಸಂಜೆಯಾದ ಮೇಲೆ ವಿಜಯಳು ಮನೆಗೆ ಬಂದಾಗ ಅವಳ ಮನಸ್ಸಿನಲ್ಲಿ ಯಾವರೀತಿಯ ಉದ್ವೇಗ, ಚಂಚಲತೆ, ವಿರೋಧಗಳೂ ಇರಲಿಲ್ಲ. ಧರ್ಮದ ಉತ್ಸಾಹ ಮತ್ತು ಆನಂದದಲ್ಲಿ ಅವಳು ತನ್ನನ್ನು ತಾನೇ ಮರೆತು ಹೇಳಿಕೊಂಡಳು—" ಪ್ರಾಪಂಚಿಕ ಸುಖ ಒಂದೇ ಸುಖವಲ್ಲ. ಧರ್ಮಕ್ಕೋಸುಗವೂ ಪರರಿಗೋಸುಗವೂ ಈ ಸುಖವನ್ನು ತ್ಯಜಿಸುವುದೂ ಶ್ರೇಯಸ್ಸೇ." ವಿಲಾಸನೊಂದಿಗೆ ತನ್ನದೆಷ್ಟೇ ಭಿನ್ನಾಭಿಪ್ರಾಯವಿರಲಿ ಧರ್ಮವಿಚಾರದಲ್ಲಿ ತಮ್ಮಿಬ್ಬರಲ್ಲಿ ಎಂದಿಗೂ ವಿರೋಧ ಬರಲಾರದೆಂದು ಅವಳು ಬಾರಿಬಾರಿಗೂ ಯೋಚಿಸಿದಳು. ಹಾಸಿಗೆಯ ಮೇಲೆ ಮಲಗಿ ಅವಳು ಮತ್ತೆ ಇದನ್ನೇ ಯೋಚಿಸಿದಳು.—" ವಿಲಾಸನಂತಹ ಸ್ಥಿರಸಂಕಲ್ಪ, ಧರ್ಮಪರಾಯಣ, ಕರ್ತವ್ಯನಿಷ್ಠ ವ್ಯಕ್ತಿಯೊಂದಿಗೆ ನನ್ನ ಜೀವನವನ್ನು ಕೊನೆಯವರಿಗೂ ಸಾಗಿಸುವಂತಾದುದೂ ಒಳ್ಳೆಯದೇ ಆಯಿತು. ಭಗವಂತ ನನ್ನ ಮೂಲಕ ತನ್ನ ಅನೇಕ ಕೆಲಸಗಳನ್ನು ಮಾಡಿಕೊಳ್ಳಬೇಕಾಗಿದೆಯೆಂದು ತೋರುತ್ತೆ. ಅದಕ್ಕಾಗಿಯೇ ನನ್ನ ಮನಸ್ಸಿನ ಭಾವನೆಯನ್ನೇ ಬದಲುಮಾಡಿದ್ದಾನೆ."

ಮರುದಿನ ವಿಲಾಸ ಎಲ್ಲರಿಗೂ ಕೈಮುಗಿದು ಹೇಳಿದ—"ತಾವು ತಿಂಗಳಿಗೊಮ್ಮೆಯಾದರೂ ಬಂದು ನಮ್ಮ ಮಂದಿರದ ಮರ್ಯಾದೆಯನ್ನು ವೃದ್ಧಿ ಮಾಡಿದರೆ ನಾವು ಆಜನ್ಮ ನಿಮಗೆ ಕೃತಜ್ಞರಾಗಿರುತ್ತೇವೆ." ಅನೇಕ ಮಾನ್ಯ ಅತಿಥಿಗಳು ಈ ಪ್ರಾರ್ಥನೆಯನ್ನು ಲಾಲಿಸಿ ಮನೆಗಳಿಗೆ ಹಿಂದಿರುಗಿದರು.

ರಾಸಬಿಹಾರಿ ಬಂದು ಹೇಳಿದ—" ಮಗು ವಿಜಯ, ಈ ಮಂದಿರ ಸರಿಯಾಗಿ ನಡೆಯುವ ಅಪೇಕ್ಷೆ ನಿನಗಿದ್ದರೆ, ನೀನು ದಯಾಳುಬಾಬುವನ್ನು ಇಲ್ಲೇ ನಿಲ್ಲಿಸಿಕೋ."

" ಇದು ಸಾಧ್ಯವೇ ಕಕ್ಕ ? " ವಿಜಯಳು ವಿಸ್ಮಿತಳಾಗಿ ಕೇಳಿದಳು.

" ಸಾಧ್ಯವಿಲ್ಲದಿದ್ದರೆ ನಾನೇಕೆ ಹೇಳುತ್ತಿದ್ದೆ ಮಗು? ನನಗೆ ಬಾಲ್ಯದಿಂದಲೂ ಅವರ ಪರಿಚಯವಿದೆ. ಅವರು ಒಂದು ರೀತಿಯಲ್ಲಿ ನನಗೆ ಬಾಲ್ಯ ಬಂಧುಗಳು. ಅವರು ಬಡವರಾದರೂ ದೊಡ್ಡ ಮನುಷ್ಯರು. ನಿನ್ನ ಜಮೀನು ದಾರಿಯಲ್ಲಿ ಅವರಿಗೇನಾದರೂ ಒಂದು ಕೆಲಸ ಕೊಟ್ಟರೆ ಅವರನ್ನು ಸುಲಭ

ವಾಗಿ ಇಲ್ಲಿ ಇಟ್ಟುಕೊಳ್ಳಬಹುದು. ಮಂದಿರದಲ್ಲಿ ಕೋಣೆಗಳಿಗೇನೂ ಕಡಿಮೆ ಇಲ್ಲ. ಮೂರು-ನಾಲ್ಕು ಕೋಣೆಗಳಲ್ಲಿ ಸಂಸಾರ ಸಮೇತ ಅವರು ಸುಖ ವಾಗಿರುತ್ತಾರೆ."

ಆ ವೃದ್ಧರಲ್ಲಿ ಅವಳಿಗೆ ಮೊದಲೇ ಗೌರವ ಉಂಟಾಗಿತ್ತು. ಅವರ ಬಡತನದ ದುಃಸ್ಥಿತಿಯನ್ನು ಕೇಳಿ ಅವಳಿಗೆ ಅವರ ವಿಚಾರದಲ್ಲಿ ಕರು ಣೆಯೂ ಉಂಟಾಯಿತು. ಅವಳು ಕೂಡಲೆ ರಾಸಬಿಹಾರಿಯ ಮಾತಿಗೆ ಒಪ್ಪಿ ಸಂತೋಷದಿಂದ ಹೇಳಿದಳು—"ಅವರನ್ನು ಇಲ್ಲೇ ಇಟ್ಟುಕೊಳ್ಳಿ. ನನಗೆ ಅದರಿಂದ ಬಹಳ ಸಂತೋಷವಾಗುತ್ತೆ ಕಕ್ಕ."

ಅವಳ ಇಷ್ಟದಂತೆ ದಂಗಾಲುಬಾಬು ಬಂದು ಸಂಸಾರಸಮೇತ ಆ ಮಂದಿರದಲ್ಲೇ ಇರತೊಡಗಿದರು. ದಿನಗಳುರುಳಿದವು. ಪುಷ್ಯಮಾಸ ಮುಗಿದು ಮಾಘವೂ ಅರ್ಧ ಆಗಿಹೋಯಿತು. ಜಮೀನುದಾರಿ ಮತ್ತು ಮಂದಿರದ ಕೆಲಸಗಳು ಯಥಾಸಾಂಗವಾಗಿ ನಡೆಯುತ್ತಿದ್ದವು. ಎಲ್ಲೂ ಅಶಾಂತಿಯ ಅಥವಾ ವಿರೋಧದ ಸೂಚನೆಯೂ ತೋರಲಿಲ್ಲ.

ನರೇಂದ್ರನ ಯಾವ ಸಮಾಚಾರವೂ ತಿಳಿಯಲಿಲ್ಲ. ಅವನ ವಿಚಾರ ತಿಳಿಯಬೇಕಾದದ್ದಾದರೂ ಏನು? ಎರಡು ದಿನದ ಮಟ್ಟಿಗೆ ಅವನು ಈ ಊರಿಗೆ ಬಂದಿದ್ದ. ಆಮೇಲೆ ಹೊರಟುಹೋದ. ಆದರೂ ಆ ಸೂಕ್ಷ್ಮ ದರ್ಶಿನಿಯ ಕಡೆ ವಿಜಯಳ ದೃಷ್ಟಿ ಹೋದಕೂಡಲೆ ಅವಳಿಗೆ ಒಂದು ರೀತಿ ವ್ಯಥೆಯಾಗುತ್ತಿತ್ತು. ಅವನಿಗೆ ಇಂತಹ ಕಷ್ಟಕಾಲದಲ್ಲಿ ಆ ಅಮೂಲ್ಯ ಪದಾರ್ಥಕ್ಕೆ ಇನ್ನೂ ಸ್ವಲ್ಪ ಹೆಚ್ಚು ಬೆಲೆಯನ್ನು ಕೊಟ್ಟಿದ್ದರೆ ಚೆನ್ನಾಗಿ ತ್ತೇನೋ ಎಂದು ಅವಳು ಯೋಚಿಸುತ್ತಿದ್ದಳು. ಇನ್ನೊಂದು ವಿಷಯದ ಸ್ಮರಣೆಯಾದಕೂಡಲೆ ಅವಳಿಗೆ ವಿಪರೀತ ಆಶ್ಚರ್ಯವಾಗುತ್ತಿತ್ತಲ್ಲದೆ ಅವಳು ನಾಚಿಕೆಯಿಂದ ತಲೆ ತಗ್ಗಿಸುತ್ತಿದ್ದಳು. ಒಂದೆರಡು ದಿನದ ಪರಿಚಯ ದಿಂದಲೇ ಅವಳಿಗೆ ಅವನಲ್ಲಿ ಅದೆಷ್ಟು ಸ್ನೇಹವುಂಟಾಯಿತು! ಸದ್ಯ ಅದು ಪ್ರಕಾಶಕ್ಕೆ ಬರಲಿಲ್ಲ. ಬಂದಿದ್ದರೆ ಆ ಮಿಥ್ಯಾಮೋಹ ಮಣ್ಣುಗೂಡುವು ದಂತೂ ನಿಶ್ಚಯವಾದದ್ದೆ. ಅದರ ಜೊತೆಗೆ ಅವಳು ಜನರಿಗೆ ಮುಖ ತೋರಿ ಸದೆ ಎಲ್ಲಿ ಅಡಕಿಕೊಂಡಿದ್ದರೂ ಅವಳ ಲಜ್ಜೆಗೆ ಕೊನೆಯಿರಲಿಲ್ಲ. ಆದ್ದ ರಿಂದ ಅವನ ನೆನಪಾದೊಡನೆಯೇ ಅವಳು ಕೂಡಲೆ ಅವನನ್ನು ಮರೆಯಲು

ಸರ್ವಪ್ರಯತ್ನವನ್ನು ಮಾಡುತ್ತಿದ್ದಳು. ಹೀಗೆಯೇ ಮಾಘವೂ ಕಳೆದು ಹೋಯಿತು.

ಫಾಲ್ಗುಣದ ಮೊದಲಲ್ಲೇ ಬಿಸಲು ಹೆಚ್ಚಾಗಿ ಎಲ್ಲಕಡೆಯೂ ಖಾಯಿಲೆ ಹರಡತೊಡಗಿತು. ದಯಾಲಬಾಬುಗಳು ಎರಡು ದಿನದಿಂದ ಹಾಸಿಗೆ ಹಿಡಿದಿದ್ದರು. ಇಂದು ವಿಜಯಳು ಅವರನ್ನು ನೋಡಿಬರಲು ಬಟ್ಟೆ ಹಾಕಿಕೊಂಡು ಸಿದ್ಧಳಾಗಿ ಕೆಳಗಿಳಿದಳು. ಅವಳ ವೃದ್ಧ ಸೇವಕ ಕನ್ನಯ್ಯಸಿಂಹ ಲಾಠೀ ತರಲು ಕೋಣೆಯೊಳಗೆ ಹೋದ. ಅವಳು ಹೊರಗಿನ ಕೋಣೆಯಲ್ಲಿ ಕುಳಿತು ಚಹ ಕುಡಿಯುತ್ತಿದ್ದಳು.

" ನಮಸ್ಕಾ........ರ ! "

ವಿಜಯಳು ಚಕಿತಳಾಗಿ ಮುಖವೆತ್ತಿ ನೋಡಿದಳು. ನರೇಂದ್ರ ಕೋಣೆಯಲ್ಲಿ ಕಾಲಿಡುತ್ತಿದ್ದ.

ಅವಳ ಕೈಯಲ್ಲಿದ್ದ ಬಟ್ಟಲು ಕೈಯಲ್ಲೇ ಉಳಿಯಿತು. ಅವಳು ದೆವ್ವ ಬಡೆದವಳಂತೆ ಕಣ್ಣರಳಿಸಿ ನೋಡುತ್ತ ಕುಳಿತಳು. ಪ್ರತಿನಮಸ್ಕಾರವನ್ನೂ ಮಾಡಲಿಲ್ಲ. ಅವನನ್ನು ಕುಳಿತುಕೊಳ್ಳುವಂತೆಯೂ ಹೇಳಲಿಲ್ಲ.

ಒಂದು ಕುರ್ಚಿಗೆ ತನ್ನ ಕೋಲನ್ನು ಒರಗಿಸಿ ಇನ್ನೊಂದು ಕುರ್ಚಿಯನ್ನೆಳೆದುಕೊಂಡು ಅವನು ಅದರ ಮೇಲೆ ಕುಳಿತು ಹೇಳಿದ—" ನನಗೂ ಇನ್ನೂ ಇದು ಆಗಿಲ್ಲ. ಇನ್ನೂ ಒಂದು ಲೋಟ ಚಹ ತರುವಂತೆ ಹೇಳಿ,"

' ಆಗಲಿ ' ಎಂದು ವಿಜಯಳು ಕೈಯಲ್ಲಿದ್ದ ಚಹದ ಬಟ್ಟಲನ್ನು ಮೇಜದ ಮೇಲಿಟ್ಟು ಹೊರಗೆ ಹೋದಳು. ಕಾಲೀಪದನಿಗೆ ಹೇಳಿ ಅವಳು ಕೂಡಲೇ ಬರಲಾಗಲಿಲ್ಲ. ಅವಳು ಮಹಡಿಯ ಮೆಟ್ಟಲಿನ ಕಂಬಿಯನ್ನು ಹಿಡಿದು ಸುಮ್ಮನೆ ನೋಡುತ್ತ ನಿಂತುಬಿಟ್ಟಳು. ಸಮುದ್ರದ ಮೇಲೆ ಬಿರುಗಾಳಿ ಬೀಸಿದಂತೆ ಅವಳ ಹೃದಯ ಅಲ್ಲೋಲಕಲ್ಲೋಲವಾಗಿ ಹುಚ್ಚಾಯಿತು. ಮನುಷ್ಯನ ಹೃದಯ ಯಾವ ಕಾರಣದಿಂದೇ ಆಗಲಿ ಹೀಗೆ ಪ್ರಕ್ಷುಬ್ಧವಾಗುತ್ತೆಂದು ಅವಳು ತಿಳಿದಿರಲಿಲ್ಲ.

ಆದರೂ ಈ ಹೃದಯದಲ್ಲಿ ಆಂದೋಲನ ಶಾಂತವಾಗದಿದ್ದರೆ ತಾನು ಯಾರೊಂದಿಗೂ ಶಾಂತರೀತಿಯಲ್ಲಿ ಮಾತಾಡುವುದು ಸಾಧ್ಯವಿಲ್ಲವೆಂದು ಅವಳು ಯೋಚಿಸಿದಳು. ಐದಾರು ನಿಮಿಷಗಳು ಹೀಗೇ ಯೋಚಿಸಿದ

ಮೇಲೆ ಕಾಲೀಪದ ಚಹವನ್ನು ತೆಗೆದುಕೊಂಡುಹೋಗುತ್ತಿದ್ದುದನ್ನು ನೋಡಿ ತಾನೂ ಅವನ ಹಿಂದೆ ಕೋಣೆಯನ್ನು ಹೊಕ್ಕಳು.

ಕಾಲೀಪದ ಹೊರಗೆ ಹೋದಮೇಲೆ ವಿಜಯಳ ಮುಖ ನೋಡಿ, ನರೇಂದ್ರ ಹೇಳಿದ—"ನೀವು ಹೊರಗೆ ಹೊರಟಿದ್ದಿರಿ. ನಿಮಗೆ ನಾನು ತೊಂದರೆಕೊಟ್ಟಿದ್ದಕ್ಕಾಗಿ ನಿಮಗೆ ಬಹಳ ಬೇಸರವಾಗಿರಬಹುದು. ಆದಗೆ ನಾನು ಐದುನಿಮಿಷಗಳಿಗಿಂತ ಹೆಚ್ಚಾಗಿ ತಿಗೆದುಕೊಳ್ಳುವುದಿಲ್ಲ."

"ಹುಂ, ಮೊದಲು ಚಹ ಕುಡಿಯಿರಿ." ಅವಳ ದೃಷ್ಟಿ ಪಶ್ಚಿಮದ ಕಿಟಕಿಯ ಕಡೆ ಹೋದ ಕೂಡಲೆ ಅವಳು ಆಶ್ಚರ್ಯದಿಂದ ಕೇಳಿದಳು—"ಆ ಕಿಟಕಿಯನ್ನು ಯಾರು ತೆರೆದರು ?"

"ಯಾರೂ ಅಲ್ಲ. ನಾನೇ."

"ಹೇಗೆ ತೆಗೆದಿರಿ ?"

"ಎಲ್ಲರೂ ಹೇಗೆ ತೆಗೆಯುತ್ತಾರೋ ಹಾಗೇ........ಎಳೆದು ತೆರೆದೆ. ಏಕೆ ಏನಾದರೂ ಅಪರಾಧವಾಯಿತೇ ?"

"ಉಹುಂ" ವಿಜಯಳು ತಲೆಯಲ್ಲಾಡಿಸಿ ಸ್ವಲ್ಪಹೊತ್ತು ಅವನ ತೆಳುವಾದ ಬೆರಳುಗಳನ್ನು ನೋಡುತ್ತಿದ್ದು ಹೇಳಿದಳು—"ನಿಮ್ಮ ಬೆರಳು ಗಳು ಕಬ್ಬಿಣದಿಂದ ಮಾಡಿದ್ದೋ ? ಈ ಕಿಟಕಿ ಬಾಗಿಲು ಹಾಕಿಬಿಟ್ಟಮೇಲೆ ಅದನ್ನು ಹಿಂದಿನಿಂದ ಬಲವಾಗಿ ಒದ್ದಹೊರತು, ಸುಮ್ಮನೆ ಎಳೆದು ತೆರೆದವ ರನ್ನೇ ನಾನು ನೋಡಲಿಲ್ಲ."

ಇದನ್ನು ಕೇಳಿ ನರೇಂದ್ರ ಕೇಕೆಹಾಕಿ ನಕ್ಕ. ಹಿಂದೂ ಇಂಥಹ ನಗುವಿನ ನೆನಪಾಗಿ ವಿಜಯಳ ಮೈ ನಿಮಿರಿತು. ನಕ್ಕು ನರೇಂದ್ರ ಸರಳ ವಾಗಿ ಹೇಳಿದ—"ನನ್ನ ಬೆರಳುಗಳು ಬಹಳ ಕಠೋರವಾದುವು. ನಾನಾರ ಕೈಯನ್ನಾದರೂ ಹಿಡಿದರೆ ಅವರ ಕೈಯೇ ಮುರಿದುಹೋಗುತ್ತೆ."

ವಿಜಯಳು ನಗುವನ್ನು ತಡೆದು ಗಂಭೀರವಾಗಿ ಹೇಳಿದಳು—"ನಿಮ್ಮ ತಲೆ ಇನ್ನೂ ಗಟ್ಟಿ. ಢಿಕ್ಕಿ ಹೊಡೆದರೆ........"

ಆ ಮಾತಿನ್ನೂ ಮುಗಿಯುವುದರೊಳಗೇ ನರೇಂದ್ರ ಮತ್ತೊಮ್ಮೆ ಗಟ್ಟಿಯಾಗಿ ನಕ್ಕ. ಅವನ ನಗುವಿನಲ್ಲಿದ್ದ ಸರಳತೆ, ಮಧುರ ಹಾಸ್ಯ ಎಂತಹ ಆಕರ್ಷಣೀಯವಾಗಿತ್ತು.

ನರೇಂದ್ರ ಜೇಬಿನಿಂದ ಇನ್ನೂರು ರುಪಾಯಿ ನೋಟನ್ನು ತೆಗೆದು

ಮೇಜಿನ ಮೇಲಿಟ್ಟು ಹೇಳಿದ—“ಇದಕ್ಕೋಸ್ಕರವೇ ಬಂದೆ. ನಾನು ಸುಳ್ಳು ಹೇಳುವವ, ಮೋಸಗಾರ, ವಂಚಕನೆಂದು ಈ ಸ್ವಲ್ಪ ಹಣಕ್ಕೆ ನೀವು ಹೇಳಿಕಳುಹಿಸಿದ್ದಿರಿ. ನಿಮ್ಮ ರುಪಾಯನ್ನು ತೆಗೆದುಕೊಂಡು ನನ್ನ ಸಾಮಾನನ್ನು ನನಗೆ ವಾಪಸುಕೊಡಿ.”

ವಿಜಯಳ ಮುಖ ಒಂದು ಕ್ಷಣದಲ್ಲಿ ನಸುಗೆಂಪಾಯಿತು. ಆದರೆ ಕೂಡಲೆ ಅದನ್ನು ತೋರಗೊಡದೆ ಹೇಳಿದಳು—“ಇನ್ನೇನೇನು ಹೇಳಿಕಳುಹಿಸಿದ್ದೆ? ಹೇಳಿ.”

“ಅದೆಲ್ಲ ನನಗೆ ನೆನಪಿಲ್ಲ. ಅದನ್ನು ತರುವಂತೆ ಹೇಳಿ. ನಾನು ಒಂಭತ್ತೂವರೆ ಗಂಟೆಯ ಗಾಡಿಗೆ ಕಲಿಕತ್ತೆಗೆ ಹೋಗಬೇಕಾಗಿದೆ. ನನಗೆ ಕಲಿಕತ್ತೆಯಲ್ಲೇ ಕೆಲಸವಾದದ್ದು ಅನುಕೂಲವಾಯಿತು. ನಾನು ಅಷ್ಟು ದೂರ ಹೋಗಬೇಕಾಗಿ ಬರಲಿಲ್ಲ.”

ವಿಜಯಳ ಮುಖ ಉಜ್ವಲವಾಯಿತು. “ನಿಮ್ಮ ಅದೃಷ್ಟ ಒಳ್ಳೆಯದು.” ಅವಳು ಹೇಳಿದಳು.

“ಹೌದು, ನನಗೆ ಸಮಯವಿಲ್ಲ. ಗಂಟೆ ಒಂಭತ್ತು ಹೊಡೆಯುತ್ತಿದೆ.”

ಒಂದು ಕ್ಷಣದಲ್ಲೇ ವಿಜಯಳ ಮುಖ ಸಪ್ಪಗಾಯಿತು. ಆದರೆ ನಗೇಂದ್ರ ಆಕಡೆ ಗಮನ ಕೊಡಲಿಲ್ಲ. “ನಾನೀಗಲೇ ಹೋಗಬೇಕು........ ಅದನ್ನು ತರುವಂತೆ ಹೇಳಿ” ಅವನು ಹೇಳಿದ.

ವಿಜಯಳು ಅವನನ್ನು ನೋಡಿ ಹೇಳಿದಳು—“ನೀವು ದಯಮಾಡಿ ಹಣ ಜೊತೆಮಾಡಿ ತಂದಿದ್ದೀರಿ. ಆದ್ದರಿಂದ ಕೂಡಲೆ ನಾನು ಆ ಪದಾರ್ಥವನ್ನು ತಂದುಕೊಡಬೇಕೆಂದು ಕರಾರಾಗಿತ್ತೆ?”

ನರೇಂದ್ರ ಸಂಕೋಚದಿಂದ ಹೇಳಿದ—“ಉಹುಂ, ಹಾಗೇನೂ ಆಗಿರಲಿಲ್ಲ. ಆದರೆ ನಿಮಗೆ ಅದರ ಅಗತ್ಯವೇನೂ ಇಲ್ಲವಲ್ಲ”

“ಈಗ ಇಲ್ಲದಿದ್ದರೆ, ಇನ್ನೆಂದಿಗೂ ಅದರ ಅಗತ್ಯವಿರುವುದಿಲ್ಲವೆಂದ ಹಾಗಾಯಿತೇ?”

“ನಿಮಗೆ ಅದು ಯಾವಾಗಲೂ ಉಪಯೋಗವಾಗುವುದಿಲ್ಲ. ಆದರೆ ನನಗೆ........”

“ಆದರೆ ಅದನ್ನು ಕೊಟ್ಟು ಹೋಗುವಾಗ ಇದರಿಂದ ನನಗೆ ಬಹಳ

ಉಪಕಾರವಾಗುತ್ತೆಂದು ಹೇಳಿದ್ದಿರಿ. ನೀವು ಮೋಸಮಾಡುತ್ತೀರೆಂದು ನಾನು ಹೇಳಿ ಕಳುಹಿಸಿದ್ದಕ್ಕೆ ನೀವು ಸಿಟ್ಟಾದಿರಿ. ಆದರೆ ನೀವು ಆಗ ಆಡಿದ್ದು ಒಂದು ಮಾತು; ಈಗೊಂದು ಮಾತು!"

ಸಂಕೋಚದಿಂದ ನರೇಂದ್ರನ ಮುಖ ಬಾಡಿತು. ಅವನು ಸ್ವಲ್ಪ ಹೊತ್ತು ಸುಮ್ಮನಿದ್ದು ಹೇಳಿದ—"ನೀವು ಇದನ್ನು ಉಪಯೋಗ ಮಾಡುತ್ತೀರೆಂದು ನಾನು ಆಗ ತಿಳಿದಿದ್ದೆ. ಆದರೆ ಅದನ್ನು ಹೀಗೆ ಸುಮ್ಮನೆ ಇಟ್ಟಿರುತ್ತೀರೆಂದು ತಿಳಿದಿರಲಿಲ್ಲ. ಹೋಗಲಿ, ನೀವು ಸಾಮಾನುಗಳನ್ನು ಅಡವಿಟ್ಟುಕೊಂಡು ಹಣ ಕೊಡುವುದಿಲ್ಲವೇ? ಇದನ್ನೂ ಹಾಗೇ ತಿಳಿಯಬಾರದೇಕೆ? ನಾನು ಈ ಹಣಕ್ಕೆ ಬೇಕಾದರೆ ಬಡ್ಡಿ ಕೊಡುತ್ತೇನೆ."

"ಎಷ್ಟು ಬಡ್ಡಿ ಕೊಡುತ್ತೀರಿ?"

"ನ್ಯಾಯವಾದ ಬಡ್ಡಿ ಕೊಡುತ್ತೇನೆ."

"ಉಹುಂ, ನನಗೆ ಬೇಡ. ಇದನ್ನು ಕಲಿಕತ್ತೆಯಲ್ಲಿ ನಾನೂರು ರುಪಾಯಿಗೆ ಸುಖವಾಗಿ ಮಾರಬಹುದು."

ನರೇಂದ್ರ ಕೂಡಲೆ ಎದ್ದು ನಿಂತು ಹೇಳಿದ—"ಹಾಗಾದರೆ ಹಾಗೇ ಮಾಡಿ ಹೋಗಿ; ನನಗೇನೂ ಅದರ ಅಗತ್ಯವಿಲ್ಲ. ಇನ್ನೂರು ರುಪಾಯಿಗೆ ನಾನೂರು ರುಪಾಯಿ ಅಪೇಕ್ಷಿಸುವವರೊಂದಿಗೆ ಯಾವ ಮಾತಾಡುವುದಕ್ಕೂ ನನಗೆ ಇಷ್ಟವಿಲ್ಲ."

ಬಹಳ ಪ್ರಯತ್ನದಿಂದ ವಿಜಯಳು ಮುಖ ತಗ್ಗಿಸಿ ನಗು ತಡೆದುಕೊಂಡು, ಸ್ವಲ್ಪ ಹೊತ್ತಿನಮೇಲೆ ಮುಖವೆತ್ತಿ ನೋಡಿದಳು. ಆಗ ಅವಳ ಮನೋಭಾವ ಅವಳ ಮುಖದಮೇಲೆ ಸ್ಪಷ್ಟವಾಗಿ ಕಾಣುತ್ತಿತ್ತು. ನರೇಂದ್ರನೊಬ್ಬನ ಹೊರತು ಇನ್ನಾರ ಮುಂದೂ ಅವಳ ಮುಖಭಾವ ಸ್ಪಷ್ಟವಾಗುತ್ತಿರಲಿಲ್ಲ. ಆದರೆ ನರೇಂದ್ರನ ದೃಷ್ಟಿ ಅವಳ ಕಡೆ ಇರಲಿಲ್ಲ. ಅವನು ತೀಕ್ಷ್ಣವಾಗಿ ಹೇಳಿದ—"ನೀವು ಷೈಲಾಕಿನಂತೆಂದು ಮೊದಲೆ ನನಗೆ ಗೊತ್ತಿದ್ದರೆ, ನಾನೆಂದಿಗೂ ಇಲ್ಲಿಗೆ ಬರುತ್ತಿರಲಿಲ್ಲ."

ವಿಜಯಳು ಏನೂ ತಿಳಿಯದವಳಂತೆ ಹೇಳಿದಳು—"ಸಾಲಕ್ಕಾಗಿ ನಿಮ್ಮ ಸರ್ವಸ್ವವನ್ನೂ ನಾನು ಕಸಿದುಕೊಂಡಾಗಲೇ ನಿಮಗೆ ತಿಳಿಯಲಿಲ್ಲವೇ?"

"ಇಲ್ಲ. ಏಕೆಂದರೆ ಅದರಲ್ಲಿ ನಿಮ್ಮ ಕೈವಾಡವೇನೂ ಇರಲಿಲ್ಲ.

ನನ್ನ ತಂದೆ ಮತ್ತು ನಿಮ್ಮ ತಂದೆಯವರೇ ಆ ಕೆಲಸ ಮಾಡಿಹೋಗಿದ್ದರು. ಅದಕ್ಕಾಗಿ ನಾವೆಂದಿಗೂ ತಪ್ಪಿತಸ್ಥರಲ್ಲ. ಉಂ, ಸರಿ; ನಾನಿನ್ನು ಹೊರಟೆ."

"ಊಟ ಮಾಡಿ ಹೋಗುವುದಿಲ್ಲವೇ?"

"ಉಹುಂ, ಊಟಕ್ಕಾಗಿ ಬರಲಿಲ್ಲ." ನರೇಂದ್ರ ಸ್ವಲ್ಪ ಒರಟಾಗಿಯೇ ಹೇಳಿದ.

ವಿಜಯಳು ಶಾಂತಳಾಗೇ ಹೇಳಿದಳು—"ನೀವು ಡಾಕ್ಟರು. ನಿಮಗೆ ಕೈ ನೋಡಲು ಬರುತ್ತದೆಯೇ?"

ಅವಳ ತುಟಿಯ ಮೇಲೊಂದು ತುಂಟ ನಗೆಯನ್ನು ನೋಡಿ ನರೇಂದ್ರನ ಸಿಟ್ಟು ಇಮ್ಮಡಿಸಿ ಹೇಳಿದ—"ನೀವು ನನ್ನನ್ನು ಹಾಸ್ಯ ಮಾಡುತ್ತಿದ್ದೀರಾ? ನಿಮ್ಮ ಹತ್ತಿರ ಹಣದ ರಾಶಿಯಿರಬಹುದು. ಆದರೆ ಅದರಿಂದ ನಿಮಗೀ ಅಧಿಕಾರ ಬರುವುದಿಲ್ಲ, ತಿಳಿಯಿರಿ. ಸ್ವಲ್ಪ ಯೋಚನೆ ಮಾಡಿ ಮಾತಾಡಿ" ಎಂದು ಅವನು ತನ್ನ ಕೋಲನ್ನು ತೆಗೆದುಕೊಂಡ.

"ಇಲ್ಲದಿದ್ದಾಗೆ, ನಿಮ್ಮ ತೋಳಿನಲ್ಲಿ ಶಕ್ತಿ ಇದೆ; ಕೈಯಲ್ಲಿ ಕೋಲಿದೆ ಅಲ್ಲವೇ?" ವಿಜಯಳು ಹೇಳಿದಳು.

ನರೇಂದ್ರ ಕೋಲನ್ನೆಸೆದು ಕುರ್ಚಿಯ ಮೇಲೆ ಕುಕ್ಕರಿಸಿ ಹೇಳಿದ—"ಥೂ, ನೀವು ಬಾಯಿಗೆ ಬಂದಂತೆ ಮಾತಾಡುತ್ತೀರಿ. ನಿಮ್ಮನ್ನು ಗೆಲ್ಲುವುದಕ್ಕಾಗುವುದಿಲ್ಲ."

"ಆದರೆ ನೋಡಿ, ಈ ಮಾತನ್ನು ಮಾತ್ರ ನೆನಪಿಟ್ಟುಕೊಳ್ಳಿ" ಎಂದು ಅವಳು ನಗುವನ್ನು ತಡೆಯಲಾರದೆ ಕೂಡಲೆ ಹೊರಗೆದ್ದು ಹೋದಳು.

ಆ ಕೋಣೆಯಲ್ಲಿ ಒಂಟಿಯಾಗಿ ನರೇಂದ್ರ ದಿಕ್ಕು ತೋಚದಂತೆ ಕುಳಿತಿದ್ದು, ತನ್ನ ಕೋಲನ್ನು ಕೈಯಲ್ಲಿ ಹಿಡಿದು ಎದ್ದು ನಿಲ್ಲುತ್ತಿದ್ದಂತೆಯೇ ವಿಜಯಳು ಕೋಣೆಯಲ್ಲಿ ಕಾಲಿಡುತ್ತಾ ಹೇಳಿದಳು—"ನಿಮಗೋಸ್ಕರವೇ ಇಷ್ಟು ಹೊತ್ತಾಯಿತು; ನಿಮಗೂ ತಡವಾಯಿತು. ನಿಮಗೆ ಕೈ ನೋಡುವುದಕ್ಕೆ ಬರುತ್ತಲ್ಲವೇ? ನನ್ನ ಜೊತೆಗೆ ನಡೆಯಿರಿ."

ಇದರಲ್ಲಿ ನಂಬಿಕೆಯಿಲ್ಲದಿದ್ದರೂ ನರೇಂದ್ರ ಕೇಳಿದ—"ಎಲ್ಲಿಗೆ ಹೋಗಬೇಕು?"

ಅವನ ಮುಖ ನೋಡಿ ವಿಜಯಳು ಗಂಭೀರಳಾಗಿ ಹೇಳಿದಳು— "ಇಲ್ಲಿ ಒಳ್ಳೆಯ ಡಾಕ್ಟರಿಲ್ಲ. ನಮ್ಮಲ್ಲಿ ಬಂದಿರುವ ಆ ಹೊಸ ಆಚಾರ್ಯರಲ್ಲಿ ನನಗೆ ಬಹಳ ಗೌರವ. ಈಗ ಎರಡು ದಿನಗಳಿಂದ ಅವರಿಗೆ ಬಹಳ ಜ್ವರ ಬಂದಿದೆ. ಅವರನ್ನೊಮ್ಮೆ ನೋಡಿ ಬರೋಣ ಬನ್ನಿ."

"ಸರಿ, ನಡೆಯಿರಿ."

"ಹಾಗಾದರೆ ಸ್ವಲ್ಪ ನಿಲ್ಲಿ. ಆ ಪರೇಶ ನಿಮಗೆ ಗೊತ್ತಿಲ್ಲವೇ? ಮನ್ನೆಯಿಂದ ಅವನಿಗೂ ಜ್ವರ. ಅವನನ್ನು ಇಲ್ಲಿಗೆ ಕರೆದುಕೊಂಡು ಬರುವಂತೆ ಅವನಮ್ಮನಿಗೆ ಹೇಳಿದ್ದೇನೆ."

ಅಷ್ಟರಲ್ಲೇ ಪರೇಶನ ತಾಯಿ ಅವನನ್ನು ಕರೆದುಕೊಂಡು ಬಾಗಿಲ ಹತ್ತಿರ ಬಂದಳು. ನರೇಂದ್ರ ಆಕಡೆ ನೋಡಿ ಹೇಳಿದ—"ನಿಮ್ಮ ಮಗನನ್ನು ಕರೆದುಕೊಂಡು ಹೋಗಮ್ಮ. ನಾನವನನ್ನು ನೋಡಿಯಾಯಿತು."

ಆದರೆ ಆ ಹುಡುಗನ ತಾಯಿ ಮತ್ತು ವಿಜಯಳಿಬ್ಬರೂ ಇದನ್ನು ಕೇಳಿ ಚಕಿತರಾದರು. ತಾಯಿ ದೀನಸ್ವರದಲ್ಲಿ ಹೇಳಿದಳು—"ಮೈಯಲ್ಲೆಲ್ಲಾ ವಿಪರೀತ ಚಳಕಿದೆ ಬಾಬು. ಸ್ವಲ್ಪ ನಾಡಿ ನೋಡಿ ಔಷಧ ಕೊಟ್ಟರೆ........"

"ನನಗೆ ತಿಳಿಯಿತಮ್ಮ. ಅವನನ್ನು ಕರೆದುಕೊಂಡು ಹೋಗು· ಗಾಳಿಗೆ ಬಿಡಬೇಡ; ನಾನು ಔಷಧವನ್ನು ಕೊಟ್ಟು ಕಳುಹಿಸುತ್ತೇನೆ."

ತಾಯಿ ಸ್ವಲ್ಪ ದುಃಖದಿಂದ ಮಗನನ್ನು ಕರೆದುಕೊಂಡು ಹೋದಳು. ನರೇಂದ್ರ ಆಶ್ಚರ್ಯದಿಂದಿದ್ದ ವಿಜಯಳ ಮುಖ ನೋಡಿ ಹೇಳಿದ—"ಈಕಡೆ ಸಿಡುಬಿನ ಗದ್ದಲ ಬಹಳವಾಗಿದೆ. ಈ ಹುಡುಗನ ಮುಖದ ಮೇಲೂ ಅದೇ ಚಿನ್ಹೆ ಇದೆ. ಆದ್ದರಿಂದ ಸ್ವಲ್ಪ ಎಚ್ಚರಿಕೆಯಿಂದ ನೋಡಿಕೊಳ್ಳುವಂತೆ ಹೇಳಿ."

ವಿಜಯಳ ಮುಖ ಕಪ್ಪಿಟ್ಟು ಅವಳು ಹೇಳಿದಳು—"ಸಿಡುಬೇ! ಸಿಡುಬೇಕೆ ಎದ್ದಿತು?"

"ಏಕೆಂದರೆ ಅದೊಂದು ದೊಡ್ಡ ಕತೆ. ಅದಂತೂ ಹರಡಿದೆ. ಇವತ್ತು ಸರಿಯಾಗಿ ಕಾಣಿಸದಿದ್ದರೂ, ನಾಳೆಯಂತೂ ಸ್ಪಷ್ಟವಾಗಿ ಕಾಣಿಸುತ್ತದೆ. ಇನ್ನು ನಿಮ್ಮ ಆಚಾರ್ಯರನ್ನೂ ನೋಡುವ ಅಗತ್ಯವಿಲ್ಲವೆಂದು ತೋರುತ್ತೆ. ಅವನ ತಾಯಿಗೂ ನಾಳೆಯೊಳಗೆ ಸ್ಪಷ್ಟವಾಗಿ ಗೊತ್ತಾಗುತ್ತದೆ."

ಭಯದಿಂದ ವಿಜಯಳ ಮೈ ನಡುಗಿತು. ಅವಳು ಕಲ್ಲಿನಂತಾಗಿ ಕುರ್ಚಿಯ ಮೇಲೆ ಕುಕ್ಕರಿಸಿ ಮೆಲ್ಲಗೆ ಹೇಳಿದಳು—"ನನಗೂ ಸಿಡುಬು ಏಳುತ್ತೆ ನರೇಂದ್ರಬಾಬು. ನನಗೂ ನಿನ್ನೆ ರಾತ್ರಿ ಜ್ವರ ಬಂದಿತ್ತು : ನನಗೂ ಮೈಯಲ್ಲೆಲ್ಲ ವಿಪರೀತ ಚಳುಕಿದೆ."

ನರೇಂದ್ರ ನಕ್ಕು ಹೇಳಿದ—"ಚಳುಕು ವಿಪರೀತವಲ್ಲ. ನಿಮ್ಮ ಭಯ ವಿಪರೀತವಾಗಿದೆ. ಸ್ವಲ್ಪ ಜ್ವರ ಬಂದ ಮಾತ್ರಕ್ಕೆ ಏನಾಯಿತು? ಸುತ್ತ ಮುತ್ತಲೂ ಸಿಡುಬು ಇದೆಯೆಂದ ಮಾತ್ರಕ್ಕೆ ಎಲ್ಲರಿಗೂ ಸಿಡುಬೇಳುತ್ತೆಂದ ಹಾಗಾಯಿತೇ?"

ವಿಜಯಳ ಕಣ್ಣು ಹನಿಗೂಡಿತು. ಅವಳು ಹೇಳಿದಳು—"ಸಿಡು ಬೆದ್ದರೆ ನನ್ನನ್ನು ನೋಡಿಕೊಳ್ಳುವವರಾರು? ನನ್ನವರಾಗಿ ಯಾರಿದ್ದಾರೆ?"

ನರೇಂದ್ರ ಮತ್ತೊಮ್ಮೆ ನಕ್ಕು ಹೇಳಿದ—"ನೋಡಿಕೊಳ್ಳುವವರು ಬೇಕಾದಹಾಗಿದ್ದಾರೆ. ಅದಕ್ಕೇನೂ ಯೋಚನೆಯಿಲ್ಲ. ನಿಮಗೇನೂ ಆಗು ವುದಿಲ್ಲ."

ವಿಜಯಳು ಹತಾಶಭಾವದಿಂದ ತಲೆಯಲ್ಲಾಡಿಸುತ್ತಾ ಹೇಳಿದಳು—"ಆಗದಿದ್ದರೆ ಸಾಕು ಸದ್ಯ. ನಿನ್ನೆ ರಾತ್ರಿ ನಿಜವಾಗಿಯೂ ನನಗೆ ಬಹಳ ಜ್ವರ ಬಂದಿತ್ತು. ಆದರೂ ಬೆಳಿಗ್ಗೆ ಎದ್ದು ಅದಕ್ಕೆ ಗಮನ ಕೊಡದೆ ದಯಾಳಬಾಬುಗಳನ್ನು ನೋಡಲು ಹೊರಟಿದ್ದೆ. ಈಗಲೂ ನನಗೆ ಸ್ವಲ್ಪ ಜ್ವರವಿದೆ. ನೋಡಿ" ಎಂದು ಅವಳು ತನ್ನ ಬಲಗೈಯನ್ನು ಮುಂದೆ ಚಾಚಿ ದಳು. ನರೇಂದ್ರ ಅವಳ ಕೋಮಲವಾದ ಕೈಯನ್ನು ತನ್ನ ಶಕ್ತಿಯುತ ಕೈಯಲ್ಲಿ ತೆಗೆದುಕೊಂಡು ಸ್ವಲ್ಪಹೊತ್ತು ಹಿಡಿದಿದ್ದು ಆಮೇಲೆ ಬಿಟ್ಟುಬಿಟ್ಟು ಹೇಳಿದ—"ಇವತ್ತೇನೂ ಊಟ ಮಾಡಬೇಡಿ : ಸುಮ್ಮನೆ ಮಲಗಿಕೊಳ್ಳಿ : ಏನೂ ಭಯವಿಲ್ಲ. ನಾಳೆ ನಾಡಿದ್ದರಲ್ಲಿ ನಾನು ಮತ್ತೊಮ್ಮೆ ಬರುತ್ತೇನೆ."

"ನಿಮ್ಮ ದಯೆ" ಎಂದು ವಿಜಯಳು ಕಣ್ಣು ಮುಚ್ಚಿಕೊಂಡು ಸುಮ್ಮ ನಾದಳು. ಆದರೆ ಇದು ಬಾಣದಂತೆ ನರೇಂದ್ರನ ಹೃದಯದಲ್ಲಿ ನಾಟಿತು. ಅವನು ಅದಕ್ಕೇನೂ ಉತ್ತರ ಹೇಳದಿದ್ದರೂ ತನ್ನ ಕೋಲನ್ನು ಹಿಡಿದು ಹೊರಗೆ ಬಂದಾಗ ಅವನ ಮನಸ್ಸು ಅವಳ ದೀನಮುದ್ರೆಯನ್ನು ನೆನಸಿ ಕೊಂಡು ಅಲ್ಲೋಲಕಲ್ಲೋಲವಾಯಿತು.

ಮರುದಿನ ಕೆಲಸಗಳಿದುದರಿಂದ ಅವನು ಕಲಿಕತೆಗೆ ಹೋಗುವಾಗ

ಲಿಲ್ಲ. ಅದರ ಮರುದಿನ ಬೆಳಿಗ್ಗೆ ಒಂಭತ್ತು ಗಂಟೆಯ ಹೊತ್ತಿಗೆ ಅವನು ವಿಜಯಳ ಮನೆಯ ಬಾಗಿಲಿನಲ್ಲಿ ಕಾಲಿಡುತ್ತಿದ್ದಂತೆ ಕಾಲೀಪದ ಜಾಗ್ರತೆಯಾಗಿ ಬಂದು ಹೇಳಿದ—" ಬಾಬು, ಅಮ್ಮಾವ್ರಿಗೆ ಬಹಳ ಖಾಯಿಲೆ ಸ್ವಲ್ಪ ಮೇಲೆ ಹೋಗಿ ನೋಡಿ."

ನರೇಂದ್ರ ಮಹಡಿ ಹತ್ತಿ ವಿಜಯಳ ಕೋಣೆಯಲ್ಲಿ ಕಾಲಿಟ್ಟಾಗ, ಹೆಚ್ಚಾದ ಜ್ವರದಿಂದ ವಿಜಯಳು ಹಾಸಿಗೆಯ ಮೇಲೆ ಮಲಗಿ ಒದ್ದಾಡುತ್ತಿದ್ದಳು. ಒಬ್ಬ ವಯಸ್ಕ ಹೆಂಗಸು ಮುಖದ ಮೇಲೆ ಮುಸುಕು ಹಾಕಿಕೊಂಡು ಅವಳ ತಲೆಯ ಹತ್ತಿರ ಕುಳಿತು ಗಾಳಿ ಹಾಕುತ್ತಿದ್ದಳು. ಹತ್ತಿರದಲ್ಲೇ ಎರಡು ಕುರ್ಚಿಗಳ ಮೇಲೆ ರಾಸಬಿಹಾರಿ ಮತ್ತು ವಿಲಾಸಬಿಹಾರಿ ಬಹು ಗಂಭೀರವಾಗಿ ಕುಳಿತಿದ್ದರು. ನರೇಂದ್ರನ ಆಗಮನದಿಂದ ಇಬ್ಬರಲ್ಲಿ ಯಾರಿಗೂ ಸಂತೋಷವೆನಿಸಲಿಲ್ಲ. ವಿಲಾಸಬಿಹಾರಿ ಹೆಚ್ಚು ಪೀಠಿಕೆಯಿಲ್ಲದೆ ನೇರವಾಗಿ ಕೇಳಿದ—"ಮನ್ನೆ ಬಂದು ಸಿಡುಬಿನ ಭಯ ತೋರಿಸಿಹೋದವರು ನೀವೇನೋ ? "

ಈ ಸುಳ್ಳುಮಾತಿಗೆ ಕೂಡಲೆ ಯಾವ ಉತ್ತರವನ್ನೂ ಕೊಡುವಂತಿರಲಿಲ್ಲ. ಈ ಪ್ರಶ್ನೆಯನ್ನು ಕೇಳಿ ವಿಜಯಳು ತನ್ನ ಕೆಂಪಾದ ಕಣ್ಣುಗಳನ್ನು ಬಿಟ್ಟಳು. ಮೊದಲು ಏನೂ ತಿಳಿಯದವಳಂತೆ ಸುಮ್ಮನಿದ್ದು ಆಮೇಲೆ ಎರಡು ಕೈಗಳನ್ನು ಚಾಚಿ " ಬನ್ನಿ" ಎಂದಳು.

ಹತ್ತಿರ ಇನ್ನಾವ ಆಸನವೂ ಇಲ್ಲದಿದ್ದುದರಿಂದ ನರೇಂದ್ರ ಹೋಗಿ ಅವಳ ಹಾಸಿಗೆಯ ಒಂದು ಕೊನೆಯಲ್ಲಿ ಕುಳಿತ. ಒಂದು ನಿಮಿಷ ಅವಳು ಅವನ ಎರಡು ಕೈಗಳನ್ನೂ ಬಿಗಿಯಾಗಿ ಹಿಡಿದುಕೊಂಡು ಹೇಳಿದಳು— " ನೀವು ನಿನ್ನೆ ಬಂದಿದ್ದರೆ ನನಗಿವತ್ತು ಇಷ್ಟು ಜ್ವರ ಬರುತ್ತಿರಲಿಲ್ಲ. ನಾನು ನಿನ್ನೆಯೆಲ್ಲಾ ನಿಮ್ಮ ಹಾದಿಯನ್ನೇ ನೋಡುತ್ತಿದ್ದೆ."

ನರೇಂದ್ರ ಡಾಕ್ಟರಾದ್ದರಿಂದ ಜ್ವರ ಹೆಚ್ಚಿದಂತೆ ರೋಗಿಗಳು ಅದರ ಅಮಲಿನಲ್ಲಿ ಮನಬಂದಂತೆ ಅನೇಕ ಆಶ್ಚರ್ಯದ ಮಾತುಗಳಾಡುತ್ತಾರೆಂದೂ ಆರೋಗ್ಯವಾಗಿದ್ದಾಗ ಅದರ ವಿಚಾರವೇ ಇರುವುದಿಲ್ಲವೆಂದೂ ತಿಳಿಯುವುದಕ್ಕೆ ಅವನಿಗೆ ಕಷ್ಟವಾಗಲಿಲ್ಲ. ಆದರೆ ಆ ಮಾತುಗಳನ್ನು ಕೇಳಿ ಅಲ್ಲಿ ಕುಳಿತಿದ್ದ ತಂದೆ-ಮಕ್ಕಳಿಬ್ಬರೂ ಸಿಟ್ಟಿನಿಂದ ಬೆಂಕಿಯಾದರು. ನರೇಂದ್ರ

ಸರಳ ರೀತಿಯಲ್ಲಿ ಸಂತೈಸುತ್ತಾ ಹೇಳಿದ—“ ಭಯವೇನು ? ಎರಡು ದಿನ ಗಳಲ್ಲೇ ಖಾಯಿಲೆ ವಾಸಿಯಾಗುತ್ತೆ.”

ವಿಜಯಳು ಕೂಡಲೆ ಅವನ ಕೈಗಳನ್ನು ಹೃದಯದ ಹತ್ತಿರ ಎಳೆದು ಕೊಂಡು ದೀನಸ್ವರದಲ್ಲಿ ಹೇಳಿದಳು— ನನಗೆ ಗುಣವಾಗುವವರೆಗೂ ನೀವಿ ನ್ನೆಲ್ಲೂ ಹೋಗುವುದಿಲ್ಲವೆಂದು ಮಾತುಕೊಡಿ. ನೀವಿಲ್ಲದಿದ್ದರೆ ನಾನು ಉಳಿ ಯುವುದಿಲ್ಲ.”

ಇದಕ್ಕೆ ಉತ್ತರ ಕೊಡುವುದಕ್ಕೆಂದು ನರೇಂದ್ರ ಪ್ರಯತ್ನಿಸುತ್ತಿದ್ದಂತೆ ಅವನ ದೃಷ್ಟಿ ಆ ಎರಡು ಜೊತೆ ಭೀಕರ ದೃಷ್ಟಿಗಳ ಕಡೆ ಹೊರಳಿತು. ಹಸಿದ ಹುಲಿ ಹತ್ತಿರವಿರುವ ಪ್ರಾಣಿಯನ್ನು ನೋಡುವಂತೆ ವಿಲಾಸಬಿಹಾರಿ ಕೆಂಗ ಣ್ಣಿನಿಂದ ಅವನ ಕಡೆ ನೋಡುತ್ತಿದ್ದ.

೧೬

ನರೇಂದ್ರ ಅವಾಕ್ಕಾಗಿ ನೋಡುತ್ತ ಕುಳಿತ. ವಿಜಯಳ ಪ್ರಶ್ನೆಗೆ ಅವನೇನೂ ಉತ್ತರ ಕೊಡಲಾರದೆ ಹೋದ. ಕಣ್ಣಿನ ಹಿಂಸಕ ನೋಟ ಮನುಷ್ಯನೇಕೆ ಪಶುಗಳಿಗೂ ಅರ್ಥವಾಗುತ್ತೆ. ಆದ್ದರಿಂದ ನರೇಂದ್ರ ಎಷ್ಟೇ ಸಾಧು ಮನುಷ್ಯನಾದರೂ, ವ್ಯವಹಾರಜ್ಞಾನ ಅವನಿಗೆಷ್ಟೇ ಕಡಿಮೆ ಇದ್ದರೂ ಆ ತಂದೆಮಕ್ಕಳ ತೀವ್ರದೃಷ್ಟಿ ಪ್ರೀತಿಯನ್ನು ಸೂಚಿಸುವುದಂತೂ ಅಲ್ಲವೆಂದು ಅವನಿಗೆ ಚೆನ್ನಾಗಿ ಅರ್ಥವಾಯಿತು. ಅವರಿಗೆ ತನ್ನಲ್ಲಿ ವಿಶ್ವಾಸವಿಲ್ಲವೆಂದು ಅವನು ಮನಗಂಡ. ವಿಜಯಳಿಗೆ ಸೂಕ್ಷ್ಮದರ್ಶಿನಿಯನ್ನು ತೋರಿಸಲು ಬಂದಾಗ ಅವರಾಡಿದ ಅನೇಕ ಮಾತನ್ನು ಅವನು ಕಿವಿಯಾರೆ ಕೇಳಿದ್ದ. ರಾಸಬಿಹಾರಿ ಆ ಸೂಕ್ಷ್ಮದರ್ಶಿನಿಯ ಬೆಲೆಯನ್ನು ಕೊಡಲು ತನ್ನ ಮನೆಗೆ ಬಂದಾಗಲೂ ಹಿತೋಪದೇಶದ ನೆವದಲ್ಲಿ ಅವನೂ ಅನೇಕ ಕಠಿಣಮಾತು ಗಳನ್ನಾಡಿದ್ದ. ಆದರೆ ಇದರಿಂದ ವಿಜಯಳಿಗೇನೂ ಮೋಸವಾದಂತಾಗಿಲ್ಲ ವೆಂದೂ ಇನ್ನೂರು ರೂಪಾಯಿಗಳ ಬದಲು ಅದನ್ನು ನಾನೂರು ರೂಪಾಯಿ ಗಳಿಗೆ ಮಾರಬಹುದೆಂದು ತಿಳಿದಮೇಲೂ ತನ್ನ ಮೇಲೇಕೆ ಇಷ್ಟು ರೋಷ ವೆಂಬುದು ಅವನಿಗೆ ತಿಳಿಯಲಿಲ್ಲ. ಈಗ ಸಿಡುಬಿನ ಭಯ ತೋರಿಸಿಹೋದ ವಿಚಾರ ಬೇರೆ ಬಂದಿತು. ಅವನಂತೂ ಅಂತಹ ಭಯವನ್ನೇನೂ ಹುಟ್ಟಿ ಸಿರಲಿಲ್ಲ. ಅದರ ಬದಲು ಅವನಿನ್ನೂ ಧೈರ್ಯ ಹೇಳಿದ್ದ. ಈ ಸುಳ್ಳು ಸುದ್ದಿಯನ್ನು ಹರಡಿದವರಾರು ? ಅದನ್ನು ವಿಜಯಳೇ ಹೇಳಿದಳೇ ಎಂಬು

ದನ್ನು ತಿಳದುಕೊಳ್ಳುವುದಕ್ಕೆ ಮುಂಚೆಯೇ ವಿಲಾಸಬಿಹಾರಿ ಮತ್ತೊಮ್ಮೆ ಚೀರಿದ. ಏನು ನಡೆಯುತ್ತಿದೆಯೆಂಬ ಕುತೂಹಲದಿಂದ ಕಾಲೀಪದ ಪರದೆಯಲ್ಲಿ ಇಣಿಕಿಹಾಕಿ ನೋಡುತ್ತಿದ್ದ. ವಿಲಾಸ ಅವನ ಮುಖ ನೋಡಿ ಹಿಂದಿಯಲ್ಲೇ ಕೂಗಿದ. ಹಿಂದಿಯಲ್ಲಿ ಮಾತಿನ ಜೋರು ಹೆಚ್ಚೆಂದು ತೋರುತ್ತೆ. "ಲೋ ಕತ್ತೆ, ಒಂದು ಕುರ್ಚಿ ತೊಗೊಂಡು ಬಾ."

ಕೋಣೆಯಲ್ಲಿದ್ದವರೆಲ್ಲ ಬೆಚ್ಚಿಬಿದ್ದರು. ಕಾಲೀಪದನಿಗೆ "ಕತ್ತೆ", "ತೊಗೊಂಡು ಬಾ" ಎಂಬ ಎರಡು ಪದಗಳು ಮಾತ್ರ ತಿಳಿಯಿತು. ಏನೆಂಬುದು ಅರ್ಥವಾಗದೆ ಅವನು ಕಕ್ಕಾಬಿಕ್ಕಿಯಾಗಿ ನೋಡಹತ್ತಿದ. ವೃದ್ಧ ರಾಸಬಿಹಾರಿ ಸುದಾರಿಸಿಕೊಂಡು ಗಂಭೀರವಾಗಿ ಹೇಳಿದ—"ಆ ಕೋಣೆಯಿಂದ ಒಂದು ಕುರ್ಚಿ ತಂದು, ಬಾಬುಗಳಿಗೆ ಹಾಕು." ಕಾಲೀಪದ ಜಾಗ್ರತೆಯಾಗಿ ಹೋದಕೂಡಲೆ ಅವನು ಮಗನ ಕಡೆ ತಿರುಗಿ ಶಾಂತ ಸ್ವರದಲ್ಲಿ ಹೇಳಿದ—"ಇದು ಖಾಯಿಲೆಯವರಿರುವ ಕೋಣೆ. ಅಷ್ಟು ದುಡುಕಬೇಡ ವಿಲಾಸ, ರೇಗುವುದು ತಿಳದವರಿಗೆ ಭೂಷಣವಲ್ಲ."

ಮಗ ಉದ್ಧಟನಾಗಿಯೇ ಉತ್ತರ ಕೊಟ್ಟ—"ಇಂತಹ ಹೊತ್ತಿನಲ್ಲಿ ರೇಗದೆ ಇನ್ನಾವಾಗ ರೇಗಬೇಕು? ನೀವೇ ಹೇಳಿ. ಆ ಸೂಳೆಮಗ ಆಳು, ಹೇಳದೆ ಕೇಳದೆ ಇಂತಹ ಅಯೋಗ್ಯನನ್ನು ಇಲ್ಲಿ ತಂದು ಕೂಡಿಸಿದ್ದಾನೆ. ಇವನಿಗೆ ದೊಡ್ಡ ಮನುಷ್ಯರ ಮನೆ ಹೆಂಗಸಿನ ಮಾನ ಮರ್ಯಾದೆಗಳ ಪರಿವೂ ಇಲ್ಲ."

ಬಲವಾದ ಪೆಟ್ಟಿನಿಂದ ಅಮಲು ಇಳಿಯುವಂತೆ ಈ ಪೆಟ್ಟಿನಿಂದ ವಿಜಯಳ ಜ್ವರದ ಅಮಲು ಇಳಿದುಹೋಗಿ, ಅವಳು ನರೇಂದ್ರನ ಕೈಬಿಟ್ಟು ಗೋಡೆಯ ಕಡೆ ಮುಖ ತಿರುಗಿಸಿ ಮಲಗಿಕೊಂಡಳು.

ಕಾಲೀಪದ ಒಂದು ಕುರ್ಚಿಯನ್ನು ತಂದಿಟ್ಟ. ನರೇಂದ್ರ ಕೂಡಲೆ ಹಾಸಿಗೆಯಿಂದೆದ್ದು ಆ ಕುರ್ಚಿಯ ಮೇಲೆ ಹೋಗಿ ಕುಳಿತ. ರಾಸಬಿಹಾರಿಗೆ ವಿಜಯಳ ಮುಖಭಾವ ತಿಳಿದಿರಲಿಲ್ಲ. ಅವನು ಮಗನ ಮುಖ ನೋಡುತ್ತಾ ಪ್ರಸನ್ನನಾಗಿ ಹೇಳಿದ—"ನನಗೆಲ್ಲ ಗೊತ್ತಿದೆ ವಿಲಾಸ. ಈ ವಿಷಯದಲ್ಲಿ ನೀನು ಸಿಟ್ಟಾದದ್ದೂ ಅಸ್ವಾಭಾವಿಕವೇನೂ ಅಲ್ಲ. ಅದು ಸರಿಯಾದದ್ದೇ. ಆದರೆ ಎಲ್ಲರೂ ತಿಳಿದೇ ಅಪರಾಧ ಮಾಡುವುದಿಲ್ಲವೆಂಬುದನ್ನು ನೀನು ಯೋಚಿಸಬೇಕಾಗಿತ್ತು. ಎಲ್ಲರಿಗೂ ಎಲ್ಲ ತರಹೆಯ ರೀತಿ–

ನೀತಿಗಳು, ಆಚರಣೆಗಳು, ನಡೆ-ನುಡಿಗಳು ಗೊತ್ತಿದ್ದರೆ ಚಿಂತಿಸುವ ಕಾರಣ ವೇನಿತ್ತು ? ಆದ್ದರಿಂದಲೇ ಸಿಟ್ಟಾಗದೆ ಶಾಂತವಾಗಿಯೇ ಮನುಷ್ಯ ತಪ್ಪು ನೆಪ್ಪುಗಳನ್ನು ಸುದಾರಿಸಿಕೊಳ್ಳಬೇಕು.

ತಪ್ಪು ಯಾರದೆಂಬುದನ್ನು ತಿಳಿದುಕೊಳ್ಳಲು ಯಾರಿಗೂ ತಡವಾಗ ಲಿಲ್ಲ. ವಿಲಾಸ ಹೇಳಿದ —" ಉಹಂ, ಅಪ್ಪ, ಇಂತಹ ಅಸಭ್ಯ ವರ್ತನೆಗ ಳನ್ನು ಸಹಿಸುವುದಕ್ಕಾಗುವುದಿಲ್ಲ. ಅಲ್ಲದೆ ನಮ್ಮ ಆಳುಕಾಳು ಬಹಳ ಅಪ್ರ ಯೋಜಕರು, ಅಯೋಗ್ಯರು. ನಾಳೆಯೇ ಅವರನ್ನೆಲಾ ಕಿತ್ತುಹಾಕದ ಹೊರತು ನನಗೆ ಸಮಾಧಾನವಿಲ್ಲ "

ರಾಸಬಿಹಾರಿ ಮತ್ತೊಮ್ಮೆ ನಕ್ಕು ಸ್ನೇಹಪೂರ್ಣ ತಿರಸ್ಕಾರದಿಂದ ಗೋಡೆಯಕಡೆ ನೋಡಿ ಹೇಳಿದರು—" ಇವನ ಮನಸ್ಸಿಗೆ ಬೇಸರವಾದರೆ ಇವನೇನೇನು ಹೇಳುತ್ತಾನೋ ಯಾರು ಬಲ್ಲರು ? ಹುಡುಗನದಾದರೂ ತಪ್ಪೆಂದು ಹೇಳುವುದು ಹೇಗೆ ? ನಾನು ಮುದುಕ. ಖಾಯಿಲೆಯ ವಿಚಾರ ಕೇಳಿ ನಾನೇ ಎಷ್ಟೋ ಗಾಬರಿಯಾದೆ ? ಮೊದಲೇ ಮನೆಯಲ್ಲಿ ಒಬ್ಬ ಹುಡು ಗನಿಗೆ ಸಿಡುಬೆದ್ದಿದೆ. ಅದರಮೇಲೆ ಇವರು ಬೇರೆ ಭಯಪಡಿಸಿ ಹೋದರು."

ಇಷ್ಟು ಹೊತ್ತು ನರೇಂದ್ರ ಸುಮ್ಮನಿದ್ದು ಈಗ ಅವರ ಮಾತಿನ ಮಧ್ಯ ದಲ್ಲೇ ಹೇಳಿದ—" ಉಹುಂ, ನಾನೇನೂ ಭಯಪಡಲಿಲ್ಲ."

ವಿಲಾಸ ನೆಲದ ಮೇಲೆ ಕಾಲಪ್ಪಳಿಸಿ ಕೂಗಿ ಹೇಳಿದ—" ಖಂಡಿತ ವಾಗಿ ಭಯ ತೋರಿಸಿ ಹೋದಿರಿ. ಕಾಲೀಪದ ಸಾಕ್ಷಿ ಇದ್ದಾನೆ."

"ಕಾಲೀಪದ ತಪ್ಪು ತಿಳಿದುಕೊಂಡಿದ್ದಾನೆ." ಇದಕ್ಕುತ್ತರವಾಗಿ ವಿಲಾಸ ಇನ್ನೇನೋ ಹೇಳುತ್ತಿದ್ದ. ಅಷ್ಟರಲ್ಲೇ ರಾಸಬಿಹಾರಿ ಅವನನ್ನು ತಡೆದು ಹೇಳಿದ—" ಇದೇನು ವಿಲಾಸ ? ಅವರೇ ಇಲ್ಲವೆಂದು ಹೇಳಿದಮೇಲೆ ಕಾಲೀ ಪದನನ್ನು ನಂಬುವುದಕ್ಕಾಗುತ್ತದೆಯೇ ? ಅವರ ಮಾತೇ ನಿಜ........"

ವಿಲಾಸ ಏನನ್ನೋ ಹೇಳುವಷ್ಟರಲ್ಲಿ ರಾಸಬಿಹಾರಿ ಅವನಿಗೆ ಸಂಜ್ಞೆ ಮಾಡಿ ಹೇಳಿದ—" ಇಷ್ಟು ಸಣ್ಣ ಖಾಯಿಲೆಗೇ ಇಷ್ಟು ಅಸ್ಥಿರನಾಗಬೇಡ ವಿಲಾಸ, ಸ್ವಲ್ಪ ಧೈರ್ಯ ತೆಗೆದುಕೋ. ಆ ಭಗವಂತ ನಮ್ಮ ಪರೀಕ್ಷೆಗಾ ಗಿಯೇ ಇಂತಹ ವಿಪತ್ತುಗಳನ್ನು ತಂದೊಡ್ಡುತ್ತಿರುತ್ತಾನೆ. ಸಂಕಟಬಂದಾಗ ನೀನದನ್ನೇಕೆ ಮರೆತುಬಿಡುತ್ತೀಯೆಂಬುದೇ ನನಗೆ ತಿಳಿಯದಾಗಿದೆ."

ಸ್ವಲ್ಪ ಹೊತ್ತು ಸುಮ್ಮನಿದ್ದು ಅವನು ಮತ್ತೆ ಹೇಳಿದ—"ಇವರು

ಸುಳ್ಳು ಖಾಯಿಲೆಯ ವಿಚಾರ ಹೇಳಿದ್ದರೂ ಏನು ತಪ್ಪು? ಅನೇಕ ದೊಡ್ಡ ಪರೀಕ್ಷೆ ಪಾಸುಮಾಡಿದ ಡಾಕ್ಟರುಗಳೇ ತಪ್ಪುತ್ತಿರುವಾಗ ಇವರಿನ್ನೂ ಹುಡುಗರು," ಎಂದು ಅವನು ನರೇಂದ್ರನ ಕಡೆ ತಿರುಗಿ ಹೇಳಿದ—" ಹಾಗಾದರೆ ಖಾಯಿಲೆಯೇನೂ ಭಯವಿಲ್ಲವೆಂದು ನಿಮ್ಮ ಅಭಿಪ್ರಾಯವೇ? ಇದಕ್ಕಾಗಿ ಏನೂ ಯೋಚಿಸಬೇಕಾಗಿಲ್ಲ ತಾನೆ ?"

ನರೇಂದ್ರ ಬಂದಾಗಿನಿಂದಲೂ ಅನೇಕ ಅಪಮಾನಗಳನ್ನು ಸಹಿಸಿದ್ದ. ಆದರೆ ಈಗ ಅವನ ಸಹನೆ ಮಿತಿಮೀರಿ ಅವನು ಕಟುವಾಗಿ ಹೇಳಿದ–" ನಾನು ಹೇಳಿದ್ದರಿಂದ ಫಲವೇನು ? ಹೇಳಿ. ನನ್ನಲ್ಲಿ ನಿಮಗೆ ನಂಬಿಕೆಯಂತೂ ಇಲ್ಲ. ಆದ್ದರಿಂದ ನೀವು ದೊಡ್ಡ ಪರೀಕ್ಷೆ ಪಾಸುಮಾಡಿದ ಇನ್ನಾಗಾದರೂ ವಿಚಕ್ಷಣ ಡಾಕ್ಟರನ್ನು ಕರೆದು ತೋರಿಸಿ, ಅವರ ಅಭಿಪ್ರಾಯ ಪಡೆಯುವುದೇ ಒಳ್ಳೆಯದು."

ಈ ಉತ್ತರದಲ್ಲಿ ವ್ಯಂಗ್ಯವೆಷ್ಟೇ ಇದ್ದರೂ, ನರೇಂದ್ರನಿಗೆ ಈ ಉತ್ತರ ಕೊಡುವ ಅಧಿಕಾರವಿತ್ತು. ಆದರೆ ವಿಲಾಸ ಕೂಡಲೇ ಹೊಡೆಯುವುದಕ್ಕೆ ಎದ್ದಂತೆ ಎದ್ದು ಕೂಗಿದ—"ಯಾರ ಜೊತೆಯಲ್ಲಿ ಮಾತಾಡುತ್ತಿದ್ದೇನೆಂಬುದನ್ನು ಲಕ್ಷ್ಯದಲ್ಲಿಟ್ಟು ಮಾತಾಡು. ಈ ಕೋಣೆಯಲ್ಲದೆ ಬೇರೆಲ್ಲಿಯಾದರೂ ನೀನು ಹೀಗೆ ಮಾತಾಡಿದ್ದರೆ........"

ಮಾತು ಮಾತಿಗೂ ಜಗಳ ಹುಟ್ಟಿಸುವ ಇವನ ಪ್ರಯತ್ನವನ್ನು ನೋಡಿ ನರೇಂದ್ರ ಆಶ್ಚರ್ಯದಿಂದ ಚಕಿತನಾದ. ಆದರೆ ತನ್ನ ಯಾವ ಮಾತಿನಲ್ಲಿ ಯಾವ ನಡತೆಯಲ್ಲಿ ದೋಷವಿತ್ತೆಂಬುದು ಅವನಿಗೆ ತಿಳಿಯದಾಯಿತು. ಈ ಮನುಷ್ಯನ ಅಂತರ್ದಾಹದ ಮೂಲವಾವುದೆಂಬುದು ನರೇಂದ್ರನಿಗೆ ತಿಳಿಯದಿದ್ದುದೇ ಇದಕ್ಕೆ ಕಾರಣ. ವಿಜಯಳು ಈ ಹಳ್ಳಿಗೆ ಬಂದಂದಿನಿಂದ ಆ ಹಳ್ಳಿಗರೆಲ್ಲರೂ ವಿಲಾಸನೊಂದಿಗೆ ಭವಿಷ್ಯದಲ್ಲಿ ಅವಳ ಸಂಬಂಧವನ್ನು ನೆನೆಸಿ ಸದ್ವ್ಯವಹಾರ ಮಾಡುತ್ತಿದ್ದರು. ಪಕ್ಕದ ಹಳ್ಳಿಯವನಾದ ಈ ನರೇಂದ್ರ ತನ್ನ ಕ್ರಿಮಿಕೀಟಗಳ ಶೋಧನೆಯಲ್ಲಿ ಮಗ್ನನಾಗಿದ್ದ. ಜನಜಂಗುಳಿಯ ಈ ಮಹಾವಾರ್ತೆ ಅವನ ಕಿವಿಗೂ ಬಿದ್ದಿರಲಿಲ್ಲ. ಮಂದಿರ ಸ್ಥಾಪನೆಯ ದಿನ ಅದು ನಿಶ್ಚಯವಾಗಿ ಎಲ್ಲರಲ್ಲೂ ಬಾಯಿ ಮಾತಾಗಿರುವಾಗ ಅವನು ಕಲಿಕತ್ತೆಗೆ ಹೊರಟುಹೋಗಿದ್ದ. ಇಂದು ತಂದೆ ಮಕ್ಕಳ ಮಾತಿನ ಭಂಗಿಯಲ್ಲಿ ಮಧ್ಯದಲ್ಲಿ ಅವನಿಗೊಂದು ಅವ್ಯಕ್ತ ವೇದನೆಯ ಅನುಭವವಾದರೂ

ಅದರ ಸಂಬಂಧವಾಗಿ ಆಲೋಚನೆ ಮಾಡಿ ಅದನ್ನು ಸ್ಪಷ್ಟಪಡಿಸಿಕೊಳ್ಳಲು ಅವನಿಗೆ ಸಮಯವೂ ಇರಲಿಲ್ಲ. ಇದರಿಂದ ಅವನಿಗೆ ಯಾವ ಪ್ರಯೋಜನವೂ ಇರಲಿಲ್ಲ. ಆ ಹೊತ್ತಿಗೆ ಸರಿಯಾಗಿ ವಿಜಯಳು ಈ ಕಡೆ ಮುಖ ತಿರುಗಿಸಿ ನರೇಂದ್ರನನ್ನು ವ್ಯಥೆಯಿಂದ ನೋಡಿ ಹೇಳಿದಳು—" ನಾನು ಬದುಕಿರುವವರೆಗೂ ನಿಮಗೆ ಅತ್ಯಂತ ಕೃತಜ್ಞಳಾಗಿದ್ದೇನೆ. ಇವರು ಬೇರೆ ಡಾಕ್ಟರಿಂದ ನನಗೆ ಚಿಕಿತ್ಸೆ ಮಾಡಿಸಬೇಕೆಂದು ನಿರ್ಧರಿಸಿರುವಾಗ ನೀವಿನ್ನು ನಿರರ್ಥಕವಾಗಿ ಅಪಮಾನ ಸಹಿಸಿಕೊಂಡು ಇರಬೇಡಿ. ಆದರೆ ಮನೆಗೆ ಹೋಗುವಾಗ, ದಯಾಲಬಾಬುಗಳನ್ನೊಮ್ಮೆ ನೋಡಿಹೋಗಿ. ನನ್ನ ಈ ವಿಜ್ಞಾಪನೆಯನ್ನು ಮಾತ್ರ ನಡೆಸಿಕೊಡಿ," ಎಂದು ಪ್ರತ್ಯುತ್ತರಕ್ಕಾಗಿ ಕಾಯದೇ ಮುಖ ತಿರುಗಿಸಿಕೊಂಡು ಮಲಗಿಕೊಂಡಳು. ರಾಸಬಿಹಾರಿಗೆ ಈ ವಿಷಯ ಮೊದಲೇ ತಿಳಿದಿತ್ತು. ಅವನು ಕೂಡಲೆ ಹೇಳಿದ—" ಇದೊಳ್ಳೆಯ ವಿಚಿತ್ರ ಮಾತು. ನಿಮ್ಮನ್ನು ಹೇಳಿ ಕಳುಹಿಸಿದ ಮೇಲೆ ನಿಮ್ಮ ಅವಮಾನ ಮಾಡುವ ಧೈರ್ಯ ಯಾರಲ್ಲಿದೆ ? "

ಆಮೇಲೆ ಅವನು ಮಗನನ್ನು ಅನೇಕ ರೀತಿ ತೆಗಳಿ, ಇದು ಬಹಳ ದೊಡ್ಡ ಖಾಯಿಲೆಯೆಂದು ತಿಳಿದು ವಿಲಾಸ ಎದೆಗುಂದಿದ್ದಾನೆಂದು ಪ್ರಚಾರ ಮಾಡತೊಡಗಿದ. ಇದರ ಜೊತೆಗೆ ಆ ಅದ್ವಿತೀಯ ನಿರಾಕಾರ ಪರಬ್ರಹ್ಮನ ಉದ್ದೇಶದ ವಿಚಾರವಾಗಿ ಮಗನಿಗೆ ಅನೇಕ ಉಪದೇಶ ಮಾಡತೊಡಗಿದ. ನರೇಂದ್ರ ಒಂದು ಮಾತನ್ನೂ ಆಡಲಿಲ್ಲ. ಆ ತಂದೆ ಮಕ್ಕಳಲ್ಲಿ ನಡೆದ ತತ್ವ ವಿಚಾರ ಮತ್ತು ಅವಮಾನದ ಭಾರವನ್ನು ಹೊತ್ತು ಮೌನವಾಗಿ ಕೋಲನ್ನು ಹಿಡಿದುಕೊಂಡು, ಕೈಚೀಲವನ್ನು ಹಿಡಿದು ಹೊರಹೊರಟ. ರಾಸಬಿಹಾರಿ ಹಿಂದಿನಿಂದ ಕರೆದು ಹೇಳಿದ—" ನರೇಂದ್ರಬಾಬು ನಿಮ್ಮ ಜೊತೆಗೆ ಒಂದು ಮುಖ್ಯವಾದ ವಿಷಯವನ್ನು ಚರ್ಚಿಸಬೇಕಾಗಿತ್ತು." ಎಂದು ಜಾಗ್ರತೆಯಾಗಿ ಎದ್ದು ಮಗನೊಬ್ಬನನ್ನೇ ವಿಜಯಳ ಕೋಣೆಯಲ್ಲಿ ಬಿಟ್ಟು ನರೇಂದ್ರನ ಹಿಂದೆ ಹೊರಟ.

ನರೇಂದ್ರನನ್ನು ಮಗ್ಗುಲು ಕೋಣೆಯಲ್ಲಿ ಕೂಡಿಸಿ ಮಾತಿನ ಪೀಠಿಕೆಯನ್ನು ಆರಂಭಿಸಿದ—" ನಾಲ್ಕು ಜನಗಳ ಮುಂದೆ ನಿನ್ನನ್ನು ' ಬಾಬು ' ಎಂದಾದರೂ ಕರೆಯಲಿ ಏನಾದರೂ ಕರೆಯಲಿ. ನೀನು ನಮ್ಮ ಆ ಜಗದೀಶನ ಮಗನೆಂಬುದನ್ನು ಮರೆಯಲಾಗುತ್ತದೆಯೇ ? ವನಮಾಲೀ ಮತ್ತು

ಜಗದೀಶರಿಬ್ಬರೂ ಹೋಗಿಬಿಟ್ಟರು. ನಾನು ಮಾತ್ರ ಉಳಿದಿದ್ದೇನೆ. ನಾವು ಮೂರು ಜನರೂ ಹೇಗಿದ್ದೆವೆಂಬುದನ್ನು ಅವತ್ತು ಸೂಕ್ಷ್ಮವಾಗಿ ಹೇಳಿದ್ದೆ. ಆದರೆ ಅದನ್ನು ವಿಸ್ತಾರವಾಗಿ ತಿಳಿಸಲಾಗಲಿಲ್ಲ. ನರೇಂದ್ರ ನನ್ನ ಎದೆ ಯೊಡೆದು ಹೋಗುತ್ತೆ."

ಅಂದು ಸೂಕ್ಷ್ಮದರ್ಶಿನಿಯ ಬೆಲೆಯನ್ನು ಕೊಡಲು ಬಂದಾಗ ರಾಸ ಬಿಹಾರಿ ಅನೇಕ ಮಾತುಗಳನ್ನಾಡಿದ್ದ. ಆದ್ದರಿಂದ ಇಂದೂ ನರೇಂದ್ರ ಸುಮ್ಮನೆ ಕೇಳುತ್ತ ಕುಳಿತ.

ಇದ್ದಕಿದ್ದಂತೆ ಹಿಂದಿನ ಮಾತು ನೆನಪಾದ್ದರಿಂದ ರಾಸಬಿಹಾರಿ ಹೇಳಿದ—"ಆ ಅತಿಮುಖ್ಯವಾದ ಯಂತ್ರವನ್ನು ಮಾರಿದ್ದರಿಂದ ನನಗೆ ಬಹಳ ಅಸಮಾಧಾನವಾಗಿತ್ತು ನರೇಂದ್ರ." ಮತ್ತೆ ನಕ್ಕು ಹೇಳಿದ— "ನೋಡು ಮಗು ಅಸಮಾಧಾನವಾಗಿತ್ತೆಂಬುದು ಬಹಳ ಒರಟು ಮಾತಾ ಗುತ್ತೆ. ಲೋಕ ವ್ಯವಹಾರದ ದೃಷ್ಟಿಯಿಂದ ಅಸಮಾಧಾನವೇನೂ ಆಗ ಲಿಲ್ಲವೆಂದು ಹೇಳುವುದೇ ಉಚಿತ....ಹೇಳುವುದಕ್ಕೂ ಕೇಳುವುದಕ್ಕೂ ಇದೇ ಹಿತ....ಆದರೆ....ಹುಂ ಹೋಗಲಿ ಬಿಡು." ಮತ್ತೊಂದು ನಿಟ್ಟುಸಿರು ಬಿಟ್ಟು ಆತ್ಮಗತವಿದ್ದಂತೆ ಮುಂದುವರೆಸಿದ...."ನನಗೆ ಅಸಾಧ್ಯವಾದದ್ದಕ್ಕೆ ದುಃಖ ಪಡುವುದು ವ್ಯರ್ಥ. ಎಷ್ಟೋ ಜನರ ಮುಂದೆ ನಾನು ಕೆಟ್ಟವನಾಗಿದ್ದೇನೆ. ಎಷ್ಟೋ ಜನರು ನನ್ನನ್ನು ಬೈಯುತ್ತಾರೆ. ನನ್ನ ಹಿತೈಷಿಗಳಾದರೋ— "ನೀನೋ ಸುಳ್ಳು ಎಂದಿಗೂ ಹೇಳಲಾರೆ ರಾಸಬಿಹಾರಿ. ಸುಳ್ಳು ಹೇಳೆಂದು ನಾವೂ ಹೇಳುವುದಿಲ್ಲ. ಇದ್ದದ್ದನ್ನೇ ಸ್ವಲ್ಪ ಬಳಸಿ ಹೇಳಿದರೆ ವೃಥಾ ಅಪ ವಾದ ತಪ್ಪುವುದಾದರೆ ಹಾಗೇಕೆ ಮಾಡಬಾರದು?" ಎನ್ನುತ್ತಾರೆ. ನೋಡು ನರೇಂದ್ರ ನಡೆಯದಿದ್ದುದನ್ನು ಹೇಗೆ ಹುಟ್ಟಿಸಿಕೊಂಡು ಹೇಳಬೇಕು ಎನಿಸುತ್ತದೆ ನನಗೆ. ನನ್ನ ಹಿತೈಷಿಗಳೇನೋ ನನ್ನ ಒಳ್ಳೆಯದಕ್ಕಾಗಿಯೇ ಹೇಳುತ್ತಾರೆ. ಆದರೆ ನನ್ನ ಯೋಗ್ಯತೆ ಮೀರಿದ ಕೆಲಸವನ್ನು ನಾನು ಹೇಗೆ ಮಾಡಲಿ? ಹೇಳು....ಹುಂ....ಹೋಗಲಿ ಬಿಡು ನರೇಂದ್ರ. ನನ್ನ ವಿಚಾರ ಚರ್ಚೆ ಮಾಡುವುದು ನನಗೆಂದಿಗೂ ರುಚಿಸುವುದಿಲ್ಲ. ಆಮೇಲೆ ನೀನು ದುಃಖಪಡಬೇಡ. ಅದಕ್ಕಾಗಿಯೇ ಇಷ್ಟು ವಿಷಯ ಹೇಳಬೇಕಾಯಿತು." ಸ್ವಲ್ಪ ಹೊತ್ತು ಮೇಲ್ಛಾವಣಿಯ ಕಡೆಗೆ ಉದಾಸೀನ ದೃಷ್ಟಿಯಿಂದ ನೋಡು ತ್ತಿದ್ದು ಆಮೇಲೆ ಮುಖ ತಗ್ಗಿಸಿ ಹೇಳಿದ—"ಬಹಳ ದಿವಸದಿಂದ ಈ

ಪ್ರಪಂಚದಲ್ಲಿ ಓಡಾಡುತ್ತಿದ್ದೇನೆ. ಇದರಲ್ಲೇ ನನ್ನ ಕೂದಲೂ ಕೂಡ ಬೆಳ್ಳಗಾಯಿತು. ಆದಗೆ ಇದರಲ್ಲಿ ಹೇಗೆ ನಡೆದುಕೊಂಡರೆ, ಹೇಗೆ ಮಾತಾಡಿದರೆ ಸುಖ ಸಂತೋಷಗಳಾಗುತ್ತೆಂಬುದೇ ತಿಳಿಯದಾಗಿದೆ. ಇಲ್ಲದಿದ್ದರೆ ನಿನ್ನ ವಿಚಾರದಲ್ಲಿ ಅಸಮಾಧಾನವಾಯಿತೆಂದು ಹೇಳಿ ನಿನಗೆ ದುಃಖವನ್ನುಂಟುಮಾಡುತ್ತಿದ್ದೆನೇ? ನೀನೇ ಹೇಳು ನರೇಂದ್ರ ?"

ನರೇಂದ್ರ ವಿನಯದಿಂದ ಹೇಳಿದ—"ನೀವು ಸತ್ಯವಾದದ್ದನ್ನು ಹೇಳುತ್ತಿದ್ದೀರಿ. ಇದಕ್ಕೆ ದುಃಖಪಡಬೇಕಾದದ್ದೇನು ?"

ರಾಸಬಿಹಾರಿ ತಲೆಯಲ್ಲಾಡಿಸುತ್ತ ಹೇಳಿದ—"ಉಹುಂ, ಹಾಗೆಂದಿಗೂ ಅಲ್ಲ. ಕಟುವಾಗಿ ಮಾತಾಡಿದರೆ ಮನಸ್ಸಿಗೆ ದುಃಖವಾಗಿಯೇ ಆಗುತ್ತೆ. ಕೇಳುವವರಿಗೂ ಮನಸ್ಸು ನೋಯುತ್ತೆ. ಹೇಳುವವರಿಗೇನು ಕಡಿಮೆ ದುಃಖವಾಗುವುದಿಲ್ಲ ಮಗು. ಉಂ, ಜಗದೀಶ್ವರ !"

ನರೇಂದ್ರ ತಲೆ ತಗ್ಗಿಸಿಕೊಂಡು ಸುಮ್ಮನೆ ಕುಳಿತಿದ್ದ. ರಾಸಬಿಹಾರಿ ಹೃದಯದ ಮರ್ಮಾಂತಿಕ ಉಚ್ಛ್ವಾಸವೊಂದನ್ನು ಬಿಟ್ಟು ಹೇಳಿದ— "ಆದರೆ ಆಮೇಲೆ ನನ್ನಿಂದ ಸುಮ್ಮನಿರಲಾಗಲಿಲ್ಲ. 'ವಿ ಷ ಯ ವೇ ನಿ ರ ಬಹುದು !' ಎಂದು ನಾನು ಯೋಚಿಸಿದೆ. 'ಅವನಿಗೆ ಬಹಳ ಸಂಕಟ ಸಮಯ ಒದಗಿದ್ದರಿಂದಲೇ ಅವನಿದನ್ನು ಮಾರಿ ಹೋಗಿರಬೇಕು. ಅದರ ಬೆಲೆ ಎಷ್ಟೇ ಇರಲಿ, ಮಾತು ಕೊಟ್ಟಾದ ಮೇಲೆ ಮುಗಿದುಹೋಯಿತು. ಈನ್ನೇನೂ ಯೋಚಿಸುವಂತಿಲ್ಲ. ಹಣ ಕೊಡುವುದಕ್ಕೂ ತಡಮಾಡಲಾಗದು. ನಮ್ಮ ವಿಜಯಳಿಗೆ ಯಾವಾಗ ಮನಸ್ಸು ಬರುತ್ತೋ ಆಗ ದುಡ್ಡು ಕೊಡಲಿ. ನಾವಂತೂ ಈಗಲೇ ಹೋಗಿ ಅದರ ಹಣವನ್ನು ಕೊಟ್ಟು ಬರೋಣ. ಪಾಪ ಇದನ್ನು ತೆಗೆದುಕೊಂಡೇ ವಿಲಾಯತಿಗೆ ಹೋಗಬೇಕೆಂದಿರುವಾಗ ಸಾವಕಾಶ ಮಾಡುವುದು ಸರಿಯಲ್ಲ. ಅಲ್ಲದೆ ಅದೂ ನಮ್ಮ ಜಗದೀಶನ ಮಗ !"

ನರೇಂದ್ರ ಆಗಿನ ಕಟುಮಾತುಗಳನ್ನು ನೆನೆಸಿಕೊಂಡು ಕೇಳಿದ— "ಅವರಿಗೆ ಇದರ ಹಣ ಕೊಡುವ ಇಷ್ಟವಿರಲಿಲ್ಲವೇ?"

ಆ ವೃದ್ಧ ರಾಸಬಿಹಾರಿ ಗಂಭೀರನಾಗಿ ಹೇಳಿದ—"ಉಹುಂ. ಆ ವಿಷಯವೇ ನನ್ನ ಮನಸ್ಸಿಗೆ ಬರಲಿಲ್ಲ. ನಿನಗೆ ಗೊತ್ತೇ ಇದೆ........ಉಂ. ಹೋಗಲಿ ಬಿಡು," ಎಂದು ಇದ್ದಕ್ಕಿದ್ದಂತೆ ಅವನು ಮೌನ ತಾಳಿದ.

ನಾನೂರು ರುಪಾಯಿ ಬೆಲೆ ಕಟ್ಟಿದ್ದ ವಿಷಯ ನರೇಂದ್ರನ ತುದಿ

ನಾಲಿಗೆಯವರೆಗೂ ಬಂದಿತು. ಆದರೆ ಅವನಿಗೇನೋ ವ್ಯಥೆಯಾದಂತಾಗಿ ಆ ವಿಷಯವಾಗಿ ಮತ್ತೆ ಅವನು ಮಾತೇ ಆಡಲಿಲ್ಲ.

ಈಗ ರಾಸಬಿಹಾರಿ ಸರಿಯಾದ ವಿಷಯ ತೆಗೆದ. ಅವನು ಮನುಷ್ಯರನ್ನು ಸರಿಯಾಗಿ ಅರ್ಥ ಮಾಡಿಕೊಳ್ಳುತ್ತಿದ್ದ. ಇಂದಿನ ನರೇಂದ್ರನ ವ್ಯವಹಾರದಿಂದ, ಅವನಿಗೆ ಇನ್ನು ನಿಜವಾದ ವಿಷಯ ತಿಳಿಯದೆಂದೇ ರಾಸಬಿಹಾರಿ ತಿಳಿದ. ಇಂತಹ ಅನ್ಯಮನಸ್ಕ ಉದಾಸೀನ ಪ್ರಕೃತಿಯವರಿಗೆ ಅವರ ಬೆಟ್ಟನ್ನೇ ಅವರ ಕಣ್ಣಿಗೆ ಚುಚ್ಚಿ ಹೇಳದ ಹೊರತು ಅರ್ಥವಾಗುವುದಿಲ್ಲವೆಂಬುದನ್ನು ಅವನು ಮನಗಂಡು ಹೇಳಿದ —"ವಿಲಾಸನ ಆಚರಣೆಯಿಂದ ನನಗೆ ಬಹಳ ದುಃಖ ಮತ್ತು ಸಂಕೋಚವಾಗಿದೆ. ಈ ಸೂಕ್ಷ್ಮದರ್ಶಿನಿಯ ವಿಷಯವೇ ಹೇಳುತ್ತೇನೆ. ವಿಜಯಳು ವಿಲಾಸನ ಸಲಹೆ ತೆಗೆದುಕೊಂಡು ಅದನ್ನು ಕೊಂಡಿದ್ದರೆ ಆಗ ಒಂದು ಮಾತೂ ಹೊರಬರುತ್ತಿರಲಿಲ್ಲ. ನೀನೇ ಹೇಳು. ಇದು ಅವಳ ಕರ್ತವ್ಯವಲ್ಲವೇ?"

ವಿಜಯಳ ಕರ್ತವ್ಯವೇನೆಂಬುದು ಸರಿಯಾಗಿ ತಿಳಿಯದಿದ್ದುದರಿಂದ ನರೇಂದ್ರ ಜಿಜ್ಞಾಸು ದೃಷ್ಟಿಯಿಂದ ನೋಡುತ್ತ ಕುಳಿತ. ರಾಸಬಿಹಾರಿ ಮುಂದುವರೆಸಿದ—"ಅವಳಿಗೆ ಖಾಯಿಲೆಯಾದ ವಿಷಯಕ್ಕೆ ವಿಲಾಸನಿಗೆಷ್ಟು ವ್ಯಾಕುಲವಾಗಿದೆಯೆಂಬುದು ನಮಗೆ ಚನ್ನಾಗಿ ಅರ್ಥವಾಗಿದೆ. ಅದೂ ಸ್ವಾಭಾವಿಕವೇ. ಅವಳ ಒಳಿತು–ಕೆಡಕುಗಳು, ಯೋಗಕ್ಷೇಮವೆಲ್ಲವೂ ಅವನಿಗೇ ಸೇರಿದ್ದು. ವೈದ್ಯರು ಮತ್ತು ಚಿಕಿತ್ಸೆಯ ವ್ಯವಸ್ಥೆ ಮಾಡುವವನೂ ಅವನೇ. ಅವನ ಅಭಿಪ್ರಾಯವಿಲ್ಲದೆ ಏನೂ ನಡೆಯಲಾರದು. ವಿಜಯಳಿಗೂ ಕೊನೆಗೆ ಇದು ಅರ್ಥವಾಯಿತು. ಆದರೆ ಎರಡು ದಿನ ಮುಂಚಿತವಾಗಿಯೇ ಅವಳಿಗಿದು ತಿಳಿದಿದ್ದರೆ, ಇಷ್ಟು ಅಪ್ರಿಯ ಘಟನೆಗಳಿಗೆ ಅವಕಾಶವೇ ಇರುತ್ತಿರಲಿಲ್ಲ. ಈಗ ಅವಳೇನೂ ಹುಡುಗಿಯಲ್ಲ....ಅವಳಿದನ್ನು ಯೋಚಿಸಬೇಕಾಗಿತ್ತು."

ಅದೇಕೆ ಅವಳು ಅದನ್ನು ಯೋಚಿಸಬೇಕಾಗಿತ್ತೆಂಬುದನ್ನು ತಿಳಿಯದಿದ್ದುದರಿಂದ ನರೇಂದ್ರ ಅವನ ಮಾತಿಗೆ ಕೂಡಲೆ ಒಪ್ಪಿಗೆ ಕೊಡಲಿಲ್ಲ. ಆದರೂ ಅವನ ಅಂತರಂಗದಲ್ಲಿ ದೊಡ್ಡ ಕೋಲಾಹಲವೆದ್ದಿತು. ಅವನ ಬಾಯಿಂದ ಅದನ್ನು ತಿಳಿದುಕೊಳ್ಳುವ ಮಾತೂ ಹೊರಡಲಿಲ್ಲ. ಅವನು ಕುತೂಹಲ ದೃಷ್ಟಿಯಿಂದ ಆ ವೃದ್ಧನನ್ನು ನೋಡತೊಡಗಿದ.

ರಾಸಬಿಹಾರಿ ಹೇಳಿದ—"ನೋಡು ನರೇಂದ್ರ, ವಿಲಾಸನ ಮನಸ್ಥಿತಿ ಯನ್ನು ನೋಡಿ ನೀನೇನೂ ದುಃಖಪಡಬೇಡ. ನನ್ನದೊಂದು ಅಭಿಲಾಷೆ ಇದೆ. ನರೇಂದ್ರ....ಇವರ ಮದುವೆ ವೈಶಾಖದಲ್ಲಿ ಆಗುವುದಿದೆ. ನೀನು ಕಲಿಕತ್ತೆಯಲ್ಲೇ ಇದ್ದರೆ ಆ ಶುಭ ಮುಹೂರ್ತಕ್ಕೆ ನೀನು ಖಂಡಿತ ಬರಬೇಕು. ಈಗಲೇ ಹೇಳಿದ್ದೇನೆ."

ನರೇಂದ್ರನ ಬಾಯಿಂದ ಏನೂ ಹೊರಡಲಿಲ್ಲ. ಅವನು 'ಒಳ್ಳೆಯದು' ಎಂದು ತಲೆಯಲ್ಲಾಡಿಸಿದ.

ರಾಸಬಿಹಾರಿ ಆಮೇಲೆ ಪುಲಕಿತನಾಗಿ ಅನೇಕ ಮಾತಾಡಿದ. ಈ ಮದುವೆ ಆಗಬೇಕೆಂದಿರುವುದು ಆ ಮಂಗಳಮಯ ಭಗವಂತನ ಇಚ್ಛೆಯಿಂದಲೇ. ಈ ಲಗ್ನ ಆ ವಧೂವರರ ಜನ್ಮಕಾಲದಿಂದಲೇ ನಿಶ್ಚಯವಾಗಿತ್ತು. ಈ ಸಂಬಂಧವಾಗಿ ವಿಜಯಳ ತಂದೆಯ ಮರಣ ಕಾಲದಲ್ಲಿ ನಡೆದ ಮಾತು ಕತೆಗಳು—ಇವೆಲ್ಲವು ಪುರಾತನ ಇತಿಹಾಸಗಳನ್ನು ವಿವರವಾಗಿ ಹೇಳಿ ಕೊನೆಗೆ ಹೇಳಿದ—"ಉಂ. ಸರಿ....ಅದಿರಲಿ. ಈಗ ಇರುವುದು ಕಲಿಕತ್ತೆಯಲ್ಲೋ? ಅಲ್ಲೇನಾದರೂ ಕೆಲಸ ಕಾರ್ಯಸಿಕ್ಕುವ ಆಸೆ ಇದೆಯೋ ?"

" ಹೂಂ, ಒಂದು ವಿಲಾಯತಿಯ ಔಷಧದ ಅಂಗಡಿಯಲ್ಲಿ ಸಣ್ಣದೊಂದು ಕೆಲಸ ಸಿಕ್ಕಿದೆ."

" ಭೇಷ್. ಸರಿ. ಔಷಧಾಲಯದಲ್ಲೋ ?....ಸಣ್ಣ ಸಂಬಳ. ಅಲ್ಲೇ ನಿಂತರೆ ಮುಂದೆ ಅನುಕೂಲವಾಗುತ್ತೆ."

ಈ ಇಂಗಿತ ಅರ್ಥವಾಗದೆ ನರೇಂದ್ರ 'ಹೌದು' ಎಂದು ಸಮ್ಮತಿಸಿದ. ಇದನ್ನು ಕೇಳಿ ರಾಸಬಿಹಾರಿಗೆ ಕುತೂಹಲ ಹೆಚ್ಚಾಗಿ ಅತ್ತಿತ್ತ ನೋಡಿ ಕೇಳಿದ—" ಸಂಬಳ ಎಷ್ಟು ಕೊಡುತ್ತಾರೆ ?"

" ಮುಂದೆ ಇನ್ನೂ ಹೆಚ್ಚು ಕೊಡುತ್ತಾರಂತೆ. ಸಧ್ಯಕ್ಕೆ ನಾನೂರು ರುಪಾಯಿ ಮಾತ್ರ ಕೊಡುತ್ತಿದ್ದಾರೆ "

" ನಾನೂರೇ ? ರಾಸಬಿಹಾರಿಯ ಬಾಯಿ ಕಿವಿಯವರೆಗೂ ಅಗಲವಾಯಿತು. ಅವನು ಹೇಳಿದ—" ಭೇಷ್, ಭೇಷ್, ಭೇಷ್ ! ಕೇಳಿ ಬಹಳ ಸಂತೋಷವಾಯಿತು."

ಹೊತ್ತೇರುತ್ತಿದ್ದುದನ್ನು ನೋಡಿ ನರೇಂದ್ರ ಎದ್ದು ನಿಂತ. ದಯಾಳು ಬಾಬುಗಳ ಮೈಮೇಲೂ ನಾಲ್ಕಾರು ಸಿಡುಬಿನ ಚಿನ್ಹೆ ಕಾಣುತ್ತಿತ್ತು. ಆದ್ದ

ರಿಂದ ಅಲ್ಲಿಗೂ ಹೋಗಬೇಕಾಗಿತ್ತು. ಅವನು ಕೇಳಿದ—" ಪರೇಶ ಹೇಗಿದ್ದಾನೆ? ಹೇಳುತ್ತೀರಾ ?"

ರಾಸಬಿಹಾರಿ ಸಪ್ಪೆ ಮೋರೆಯಿಂದ ಹೇಳಿದ—" ಅವನನ್ನು ಅವನ ಹಳ್ಳಿಗೆ ಕಳುಹಿಸಿದ್ದಾಯಿತು. ಅವನು ಹೇಗಿದ್ದಾನೆಂದು ಹೇಳುವುದಕ್ಕಾಗುವುದಿಲ್ಲ."

ಇಬ್ಬರೂ ಕೋಣೆಯಿಂದ ಹೊರಗೆ ಬಂದರು. ರಾಸಬಿಹಾರಿ ಮತ್ತೆ ಮೇಲೆ ಹೋಗಬೇಕಾಗಿತ್ತು. ಅವನ ಮಗ ಅವನನ್ನು ಎದುರು ನೋಡುತ್ತಿರಬಹುದು. ಅವನು ಅವಳ ಚಿಕಿತ್ಸೆಗೆ ಏನು ವ್ಯವಸ್ಥೆ ಮಾಡಿದ್ದಾನೆಂಬುದನ್ನೂ ತಿಳಿಯಬೇಕಾಗಿತ್ತು. ಪಡಸಾಲೆಯ ಕೊನೆಯವರೆಗೂ ಹೋಗಿ ಆ ನರೇಂದ್ರ ಸ್ವಲ್ಪ ನಿಂತು, ಮತ್ತೆ ನಿಧಾನವಾಗಿ ವಾಪಸು ಬಂದು ರಾಸಬಿಹಾರಿಗೆ ಹೇಳಿದ—"ನೀವು ನನ್ನ ಪರವಾಗಿ ವಿಲಾಸಬಾಬುಗಳಿಗೊಂದು ಮಾತನ್ನು ಹೇಳಬೇಕು. ಜ್ವರ ಹೆಚ್ಚಾದಾಗ ಮನುಷ್ಯನಿಗೆ ಸಣ್ಣ ಕಾರಣದಿಂದಲೂ ಉದ್ವೇಗ ಹೆಚ್ಚಾಗುತ್ತೆ. ವಿಜಯಳ ಸಂಬಂಧದಲ್ಲಿ ಡಾಕ್ಟರ ಈ ಮಾತನ್ನೆಂದಿಗೂ ಅವರು ನಂಬದಿರಲಾರರೆಂದು ತೋರುತ್ತೆ," ಎಂದು ಹೇಳಿ ಅವನು ಮುಖ ತಿರುಗಿಸಿಕೊಂಡು ಜಾಗ್ರತೆಯಾಗಿ ಹೊರಟುಹೋದ.

ಸ್ನಾನವಿಲ್ಲ. ಊಟವಿಲ್ಲ. ತಲೆ ಸಿಡಿದು ಹೋಗುವಂತಹ ಬಿಸಲಿನಲ್ಲಿ ....ನರೇಂದ್ರ ಮೈದಾನದಲ್ಲಿ ಬೇಗ ಬೇಗ ಹೆಜ್ಜೆ ಇಡುತ್ತಾ ದಿಘಡಾಗ್ರಾಮದ ಕಡೆ ಹೊರಟಿದ್ದ. ಅವನಿಗೆ ಯಾವುದೂ ಸರಿತೋರಲಿಲ್ಲ. ಅವನು ಹೋಗುತ್ತಿದ್ದಂತೆ ತನ್ನಲ್ಲೇ ಪ್ರಶ್ನೆ ಮಾಡಿಕೊಳ್ಳುತ್ತಿದ್ದ—ನನಗೆ ಇದರಲ್ಲಿ ಅಷ್ಟು ಆಸಕ್ತಿಯೇಕೆ ? ಯಾವಳೋ ಒಬ್ಬಳು ಹೆಂಗಸು ತನಗೆ ಗೌರವಕ್ಕೆ ಪಾತ್ರನಾದವನೊಬ್ಬನನ್ನು ನೋಡಬೇಕೆಂದು ಹೇಳಿದ್ದಕ್ಕೆ, ಇಂತಹ ಉರಿಬಿಸಲಿನಲ್ಲಿ ಹೀಗೆ ಹೋಗುತ್ತಿದ್ದೇನಲ್ಲ ! " ಎಂದುಕೊಂಡ. ಅವನನ್ನು ಅನ್ಯಾಯದ ಕೆಲಸಕ್ಕೆ ಬಲವಂತ ಮಾಡಲು ಯಾರಿಗೂ ಅಧಿಕಾರವಿಲ್ಲವೆಂಬುದು ಅವನ ಮನಸ್ಸಿಗೆ ಬಂದಕೂಡಲೆ ಅವನಿಗೆ ಮೈಯೆಲ್ಲ ಉರಿಯಿತು. ಈ ಪ್ರಾರ್ಥನೆಯನ್ನು ಕೇಳುವುದರಿಂದ ತನಗೆ ಸ್ವಲ್ಪವೂ ಆತ್ಮಗೌರವವಿಲ್ಲೆಂದು ಅವನು ಅನೇಕಸಲ ಹೇಳಿಕೊಂಡರೂ ಹೆಜ್ಜೆಯನ್ನು ಮಾತ್ರ ಹಿಂದೆಗೆಯಲಾಗಲಿಲ್ಲ. ಒಂದೊಂದು ಹೆಜ್ಜೆಯನ್ನೇ ಮುಂದಿಡುತ್ತಾ ಕೊನೆಗೆ ಅವನು ವಿಜಯಳ

ಪ್ರಾರ್ಥನೆಯನ್ನು ಪಾಲಿಸುವುದಕ್ಕಾಗಿ ತನ್ನ ಹಿಂದಿನ ಮನೆಯ ಬಾಗಿಲಿನ ಮುಂದೆ ಹೋಗಿ ನಿಂತ.

೧೭

ಒಂದು ಚೂರು ಕಾಗದದಲ್ಲಿ ನರೇಂದ್ರ ತನ್ನ ಹೆಸರನ್ನೂ ತನ್ನ ವಿಶ್ವ ಯತಿಯ ಡಾಕ್ಟರ್ ಪ್ರಶಸ್ತಿಯನ್ನೂ ಬರೆದು ಒಳಗೆ ಕಳುಹಿಸಿ ಕೊಟ್ಟ. ಅದನ್ನು ನೋಡಿ ದಯಾಳಬಾಬುಗಳು ಬಹಳ ಗಾಬರಿಯಾದರು. ಇಷ್ಟು ದೊಡ್ಡ ಡಾಕ್ಟರು ನಡೆದುಕೊಂಡು ತಮ್ಮನ್ನು ನೋಡಲು ಬಂದಿದ್ದು ತಾವೇ ದೊಡ್ಡ ಅಪರಾಧ ಮಾಡಿದಂತೆ ಅವರಿಗೆ ತೋರಿತು. ಈ ಡಾಕ್ಟರನ್ನು ವಂಚನೆ ಮಾಡಿ ತಾವು ಈ ಮನೆಯಲ್ಲಿ ವಾಸಿಸುತ್ತಿರುವಾಗ ಅವರಿಗೆ ಮುಖ ಹೇಗೆ ತೋರಿಸಬೇಕೆಂಬುದೇ ಅವರಿಗೆ ತಿಳಿಯದಾಯಿತು. ಮರುಕ್ಷಣವೇ ಒಬ್ಬ ಶುಭ್ರ ವರ್ಣದ, ಸುಂದರ ಮೈಕಟ್ಟಿನ ಯುವಕ ಒಳಗೆ ಬಂದ. ದಯಾಳರು ಅವನನ್ನೇ ನೋಡುತ್ತ ಇದ್ದುಬಿಟ್ಟರು. ತಮಗೆ ಈಗ ಬಂದಿರುವ ವ್ಯಾಧಿ ಎಷ್ಟೇ ಪ್ರಬಲವಾದದ್ದಾಗಲಿ, ಇನ್ನೇನೂ ಭಯವಿಲ್ಲ....ಈ ಸಲ ತಾವು ಉಳಿದುಕೊಂಡೆವೆಂದು ಅವರು ಸಮಾಧಾನಪಟ್ಟುಕೊಂಡರು. ಇದು ಬಹಳ ಸಾಧಾರಣ ಖಾಯಿಲೆಯೆಂದೂ ಇದಕ್ಕಾಗಿ ಸ್ವಲ್ಪವೂ ಯೋಚಿಸಬೇಕಾಗಿಲ್ಲ ವೆಂದೂ ಅವರಿಗೆ ಆಶ್ವಾಸನ ದೊರೆತ ಕೂಡಲೆ ಅವರು ಹಾಸಿಗೆಯಿಂದ ಎದ್ದು ಕುಳಿತರು. ಡಾಕ್ಟರನ್ನು ಗೈಲಿಗೆ ಕಳುಹಿಸಲು ಸ್ಟೇರ್ಷಗೆ ಹೋಗುವು ದಕ್ಕೆ ಸಾಧ್ಯವೆ ? ಎಂದು ಅವರು ಯೋಚಿಸಲಾಂಭಿಸಿದರು. ವಿಜಯಳು ಹಾಸಿಗೆ ಹಿಡಿದಿದ್ದರೂ, ಅವಳೇ ಡಾಕ್ಟರನ್ನು ತಮ್ಮ ಹತ್ತಿರ ಕಳುಹಿಸಿದ್ದಾ ಳೆಂದು ಕೇಳಿ, ಕೃತಜ್ಞತೆ ಮತ್ತು ಆನಂದದಿಂದ ಅವರ ಕಣ್ಣಾನಗಳು ತಣಿ ದವು. ಬರಬರುತ್ತಾ ದಯಾಳ....ಡಾಕ್ಟರಲ್ಲಿ ಮಾತುಕತೆಗಳು ಆರಂಭ ವಾದವು. ಇಂದು ನರೇಂದ್ರನಿಗೆ ಬಹಳ ಬೇಸರವಾಗಿತ್ತು. ಆದರೆ ಆ ವೃದ್ಧರ ಸಂತೋಷ, ಅವರ ಸಹೃದಯತೆ ಮತ್ತು ಅವರ ನಿರ್ಮಲ ಮನಸ್ಸಿನ ಸಂಪ ರ್ಕದಿಂದ ಅವನ ಬೇಸರ ಅರ್ಧ ಪರಿಹಾರವಾಯಿತು. ಈ ವೃದ್ಧರ ಪೂಜಾ -ಪಾಠ, ಉಪಾಸನೆಗಳು ಅಷ್ಟಾಗಿ ಇಲ್ಲದಿದ್ದರೂ, ಇವರಿಗೆ ಧರ್ಮದಲ್ಲಿ ಪ್ರಾಣ ಕ್ಕಿಂತಲೂ ಹೆಚ್ಚು ದೀಕ್ಷೆಯೆಂದೂ, ಅದೇ ಅವರಿಗೆ ಸರಿಯಾದ ಮಾರ್ಗ ವನ್ನು ತೋರಿಸಿದೆಯೆಂದೂ ನರೇಂದ್ರನಿಗೆ ಅವರೊಡನೆ ಮಾತಾಡುವಾಗ ಅರ್ಥವಾಯಿತು. ಅವರಿಗೆ ಯಾವ ಧರ್ಮದಲ್ಲೂ ದ್ವೇಷವಿರಲಿಲ್ಲ. ಮನು ಷ್ಯನ ಹೃದಯ ಶುದ್ಧವಾಗಿದ್ದರೆ, ಎಲ್ಲ ಧರ್ಮಗಳೂ ಅವನಿಗೆ ಸರಿಯಾದ

ಪಾಠವನ್ನೇ ಕಲಿಸಿಕೊಡುತ್ತೇವೆಂಬುದೇ ಅವರ ದೃಢವಿಶ್ವಾಸ. ಅವರಿಗೆ ಬ್ರಾಹ್ಮಮತದಲ್ಲಿ ಅಷ್ಟು ಘೋರ ದೀಕ್ಷೆ ಇಲ್ಲದಿರುವುದು ವಿಲಾಸ ಬಿಹಾರಿಯ ಕಿವಿಗೆ ಬಿದ್ದರೆ ಅವರ ಆಚಾರ್ಯಸ್ಥಾನ ಉಳಿಯುತ್ತಿತ್ತೋ ಇಲ್ಲವೋ. ಅಂತೂ ಅವರ ಶಾಂತವಾದ, ಹಿತವಾದ, ಅನುದ್ವೇಗಕರವಾದ ಮಾತನ್ನು ಕೇಳಿ ನರೇಂದ್ರ ಮುಗ್ಧನಾದ. ಅವರು ರಾಸಬಿಹಾರಿ ಮತ್ತು ವಿಲಾಸಬಿಹಾರಿಯರಿಬ್ಬರನ್ನು ಹೊಗಳಿದರು.ಅವರು ಯಾರವಿಷಯವನ್ನು ಮಾತಾಡಿದರೂ ಅವರ ಸಮನಾದ ಸಾಧುಗಳನ್ನು ತಾವು ಪ್ರಪಂಚದಲ್ಲಿ ಬೇರೆ ಯಾರನ್ನೂ ನೋಡಲಿಲ್ಲವೆಂದು ಹೇಳುತ್ತಿದ್ದರು. ಆ ವೃದ್ಧರು ಹೀಗೆ ಹೇಳುತ್ತಿದ್ದುದನ್ನು ನೋಡಿ ನರೇಂದ್ರ ಮನಸ್ಸಿನಲ್ಲೇ ಚೆನ್ನಾಗಿ ನಕ್ಕ. ಕೊನೆಗೆ ವಿಲಾಸನ ವಿಷಯ ಬಂದಾಗಲೂ ಅವರು ಬಹಳ ತೃಪ್ತಿಯಿಂದ ಮಾತಾಡಿ ಕೊನೆಗೆ 'ಮುಂದಿನ ವೈಶಾಖದಲ್ಲೇ ಅವರ ಲಗ್ನವೆಂದೂ, ಆಗ ನಾನೇ ಆಚಾರ್ಯ ಸ್ಥಾನದಲ್ಲಿರಬೇಕೆಂದೂ ವಿಜಯಳು ಹೇಳಿದಳು' ಎಂದು ಹೇಳಿದರು. ಈ ವಿವಾಹವೇ ಬ್ರಹ್ಮಸಮಾಜದಲ್ಲಿ ವಿವಾಹದ ನಿಜವಾದ ಆದರ್ಶವನ್ನು ಎತ್ತಿ ಹಿಡಿಯತಕ್ಕದ್ದೆಂದು ಹೇಳುವುದಕ್ಕೂ ಅವರು ಮರೆಯಲಿಲ್ಲ.

ಆದರೆ ಆ ವೃದ್ಧರು ಇಷ್ಟು ಸಂತೋಷ ಮತ್ತು ಉತ್ಸಾಹದಿಂದ ಹೇಳುವಾಗ ಆ ನರೇಂದ್ರನ ಮುಖವನ್ನೊಮ್ಮೆ ಗಮನಿಸಿದ್ದರೆ, ಅವರ ಈ ಕೊನೆಯ ಮಾತಿನಿಂದ ಅವನ ಮುಖವೆಷ್ಟು ಕಪ್ಪಿಟ್ಟಿತ್ತೆಂಬುದು ತಿಳಿಯುತ್ತಿತ್ತು. ಅವರು ಸ್ನಾನ ಮತ್ತು ಊಟಕ್ಕೆಂದು ನರೇಂದ್ರನನ್ನು ಎಷ್ಟು ಬಲವಂತ ಮಾಡಿದರೂ ಅವನು ಒಪ್ಪಲಿಲ್ಲ. ಸುಮಾರು ಒಂದೂವರೆ ಗಂಟೆ ಯಾದಮೇಲೆ ನರೇಂದ್ರ ನಿಜವಾದ ಶ್ರದ್ಧೆಯಿಂದ ನಮಸ್ಕಾರಮಾಡಿ ಹೊರ ಹೊರಟ. ಆಗ ತನಗೆ ಅಷ್ಟು ದುಃಖವಾಗಿರಲು ಕಾರಣವೇನೆಂಬುದೂ, ಪ್ರಪಂಚವೆಲ್ಲ ತನಗೇಕಿಷ್ಟು ಬೇಸರವಾಗಿ ಕಾಣುತ್ತಿದೆಂಬುದೂ ಅರ್ಥ ವಾಯಿತು. ನದಿಯನ್ನು ದಾಟುತ್ತಲೇ ಎಡಭಾಗದಲ್ಲಿ ಬಹಳ ದೂರದ ವರೆಗೂ ಜಮೀನುದಾರರ ಎತ್ತರವಾದ ಮನೆಯ ಕಡೆ ಅವನ ದೃಷ್ಟಿ ಹೋದ ಕೂಡಲೆ ಅವನ ಕಣ್ಣುಗಳೆರಡೂ ಮತ್ತೆ ಕೆಂಪಾದವು. ಅವನು ಮುಖ ತಿರುಗಿಸಿಕೊಂಡು ಮೈದಾನದ ಮೂಲಕ ರೈಲ್ವೆಸ್ಟೇಷನ್ ಕಡೆ ಜಾಗ್ರತೆ ಯಾಗಿ ಹೆಜ್ಜೆ ಇಡಲು ಶುರು ಮಾಡಿದ. ಇಂದು ಇಷ್ಟು ದೊಡ್ಡ ಪೆಟ್ಟು ಬೀಳದಿದ್ದರೆ, ಅವನಿಗೆ ತನ್ನ ಮನಸ್ಸಿನ ಓಟ ಅರ್ಥವಾಗುತ್ತಿರಲಿಲ್ಲ. ತನ್ನ

ಇಷ್ಟು ದಿನದ ಜೀವನದಲ್ಲಿ ವಿಜ್ಞಾನದ ಹೊರತು ಬೇರೆ ಯಾವುದೂ ತನಗೆ ಇಷ್ಟವಾಗಿಲ್ಲವೆಂದು ಅವನು ತಿಳಿದಿದ್ದ. ತನ್ನ ಹೃದಯದಲ್ಲಿ ಯಾವ ಕಾಲಕ್ಕೂ ಬೇರೆ ಯಾವುದಕ್ಕೂ ಸ್ಥಳ ಸಿಕ್ಕಲಾರದೆಂದು ಅವನು ಯೋಚಿಸಿದ್ದ. ಆದ್ದರಿಂದಲೇ ಇತರರಿಗೆ ಅತ್ಯಂತ ಪ್ರೀತ್ಯಾಸ್ಪದವಾದ ಎಲ್ಲ ವಸ್ತುಗಳೂ ಅವನಿಗೆ ತುಚ್ಛವಾಗಿದ್ದವು. ಆದರೆ ಇಂದು ತನ್ನ ಹೃದಯ ತನಗೇ ತಿಳಿಯದಂತೆ ಇನ್ನೊಂದು ವಸ್ತುವನ್ನು ಅಷ್ಟೇ ಏಕಾಂತಭಾವದಿಂದ ಪ್ರೀತಿಸಿದೆಯೆಂಬುದರ ಅರಿವಾದ ಕೂಡಲೆ ಅವನು ವ್ಯಥೆ ಮತ್ತು ಆಶ್ಚರ್ಯದಿಂದ ದಂಗಾದದ್ದಲ್ಲದೆ, ತನ್ನ ಮನಸ್ಸಿಗೆ ತಾನು ಅತಿ ತುಚ್ಛನಾಗಿ ಕಂಡ. ಈಗ ಎಲ್ಲ ವಿಷಯಗಳೂ ಅವನಿಗೆ ಸ್ಪಷ್ಟವಾಗಿ ಅರ್ಥವಾದವು. ವಿಜಯಳ ಆಚರಣೆಯೆಲ್ಲ....ಅವಳ ಮಾತುಕತೆಗಳೆಲ್ಲವೂ ಅವನನ್ನು ಕುರಿತು ವ್ಯಂಗ್ಯ ಮಾಡಿದಂತೆ ತೋರಿತು. ಇದರ ಸಂಬಂಧವಾಗಿ ಅವಳು ವಿಲಾಸನೊಂದಿಗೆ ಅದೆಷ್ಟು ಹಾಸ್ಯಮಾಡಿ ನಕ್ಕಿರಬಹುದೆಂಬುದು ಅವನ ಮನಸ್ಸಿಗೆ ಬಂದ ಕೂಡಲೆ ನಾಚಿಕೆಯಿಂದ ಅವನು ಕುಗ್ಗಿ ಹೋದ. ಅವಳು ತನ್ನ ಸರ್ವಸ್ವವನ್ನೂ ಕಿತ್ತುಕೊಂಡು ತನ್ನನ್ನು ಹೊರ ಹಾಕಿದ್ದೇನೂ ಬಹಳ ಹಳೆಯ ಮಾತಲ್ಲ. ಅಂತಹವಳ ಎದುರಿಗೇ ದೈನ್ಯದಿಂದ ತನ್ನದಾಗಿ ಉಳಿದಿದ್ದ ಆ ಕೊನೆಯ ಪದಾರ್ಥವನ್ನೂ ಮಾರಿಬಿಡಲು ಬಾಯಿ ಬಿಡುವಂತಹ ಕೆಟ್ಟ ಬುದ್ಧಿಯೇಕೆ ತನಗೆ ಬಂದಿದ್ದೀತು? ಎಂದು ತನ್ನನ್ನು ತಾನೇ ಅನೇಕಬಾರಿ ಧಿಕ್ಕರಿಸಿಕೊಳ್ಳುತ್ತಾ ಹೇಳಿಕೊಂಡ—"ನನಗೆ ಹೀಗಾದುದು ಸರಿಯೇ. ಆ ನಿಷ್ಠುರ ಹೆಂಗಸಿನ ಮಾತಿಗೆ ನನ್ನ ಕೆಲಸ ಕಾರ್ಯಗಳನ್ನೆಲ್ಲ ಬಿಟ್ಟು ಹೀಗೆ ಬಿಸಲಿನಲ್ಲಿ ಓಡಿಬಂದ ನನಗೆ ಸರಿಯಾದ ಶಿಕ್ಷೆಯಾಯಿತು. ವಿಲಾಸ ನನ್ನನ್ನು ಅವಮಾನ ಮಾಡಿ ಮನೆಯಿಂದ ಹೊರಗೆ ಹಾಕಿದ್ದು ಸರಿಯಾಯಿತು.

ಸ್ಟೇಷನ್‌ಗೆ ಬಂದಕೂಡಲೆ, ಇಷ್ಟು ಅವಾಂತರಕ್ಕೂ ಮೂಲವಾದ ಸೂಕ್ಷ್ಮದರ್ಶಿನಿಯನ್ನು ಇಟ್ಟುಕೊಂಡು ಕಾಲೀಪದ ಕುಳಿತಿದ್ದು ಅವನ ಕಣ್ಣಿಗೆ ಬಿದ್ದಿತು. ಅವನು ಹತ್ತಿರ ಬಂದು ಹೇಳಿದ—"ಡಾಕ್ಟರ್ ಬಾಬು, ಅಮ್ಮಾವ್ರು ಇದನ್ನು ನಿಮಗೆ ಕೊಟ್ಟು ಬಾ ಎಂದು ಕಳುಹಿಸಿದ್ದಾರೆ."

"ಏಕೆ?" ನರೇಂದ್ರ ಕಠಿಣಸ್ವರದಲ್ಲಿ ಕೇಳಿದ.

ಏಕೆಂಬುದು ಕಾಲೀಪದನಿಗೆ ಗೊತ್ತಿರಲಿಲ್ಲ. ಆದರೆ ಅದು ಡಾಕ್ಟರದು

ಅದಕ್ಕಾಗಿಯೇ ಇಷ್ಟು ಅವಾಂತರವಾಗಿತ್ತೆಂಬುದು ಕಾಲೀಪದನಿಗೆ ಗೊತ್ತಿತ್ತು. ಆದ್ದರಿಂದ ಅವನು ಸ್ವಲ್ಪಬುದ್ಧಿ ಖರ್ಚುಮಾಡಿ ಹೇಳಿದ—

"ನೀವು ವಾಪಸು ಕೇಳಿದ್ದಿರಲ್ಲವೇ?"

ನರೇಂದ್ರ ಮನಸ್ಸಿನಲ್ಲೇ ಇನ್ನೂ ಸಿಟ್ಟಿಗೆದ್ದು ಹೇಳಿದ—"ಉಹು. ನಾನು ವಾಪಸು ಕೇಳಲಿಲ್ಲ. ನನ್ನ ಹತ್ತಿರ ದುಡ್ಡಿಲ್ಲ."

ಇದು ಸಿಟ್ಟಿನ ಮಾತೆಂದು ಕಾಲೀಪದ ತಿಳಿದುಕೊಂಡ. ಅವನು ಬಹು ದಿವಸದ ಆಳು. ಆದ್ದರಿಂದ ದುಡ್ಡು–ಕಾಸಿನ ವಿಚಾರದಲ್ಲಿ ವಿಜಯಳ ಮನೋಭಾವವೇನೆಂಬುದು, ಅವಳ ನಡವಳಿಕೆ ಎಂತಹದೆಂಬುದು ಅವನಿಗೆ ಅನೇಕ ಬಾರಿ ತಿಳಿದಿತ್ತು. ಆದ್ದರಿಂದ ಅವನು ತನ್ನ ಬುದ್ಧಿವಂತಿಕೆಯನ್ನು ಇನ್ನು ಸ್ವಲ್ಪ ಹೆಚ್ಚು ಖರ್ಚುಮಾಡಿ, ತುಸು ನಕ್ಕು, ಉಪೇಕ್ಷೆಯಿಂದ ಹೇಳಿದ—"ಓಹೋ....ಅದೇನು ಬಹಳ ಭಾರಿ ಹಣವೇ? ನಮ್ಮ ಅಮ್ಮಾವ್ರಿಗೆ ಇನ್ನೂರು ನಾನೂರು ರೂಪಾಯಿಗಳೆಲ್ಲ ಲೆಕ್ಕವೇ? ನೀವಿದನ್ನು ತೆಗೆದುಕೊಂಡು ಹೋಗಿ, ಹಣದ ಅನುಕೂಲವಾದ ಕೂಡಲೆ ಕಳುಹಿಸಿಕೊಡಿ."

ಹಣದ ವಿಚಾರದಲ್ಲಿ ತಾನು ಕೇಳದಿದ್ದರೂ ವಿಜಯಳು ತನ್ನಲ್ಲಿ ಅಷ್ಟು ನಂಬಿಕೆ ತೋರಿಸಿದ್ದರಿಂದ ಅವನ ಸಿಟ್ಟೇನೋ ತುಸು ಶಾಂತವಾಯಿತು. ಆದರ ಅವನ ದನಿ ಮಾತ್ರ ಅಷ್ಟೇ ಬಿರುಸಾಗಿತ್ತು. ಇನ್ನೂರಕ್ಕೆ ಬದಲಾಗಿ ನಾನೂರು ಕೊಡುವುದು ತನ್ನಿಂದ ಸಾಧ್ಯವಿಲ್ಲವೆಂಬುದನ್ನು ಅವನು ವಿವರಿಸಿ ಹೇಳಿದ—"ಉಹುಂ........ಸಾಧ್ಯವಿಲ್ಲ. ನೀನಿದನ್ನು ತೆಗೆದುಕೊಂಡು ಹೋಗು ಕಾಲೀಪದ, ನನಗಿದರ ಅಗತ್ಯವಿಲ್ಲ. ಇನ್ನೂರಕ್ಕೆ ಬದಲು ನಾನೂರು ರುಪಾಯಿ ಕೊಡಲು ನನ್ನಿಂದಾಗದು."

ಕಾಲೀಪದ ಅನುನಯದಿಂದ ಬೇಡಿಕೊಂಡ—"ಉಹುಂ, ಡಾಕ್ಟರ್ ಬಾಬು ಅದು ಸಾಧ್ಯವಿಲ್ಲ. ನೀವಿದನ್ನು ಜೊತೆಗೆ ಒಯ್ಯಲೇಬೇಕು. ನಾನು ರೈಲಿನಲ್ಲಿಟ್ಟೇ ಹೋಗುತ್ತೇನೆ."

ಈ ಪದಾರ್ಥದ ವಿಷಯದಲ್ಲಿ ಅವನಿಗೊಂದು ವಿಶೇಷ ಆಸಕ್ತಿ ಇತ್ತು. ವಿಲಾಸನ ಕೆಂಗೆಣ್ಣುಗಳೆಂದರೆ ಅವನು ಭಯಪಡುತ್ತಿದ್ದ. ಅವನೆಂದರೆ ಕಾಲೀಪದನಿಗೆ ದ್ವೇಷ. ಆದ್ದರಿಂದಲೇ ನರೇಂದ್ರನಲ್ಲಿ ಕಾಲೀಪದನಿಗೆ ಸಹಾನುಭೂತಿ ಇತ್ತು. ಅದಕ್ಕಾಗಿಯೇ ಆಳು ಅದನ್ನು ತರಬೇಕಾಗಿದ್ದರೂ, ತಾನೇ ಆ ದೊಡ್ಡ ಪೆಟ್ಟಿಗೆಯನ್ನು ಹೊತ್ತು ತಂದಿದ್ದ. ನರೇಂದ್ರ ಇದಕ್ಕೆ ಹಿಂದೆ

ಮುಂದೆ ನೋಡುತ್ತಿದ್ದಾನೆಂದು ತಿಳಿದು ಅವನು ಇನ್ನೂ ಹತ್ತಿರ ಹೋಗಿ ಗಂಟಲು ಸರಿಮಾಡಿಕೊಂಡು ಹೇಳಿದ—"ನೀವಿದನ್ನು ತೆಗೆದುಕೊಂಡು ಹೋಗಿ ಡಾಕ್ಟರ್ ಬಾಬು. ಅಮ್ಮಾವ್ರಿಗೆ ಗುಣವಾದಗೆ ಅವರು ಇದರ ಬೆಲೆಯನ್ನು ತೆಗೆದುಕೊಳ್ಳದೇ ಬಿಟ್ಟರೂ ಬಿಡಬಹುದು."

ಇದನ್ನು ಕೇಳಿ ನರೇಂದ್ರನಿಗೆ ಸಿಟ್ಟು ಮಿತಿಮೀರಿತು. 'ಅವಳು ಕರೆಸಿದಳು. ವಿಲಾಸ ಅವಮಾನ ಮಾಡಿದ. ಇದೂ ಅವಳ ಹಾಸ್ಯದ ಕೆಲಸವೆಂದೇ ತೋರುತ್ತೆ' ಎಂದುಕೊಂಡ.

ಪ್ಲ್ಯಾಟ್‌ಫಾರಂನ ಮೇಲೆ ಇನ್ನೂ ಅನೇಕ ಜನರಿದ್ದರು. ಆದ್ದರಿಂದ ಕಾಲೀಪದನ ಈ ಮಾತಿಗೆ ನರೇಂದ್ರ ಏನೂ ಹೇಳಲಾರದೆ ತನ್ನನ್ನೇ ಸುಧಾರಿಸಿಕೊಂಡು ಹೊರಗಡೆ ಬೆರಳು ತೋರಿಸಿ ಹೇಳಿದ—"ನನ್ನ ಎದುರಿಗೆ ನಿಲ್ಲಬೇಡ. ಹೊರಡು" ಎಂದು ಮುಖ ತಿರುಗಿಸಿಕೊಂಡ. ಕಾಲೀಪದನಿಗೆ ದಿಕ್ಕು ತೋರದೆ ವಿಹ್ವಲನಾಗಿ ನಿಂತುಬಿಟ್ಟ. ನಡೆದದ್ದೇನೆಂಬುದೇ ಅವನಿಗೆ ಅರ್ಥವಾಗಲಿಲ್ಲ. ಸುಮಾರು ಕಾಲುಗಂಟೆಯಾದಮೇಲೆ ಗಾಡಿ ಬಂದಿತು. ನರೇಂದ್ರ ಅದರಲ್ಲಿ ಕುಳಿತ. ಕಾಲೀಪದ ಫಸ್ಟ್‌ಕ್ಲಾಸ್ ಗಾಡಿಯ ಹತ್ತಿರ ಹೋಗಿ "ಡಾಕ್ಟರ್ ಬಾಬು!" ಎಂದ.

ನರೇಂದ್ರ ಬೇರೆ ಕಡೆ ನೋಡುತ್ತಿದ್ದ. ಅವನು ಈ ಕಡೆ ತಿರುಗುತ್ತಲೇ ಅವನ ದೃಷ್ಟಿ ಕಾಲೀಪದನ ಸಪ್ಪೆ ಮೋರೆಯ ಮೇಲೆ ಬಿದ್ದಿತು. ಆ ಆಳಿನೊಂದಿಗೆ ಕಟುವಾದ ವ್ಯವಹಾರ ಮಾಡಿದ್ದಕ್ಕಾಗಿ ಅವನಿಗೆ ಸ್ವಲ್ಪ ಮನಸ್ಸು ನೊಂದಿತ್ತು. ಆದ್ದರಿಂದ ಅವನು ನಕ್ಕು ಕರುಣೆಯಿಂದಲೇ ಕೇಳಿದ—

"ಇನ್ನೇಕೆ ಬಂದೆಯೋ?"

ಅವನೊಂದು ಚೂರು ಕಾಗದವನ್ನೂ ಸೀಸದಕಡ್ಡಿಯನ್ನೂ ಹೊರ ತೆಗೆದು ಹೇಳಿದ—"ತಾವು ದಯಮಾಡಿ ತಮ್ಮ ವಿಳಾಸವನ್ನು........"

"ನನ್ನ ವಿಳಾಸ ತೊಗೊಂಡು ಏನು ಮಾಡುತ್ತೀಯೇ?"

"ನಾನೇನೂ ಮಾಡುವುದಿಲ್ಲ. ಅಮ್ಮಾವ್ರು ಹೇಳಿದ್ರು........"

ಅಮ್ಮಾವ್ರ ಹೆಸರು ಕೇಳಿದ ಕೂಡಲೆ ಸಿಟ್ಟಿನಿಂದ ನರೇಂದ್ರ ಮೈ ಮರೆತು ಜೋರಾಗಿ ಗದರಿಸಿ ಹೇಳಿದ—"ತೊಲಗಾಚೆ ಕತ್ತೆ!"

ಕಾಲೀಪದ ಗಾಬರಿಯಾಗಿ ಎರಡು ಹೆಜ್ಜೆ ಹಿಂದಿಟ್ಟ. ಕೂಡಲೆ ರೈಲು ಹೊರಟಿತು.

ಕಾಲೀಪದ ಹಿಂದಿರುಗಿ ಮಹಡಿಯ ಮೇಲಿನ ಕೋಣೆಗೆ ಹೋದ. ಆಗ ವಿಜಯಳು ಮಂಚದ ಪಟ್ಟಿಗೆ ತಲೆಕೊಟ್ಟು ಕಣ್ಣುಮುಚ್ಚಿ ಕುಳಿತಿದ್ದಳು. ಹೆಜ್ಜೆಯ ಸದ್ದಾದ ಕೂಡಲೆ ಅವಳು ಕಣ್ಣು ಬಿಟ್ಟಳು. ಕೂಡಲೆ ಕಾಲೀಪದ ಹೇಳಿದ—“ತೆಗೆದುಕೊಂಡು ಹೋಗಿ ಕೊಟ್ಟೆ. ಆದರೆ ಅವರು ತೆಗೆದು ಕೊಳ್ಳಲಿಲ್ಲ.”

ವಿಜಯಳ ದೃಷ್ಟಿಯಲ್ಲಿ ವೇದನೆಯಾಗಲೀ ಆಶ್ಚರ್ಯವಾಗಲೀ ತೋರ ಲಿಲ್ಲ. ಕಾಲೀಪದ ಕೈಯಲ್ಲಿದ್ದ ಕಾಗದ ಮತ್ತು ಸೀಸದಕಡ್ಡಿಯನ್ನು ಮೇಜಿನ ಮೇಲಿಟ್ಟು ಹೇಳಿದ—“ಅಬ್ಬಬ್ಬ. ಏನು ಸಿಟ್ಟಪ್ಪ! ವಿಳಾಸವನ್ನು ಕೇಳಿದರೆ ಹೊಡೆಯಲು ಬಂದುಬಿಟ್ಟರು.” ಇದಕ್ಕೂ ವಿಜಯಳು ಉತ್ತರ ಕೊಡಲಿಲ್ಲ.

ನರೇಂದ್ರನ ಆಗ್ರಹಕ್ಕೆ ಅಮ್ಮಾವ್ರು ಏನು ಉತ್ತರ ಹೇಳಬಹುದೆಂದು ಕಾಲೀಪದ ದಾರಿಯಲ್ಲೆಲ್ಲ ಯೋಚಿಸುತ್ತ ಬಂದಿದ್ದ. ಆದರೆ ಇಲ್ಲಿ ಏನೂ ಉತ್ತರ ದೊರೆಯದಿದ್ದುದಕ್ಕಾಗಿ ಅವನು ಅವಳ ಮುಖ ನೋಡಿದ. ಅವಳ ದೃಷ್ಟಿ ನಿರ್ವಿಕಾರವಾಗಿ ಶೂನ್ಯವಾಗಿತ್ತು. ತನಗೆ ಈ ವ್ಯರ್ಥಕೆಲಸವನ್ನು ಬೇಕೆಂದೇ ಅವಳು ಒಪ್ಪಿಸಿದ್ದಾಳೆಂದು ತಿಳಿದು ಅವನು ಸ್ವಲ್ಪ ಹೊತ್ತು ಬೆಪ್ಪಾಗಿ ನಿಂತಿದ್ದು ನಿಧಾನವಾಗಿ ಹೊರಗೆ ಹೋದ.

ಐದಾರು ದಿನಗಳಲ್ಲಿ ವಿಜಯಳ ಖಾಯಿಲೆ ಗುಣವಾದರೂ, ಅವಳು ಪೂರ್ಣ ಆರೋಗ್ಯ ಪಡೆಯಲು ಬಹಳ ದಿನಗಳು ಹಿಡಿದವು. ವಿಲಾಸ ಒಳ್ಳೆಯ ಡಾಕ್ಟರಿಂದ ಉತ್ತಮವಾದ ಔಷಧ ಪಥ್ಯ ಕೊಡಿಸಿದರೂ ಅವಳ ನಿಶ್ಶಕ್ತಿ ದಿನದಿನಕ್ಕೂ ಹೆಚ್ಚುತ್ತಿತ್ತು. ಫಾಲ್ಗುಣ ತಿಂಗಳೂ ಮುಗಿಯುತ್ತ ಬಂದಿತು. ಮಧ್ಯ ಚೈತ್ರ ಮಾತ್ರ ಬಾಕಿ ಉಳಿದಿತ್ತು. ವೈಶಾಖದ ಮೊದಲ ವಾರದಲ್ಲೇ ಲಗ್ನ ನೆರವೇರಿಸಬೇಕೆಂದು ರಾಸಬಿಹಾರಿಯ ಸಂಕಲ್ಪ. ಆದರೆ ಕನ್ಯೆ ದಿನ ದಿನಕ್ಕೂ ಕೃಶಳಾಗುತ್ತಿದ್ದುದನ್ನು ನೋಡಿ ಅವನು ಪ್ರತಿನಿತ್ಯವೂ ಒಂದುಸಲ ಬಂದು ಪೇಚಾಡಿ ಹೋಗುತ್ತಿದ್ದ. ಎಲ್ಲ ರೀತಿಯ ಪ್ರಯತ್ನಗಳು ನಡೆಯು ತ್ತಿದ್ದರೂ, ಇದೇನೆಂಬುದೇ ಅವನಿಗೆ ತಿಳಿಯಬೊಲ್ಲದು. ಆ ಸೂಕ್ಷ್ಮದರ್ಶಿ ನಿಯ ಘಟನೆ ಎಷ್ಟೋ ರೀತಿ ಅತಿಶಯೋಕ್ತಿಯಿಂದ ಆ ತಂದೆಮಕ್ಕಳ ಕಿವಿಗೆ ಬಿದ್ದಿತ್ತು. ಇದನ್ನು ಕೇಳಿ ಮಗ ಸಿಟ್ಟಿನಿಂದ ಹಾರಾಡಿದಂತೆಲ್ಲ ತಂದೆ ಅವನನ್ನು ಸಮಾಧಾನ ಪಡಿಸುತ್ತಿದ್ದ. ಹೀಗೆ ಸಣ್ಣ ವಿಷಯಗಳಿಗೆಲ್ಲ

ಸಿಡುಗುಟ್ಟುವುದು ವ್ಯರ್ಥವಷ್ಟೇ ಅಲ್ಲ ಅದರಿಂದ ವಿಜಯಳ ದೇಹಸ್ಥಿತಿಯ ಮೇಲೂ ದುಷ್ಪರಿಣಾಮವಾದೀತೆಂದು ಕೊನೆಗೊಂದು ದಿನ ತಂದೆ ಮಗ ನಿಗೆ ಬುದ್ಧಿ ಹೇಳಿದ. ವಿಲಾಸ ಪ್ರಪಂಚದಲ್ಲಿ ಯಾರನ್ನು ಎಷ್ಟೇ ಉಪೇಕ್ಷೆ ಯಿಂದ ಕಂಡರೂ, ತಂದೆಯ ಕುಶಾಗ್ರ ಬುದ್ಧಿಗೆ ಅವನು ಮನಸ್ಸಿನಲ್ಲೇ ಗೌರವಿಸುತ್ತಿದ್ದ. ಅನೇಕ ವಿಷಯಗಳಲ್ಲಿ ತಂದೆಯ ಬುದ್ಧಿಮತ್ತೆಯ ಉತ್ತಮ ನಿದರ್ಶನಗಳು ಅವನಿಗೆ ಕಂಡುಬಂದಿತ್ತು. ಆದ್ದರಿಂದ ಅವನ ಮನಸ್ಸಿನಲ್ಲಿ ಎಷ್ಟೇ ವಿಷ ತುಂಬಿದ್ದರೂ ಅದನ್ನು ಅವನು ಹೊರಗೆಡಹಲಿಲ್ಲ. ಆದರೆ ಅವನಿಂದ ಇನ್ನು ಸಹಿಸಲಾಗಲಿಲ್ಲ. ಒಂದು ದಿನ ಇದ್ದಕ್ಕಿದ್ದಂತೆ ಅವನು ಕಾಲೀಪದನನ್ನು ಬೈಯಲು ಶುರು ಮಾಡಿದ್ದಲ್ಲದೆ ಅವನನ್ನು ಹೊಡೆ ಯಲು ಹೋದ. ಕೊನೆಗೆ ಅವನ ಸಂಬಳವನ್ನು ಇತ್ಯರ್ಥ ಮಾಡುವಂತೆ ಗುಮಾಸ್ತನಿಗೆ ಹೇಳಿ ಅವನನ್ನು ಕೆಲಸದಿಂದ ತೆಗೆದು ಹಾಕಿದ.

ಡಾಕ್ಟರು ಬೆಳಿಗ್ಗೆ ಸಂಜೆ ಹೊರಗೆ ಗಾಳಿ ಸೇವನೆಗಾಗಿ ಹೋಗ ಬೇಕೆಂದು ವಿಜಯಳಿಗೆ ಹೇಳಿದ್ದರು. ಅಂದು ಬೆಳಿಗ್ಗೆ ಅವಳು ನದೀತೀರ ದಲ್ಲಿ ಸ್ವಲ್ಪ ಸುತ್ತಾಡಿ ಮನೆಗೆ ಹಿಂತಿರುಗಿದಳು. ಅಷ್ಟರಲ್ಲೇ ಕಾಲೀಪದ ಸಪ್ಪೆ ಮೋರೆಯಿಂದ ಬಂದು ಹೇಳಿಕೊಂಡ—" ಅಮ್ಮಾ ಚಿಕ್ಕಬಾಬುಗಳು ಅಪ್ಪಣೆ ಕೊಟ್ಟುಬಿಟ್ಟರು."

" ಏಕೆ ? " ವಿಜಯಳು ಆಶ್ಚರ್ಯದಿಂದ ಕೇಳಿದಳು.

ಕಾಲೀಪದ ಅಳುತ್ತಾ ಹೇಳಿದ—" ಯಜಮಾನರು ಸ್ವರ್ಗದಲ್ಲಿದ್ದಾರೆ. ಒಂದು ದಿನವೂ ಅವರಿಂದ ಒಂದು ಮಾತನ್ನೂ ಕೇಳಲಿಲ್ಲ. ಆದರೆ ಈಗ...." ಎಂದು ಅವನು ಕಣ್ಣನ್ನು ಒರೆಸಿಕೊಳ್ಳಲು ಶುರು ಮಾಡಿದ. ಆಮೇಲೆ ಹೇಗೋ ಗಂಟಲು ಸರಿಮಾಡಿಕೊಂಡು ಗೊಣಗುಟ್ಟುತ್ತಾ ಹೇಳಿದ— " ನಾನೇನೂ ತಪ್ಪು ಮಾಡದಿದ್ದರೂ, ' ಡಾಕ್ಟರರಿಗೆ ಸೂಕ್ಷ್ಮದರ್ಶಿನಿಯನ್ನು ತೆಗೆದುಕೊಂಡು ಹೋದ್ದನ್ನು ನನಗೇಕೆ ಹೇಳಲಿಲ್ಲ. ಅವರನ್ನೇಕೆ ಕರೆದು ಕೊಂಡು ಬಂದೆ ' ಎಂದು ಏನೇನೋ ರೇಗಿ ಚಿಕ್ಕಬಾಬುಗಳು ನನ್ನನ್ನು...."

ವಿಜಯಳು ಕುರ್ಚಿಯ ಮೇಲೆ ಕುಳಿತಿದ್ದವಳು ಬಹಳ ಹೊತ್ತಿನ ವರೆಗೂ ಸುಮ್ಮನಿದ್ದು ಆಮೇಲೆ ಕೇಳಿದಳು—" ಅವರೆಲ್ಲಿ ? "

" ಕಚೇರಿಯಲ್ಲಿ ಕುಳಿತು ಕಾಗದ-ಪತ್ರ ನೋಡುತ್ತಿದ್ದಾರೆ " ಕಾಲೀ ಪದ ಹೇಳಿದ.

ವಿಜಯಳು ಒಂದು ಕ್ಷಣ ಹಿಂದುಮುಂದು ನೋಡಿ ಹೇಳಿದಳು—"ಉಂ ಈಗೇನೂ ಬೇಡ.... ಈಗ ನೀನು ಹೋಗಿ ಕೆಲಸ ಮಾಡು" ಎಂದು ತಾನೇ ಎದ್ದು ಹೋದಳು. ಒಂದು ಗಂಟೆಯಾದಮೇಲೆ ವಿಲಾಸ ಕಚೇರಿಯಿಂದ ಮನೆಗೆ ಹೋಗುತ್ತಿದ್ದುದನ್ನು ಅವಳು ಕಿಟಕಿಯಿಂದ ನೋಡಿದಳು. ಅವನಿಂದು ತನ್ನ ಯೋಗಕ್ಷೇಮ ವಿಚಾರಿಸಲು ಈ ಕಡೆ ಏಕೆ ಬರಲಿಲ್ಲವೆಂಬುದು ಅರ್ಥವಾಯಿತು.

ದಯಾಳರು ಪೂರ್ಣ ಆರೋಗ್ಯ ಹೊಂದಿ ಮತ್ತೆ ಮೊದಲಿನಂತೆ ತಮ್ಮ ಕೆಲಸಕ್ಕೆ ಹಾಜರಾದರು. ಸಂಜೆಗೆ ಅವರು ಮನೆಗೆ ಹೋಗುವಾಗ ವಿಜಯಳು ಅವರ ಜೊತೆಗೆ ಸ್ವಲ್ಪ ದೂರಹೋಗಿ ವಾಪಸು ಬರುತ್ತಿದ್ದಳು.

ನರೇಂದ್ರನಲ್ಲಿ ದಯಾಳರ ಕೃತಜ್ಞತೆ ತುಂಬಿ ಹೊರಸೂಸುತ್ತಿತ್ತು. ಖಾಯಿಲೆಯ ವಿಚಾರ ಬಂದಕೂಡಲೆ ಆ ವೃದ್ಧರು ಅನೇಕ ರೀತಿಯಾಗಿ ನರೇಂದ್ರನನ್ನು ಹೊಗಳಲು ಶುರು ಮಾಡಿದ್ದರು. ವಿಜಯಳು ಎಲ್ಲವನ್ನೂ ಬಾಯಿ ಮುಚ್ಚಿಕೊಂಡು ಕೇಳುತ್ತಿದ್ದಳು. ಯಾವ ರೀತಿಯ ಉತ್ಸಾಹವನ್ನೂ ತೋರಿಸುತ್ತಿರಲಿಲ್ಲ. ಆದ್ದರಿಂದ ಅದೇ ಡಾಕ್ಟರನ್ನು ಕರೆದು ನಿನ್ನ ದೇಹಸ್ಥಿತಿಯನ್ನೂ ತೋರಿಸೆಂದು ದಯಾಳರು ಹೇಳಬಯಸಿದರೂ ಬಾಯಿಬಿಟ್ಟು ಹೇಳಲಿಲ್ಲ. ಒಳಗಿನ ರಹಸ್ಯ ಅವರಿಗೆ ಇದುವರೆಗೂ ತಿಳಿಯದಿದ್ದುದರಿಂದ, ವಿಜಯಳು ಉದಾಸೀನಳಾಗಿರುತ್ತಿದ್ದುದನ್ನು ನೋಡಿ ಅವರಿಗೆ ಬಹಳ ವ್ಯಥೆಯಾಗುತ್ತಿತ್ತು. 'ನರೇಂದ್ರ ವಯಸ್ಸಿನಲ್ಲಿ ಚಿಕ್ಕವನಾದರೂ ನೀನು ಈಗ ಚಿಕಿತ್ಸೆಪಡೆಯುತ್ತಿರುವ ಅನೇಕ ದೊಡ್ಡ ದೊಡ್ಡ ಡಾಕ್ಟರುಗಳಿಗಿಂತ ಎಷ್ಟೋ ಬುದ್ಧಿವಂತ' ನೆಂದು ನಾನಾ ಭಂಗಿಯಿಂದ ಹೇಳಬಯಸುತ್ತಿದ್ದರು.

ಆದರೆ ಅಂತರಂಗ ತಿಳಿಯಲು ಅವರಿಗೆ ಬಹಳ ದಿನಗಳು ಹಿಡಿಯಲಿಲ್ಲ. ಐದಾರು ದಿನಗಳಮೇಲೆ ಒಂದು ದಿನ ಅವರು ಇದ್ದಕ್ಕಿದ್ದಂತೆ ವಿಜಯಳ ಕೋಣೆಗೆ ಬಂದು ಹೇಳಿದರು—"ಕಾಲೀಪದನನ್ನು ಮನೆಯಲ್ಲಿ ಇಟ್ಟುಕೊಳ್ಳುವುದು ನನ್ನಿಂದ ಇನ್ನು ಸಾಧ್ಯವಿಲ್ಲ."

ವಿಜಯಳಿಗೆ ಮೊದಲೇ ಈ ಸಂದೇಹವಿದ್ದರೂ "ಏಕೆ?" ಎಂದು ಕೇಳಿದಳು.

"ನಿನ್ನ ಮನೆಯಲ್ಲಿ ಇಟ್ಟುಕೊಳ್ಳದಿದ್ದವನನ್ನು ನಾನು ಯಾವ ಧೈರ್ಯದಮೇಲೆ ಇಟ್ಟುಕೊಳ್ಳಲಿ? ಹೇಳು."

" ಅದೂ ನನ್ನ ಮನೆಯಲ್ಲವೇ ?" ವಿಜಯಳು ಮನಸ್ಸಿನಲ್ಲೇ ಸಿಟ್ಟಾಗಿ ಕೇಳಿದಳು.

ದಯಾಳರು ಸಂಕೋಚದಿಂದ ಹೇಳಿದರು—"ಅದೇನೋ ನಿಜ ಮಗು. ನಾವೆಲ್ಲ ನಿನ್ನ ಆಶ್ರಿತರೇ. ಆದರೂ........"

" ಅವರು ಬೇಡವೆಂದು ಹೇಳಿದ್ದಾರೆಯೇ ?"

ದಯಾಳರು ಸುಮ್ಮನಿದ್ದರು. ವಿಷಯ ಗೊತ್ತಾದಮೇಲೆ ವಿಜಯಳು ಹೇಳಿದಳು—"ಹಾಗಾದರೆ ಕಾಲೀಪದನನ್ನು ನನ್ನ ಹತ್ತಿರವೇ ಕಳುಹಿಸಿ. ಅವನು ತಂದೆಯವರ ಆಳು. ಅವನನ್ನು ಕಳಿಸುವುದಕ್ಕಾಗುವುದಿಲ್ಲ."

ದಯಾಳರು ಒಂದುಕ್ಷಣ ಸುಮ್ಮನಿದ್ದು ಸಂಕೋಚದಿಂದ ಹೇಳಿದರ —" ಅದು ಸರಿಯಲ್ಲ ವಿಜಯ. ಅವರನ್ನು ಅವಹೇಳನಮಾಡುವುದು ನಿನ್ನ ಕರ್ತವ್ಯವಲ್ಲ."

ಹಾಗಾದರೆ ಏನುಮಾಡಬೇಕೆನ್ನುತ್ತೀರಿ ? "

" ನೀನೇನೂ ಮಾಡಬೇಕಾಗಿಲ್ಲ. ಕಾಲೀಪದನೇ ಮನೆಗೆ ಹೋಗ ಬೇಕೆಂದಿದ್ದಾನೆ. ಅವನನ್ನು ಸ್ವಲ್ಪ ದಿವಸ ಕಳುಹಿಸಿಕೊಡಬಾರದೇಕೆ ? "

ವಿಜಯಳು ಬಹಳ ಹೊತ್ತು ಸುಮ್ಮನಿದ್ದು ಒಂದು ನಿಟ್ಟುಸಿರು ಬಿಟ್ಟು ಹೇಳಿದಳು—"ಉಂ, ಹಾಗಾದರೆ ಹಾಗೇ ಆಗಲಿ. ಆದರೆ ಹೋಗುವ ಮುನ್ನ ನನ್ನನ್ನೊಮ್ಮೆ ಬಂದು ನೋಡುವಂತೆ ಅವನಿಗೆ ಹೇಳಿ."

ದೀರ್ಘವಾದ ಬಿಸಿಯುಸಿರಿನ ಶಬ್ದ ಕೇಳಿ ದಯಾಳರು ಚಕಿತರಾಗಿ ಮುಖವೆತ್ತಿ ನೋಡಿದರು. ವಿಜಯಳ ಮುಖದಮೇಲೆ ತೀವ್ರ ತಿರಸ್ಕಾರ ಭಾವನೆ ಮೂಡಿತ್ತು. ಅವರು ಸ್ತಬ್ಧರಾದರೂ, ಇದರ ವಿಚಾರ ಹೆಚ್ಚಾಗಿ ಕೇಳಲು ಅಂದು ಅವರಿಗೆ ಧೈರ್ಯವಾಗಲಿಲ್ಲ.

ಅದಾದಮೇಲೆ ನಾಲ್ಕೈದುದಿನ ಮತ್ತೆ ದಯಾಳರು ಕಾಣಲಿಲ್ಲ. ವಿಜ ಯಳು ಕಛೇರಿಯಲ್ಲಿ ವಿಚಾರಿಸಿದ್ದರಲ್ಲಿ ಅವರು ಕೆಲಸಕ್ಕೂ ಬರುವುದಿಲ್ಲವೆಂದು ತಿಳಿಯಿತು. ಇದರಿಂದ ಉದ್ವಿಗ್ನಳಾಗಿ ಅವರಲ್ಲಿ ಗೆಆಳನ್ನು ಕಳುಹಿಸಬೇಕೆಂದು ಅವಳು ಯೋಚಿಸುತ್ತಿರುವಷ್ಟರಲ್ಲೇ ಬಾಗಿಲ ಹೊರಗೆ ಅವರು ಕೆಮ್ಮುವ ಸದ್ದು ಕೇಳಿಸಿತು. ಅವಳು ಆನಂದದಿಂದ ಎದ್ದುಹೋಗಿ ಅವರನ್ನು ಅಭಿ ಮಾನದಿಂದ ಕರೆದುಕೊಂಡು ಬಂದಳು.

ದಯಾಳರ ಹೆಂಡತಿ ಯಾವಾಗಲೂ ಖಾಯಿಲೆಯವಳು. ಅವಳಿಗೆ

ಖಾಯಿಲೆ ಹೆಚ್ಚಾದ್ದರಿಂದಲೇ ಅವರು ಕೆಲವು ದಿನಗಳಿಂದ ಹೊರಹೊರಡಲಾಗಿರಲಿಲ್ಲ. ಅವರೇ ಅಡಿಗೆ ಮಾಡಬೇಕಾಗಿತ್ತು. ಅವರ ಮುಖದಲ್ಲಿ ಹೆಚ್ಚು ಉದ್ವೇಗವಿಲ್ಲದಿದ್ದುದನ್ನು ನೋಡಿ ಹೆಚ್ಚೇನೂ ಭಯವಿಲ್ಲವೆಂದು ಅವಳು ಸಮಾಧಾನಪಟ್ಟುಕೊಂಡು "ಈಗ ಅವರು ಹೇಗಿದ್ದಾರೆ?" ಎಂದು ಕೇಳಿದಳು.

"ಇವತ್ತು ಆರೋಗ್ಯವಾಗಿದ್ದಾಳೆ. ನರೇಂದ್ರಬಾಬುಗಳಿಗೆ ಕಾಗದ ಬರೆದಿದ್ದೆ. ಅವರು ನಿನ್ನೆ ಸಂಜೆ ಬಂದು ಔಷಧ ಕೊಟ್ಟುಹೋದರು. ಅದೆಂತಹ ಅದ್ಭುತ ಚಿಕಿತ್ಸೆ ಮಗು! ಇಪ್ಪತ್ತುನಾಲ್ಕು ಗಂಟೆಯಲ್ಲೇ ಮುಕ್ಕಾಲುಭಾಗ ಗುಣವಾಗಿದೆ."

ವಿಜಯಳು ತುಟಿ ಕಚ್ಚಿ ನಕ್ಕು ಹೇಳಿದಳು—"ಗುಣವಾಗದೆ ಏನು? ಅವರ ಮೇಲೆ ನಿಮ್ಮೆಲ್ಲರ ವಿಶ್ವಾಸ ಕಡಿಮೆ ಇದೆಯೇ?"

"ಅದೇನೋ ನಿಜ. ಆದರೆ ಸುಮ್ಮನೆ ವಿಶ್ವಾಸಮಾಡುತ್ತೇವೆಯೇ? ನಾವು ಎಲ್ಲ ಪರೀಕ್ಷೆಮಾಡಿ ನೋಡಿಲ್ಲವೇ? ಅವರು ಮನೆಯಲ್ಲಿ ಕಾಲಿಟ್ಟ ಕೂಡಲೆ ಎಲ್ಲ ಗುಣವಾಗುತ್ತೆಂದು ತೋರುತ್ತೆ."

"ಓಹೋ! ಖಂಡಿತವಾಗಿ" ಎಂದು ವಿಜಯಳು ಮತ್ತೊಮ್ಮೆ ನಕ್ಕಳು. ದಯಾಳರು ತುಸು ನಕ್ಕು ಹೇಳಿದರು—"ಅವರು ಅವಳನ್ನು ಮಾತ್ರ ಚಿಕಿತ್ಸೆಮಾಡಿ ಹೋಗಿಲ್ಲ ಮಗು. ಇನ್ನೂ ಇಬ್ಬರಿಗೆ ಔಷಧಿ ಕೊಟ್ಟಿದ್ದಾರೆ" ಎಂದು ಒಂದು ಚೀಟಿಯನ್ನವರು ಮೇಜಿನಮೇಲಿಟ್ಟರು.

ಅದರಲ್ಲಿ ಯಾವುದೋ ಔಷಧದ ಹೆಸರು ಬರೆದಿತ್ತು. ಅದರಮೇಲೆ ವಿಜಯಳ ಹೆಸರು ಬರೆದಿತ್ತು. ಆ ಬರವಣಿಗೆಯಮೇಲೆ ಅವಳ ದೃಷ್ಟಿ ಬೀಳುತ್ತಲೇ ಅವಳ ಹೃದಯಕ್ಕೆ ಆನಂದದ ಬಾಣ ನೆಟ್ಟಂತಾಯಿತು. ಒಂದು ಕ್ಷಣದಲ್ಲೇ ಅವಳ ಸರ್ವಾಂಗವೂ ಆರಕ್ತವಾಗಿ ಮತ್ತೆ ಬೂದಿಯಂತೆ ಬೆಳ್ಳಗಾಯಿತು. ಆ ವೃದ್ಧರಿಗೆ ತಮ್ಮ ಸಫಲತೆಯ ವಿಷಯದಲ್ಲಿ ಆನಂದವಾಗಿ ಅವರು ಆ ಕಡೆ ಗಮನವನ್ನೂ ಕೊಡಲಿಲ್ಲ. "ನೀನು ಖಂಡಿತ ಉದಾಸೀನ ಮಾಡಬಾರದು ಮಗು. ಇದನ್ನು ತರಿಸಿ ಪರೀಕ್ಷೆಮಾಡಲೇ ಬೇಕು." ಅವರು ಹೇಳಿದರು.

ಅವಳು ತನ್ನನ್ನು ಸುಧಾರಿಸಿಕೊಂಡು ಹೇಳಿದಳು—"ಆದರೆ ಇದು ಕತ್ತಲಿನಲ್ಲಿ ಚೆಂಡು ಎಸೆದಂತೆ........"

ಆ ವೃದ್ಧರು ಗರ್ವದಿಂದ ಉಬ್ಬಿ ಹೇಳಿದರು—"ಇದೇನು ನೀನು ಹೇಳುತ್ತಿರುವುದು ಮಗು? ದುಡ್ಡು ಕೊಟ್ಟಿಗೆ ಸರಿಯಾಗಿ ಬರೆದುಕೊಡುವುದಕ್ಕೆ ಇವರನ್ನು ನಿಮ್ಮ ಆಳಲೇಕಾಯಿ ಪಂಡಿತರೆಂದು ಭಾವಿಸಿದೆಯಾ? ಇವರು ವಿಲಾಯತಿಯಲ್ಲಿ ಉತ್ತೀರ್ಣರಾಗಿ ಬಂದ ಭಾರಿ ಡಾಕ್ಟರು. ರೋಗಿಯನ್ನು ಕಣ್ಣಿಂದ ನೋಡದ ಹೊರತು ಇವರೇನೂ ಹೇಳುವುದಿಲ್ಲ. ತಮ್ಮ ಹೊಣೆಯ ಅರಿವು ಇವರಿಗೆ ಎಷ್ಟಿದೆಯೆಂದು ನಿನಗೆ ಗೊತ್ತಿದೆಯೇ?"

ವಿಜಯಳು ಆಶ್ಚರ್ಯದಿಂದ ಎರಡು ಕಣ್ಣುಗಳನ್ನೂ ಅರಳಿಸಿ ಕೇಳಿದಳು—"ತಮ್ಮ ಕಣ್ಣಿಂದ ನೋಡುವುದು ಹೇಗೆ? ಅವರು ನನ್ನನ್ನುನೋಡಿ ಹೋಗಿದ್ದಾರೆಯೇ? ಅವರು ನಿಮ್ಮ ಬಾಯಿಂದ ನನ್ನ ವಿಷಯವನ್ನು ಕೇಳಿ ಔಷಧಿ ಬರೆದುಕೊಟ್ಟಿಲ್ಲವೇ?"

ದಯಾಳರು ತಲೆಯಲ್ಲಾಡಿಸುತ್ತ ಹೇಳಿದರು—"ಉಹುಂ, ಎಂದಿಗೂ ಇಲ್ಲ. ನಿನ್ನೆ ನೀನು ನಿಮ್ಮ ಕೈತೋಟದಲ್ಲಿ ಕಂಬಿಯನ್ನು ಹಿಡಿದುಕೊಂಡು ನಿಂತಿದ್ದಾಗ ಅವರು ನಿನ್ನ ಮುಂದೆಯೇ ನಡೆದುಹೋಗಿದ್ದಾರೆ. ಆಗ ಅವರು ನಿನ್ನನ್ನು ಚೆನ್ನಾಗಿ ನೋಡಿದ್ದಾರೆ. ಆಗ ನೀನು ಅನ್ಯಮನಸ್ಕಳಾಗಿದ್ದೆಯೆಂದು ತೋರುತ್ತೆ. ಆದ್ದರಿಂದಲೇ........"

ವಿಜಯಳು ಚಕಿತಳಾಗಿ ಕೇಳಿದಳು—"ಅವರು ಸಾಹೇಬರ ಉಡುಪು ಧರಿಸಿದ್ದರೇನು? ತಲೆಯ ಮೇಲೆ ಹ್ಯಾಟ್ ಇತ್ತೇ?"

ದಯಾಳರು ಕೌತುಕದಿಂದ ಕೇಕೆಹಾಕಿ ನಕ್ಕು ಹೇಳಿದರು—"ಅವರು ನಿಜವಾದ ಐರೋಪ್ಯರಲ್ಲವೆಂದು ಆಗ ಯಾರು ಹೇಳಬಲ್ಲರು.? ಅವರನ್ನು ಆಗ ನಮ್ಮ ಬಂಗಾಳಿಗಳೆಂದು ಹೇಳಲು ಸಾಧ್ಯವಾಗುತ್ತಿತ್ತೇ? ನಾನೇ ನೋಡಿ ಬೆಚ್ಚಿಬಿದ್ದೆ."

ಎದುರಿಗೇ ಹೋಗಿದ್ದಾರೆ, ಕಣ್ಣೆದುರಿಗೇ ಹೋಗಿದ್ದಾರೆ! ಅವಳನ್ನು ನೋಡುತ್ತಲೇ ಹೋಗಿದ್ದಾರೆ. ಆದರೂ ಒಂದು ಸಲವೂ ಅವರನ್ನು ನೋಡಲಿಲ್ಲ. ಯಾರೋ ಪೋಲೀಸು ಅಧಿಕಾರಿಗಳಿರಬೇಕೆಂದು ಉದಾಸೀನದಿಂದ ತಲೆತಗ್ಗಿಸಿದ್ದಳು. ವಿಜಯಳ ಮನಸ್ಸಿನಲ್ಲಿ ಎಂತಹ ಬಿರುಗಾಳಿ ಎದ್ದಿದೆಯೆಂಬುದೇ ಆ ವೃದ್ಧರಿಗೆ ತಿಳಿಯಲಿಲ್ಲ. ಅವರು ತಮ್ಮಷ್ಟಕ್ಕೆ ತಾವೇ ಹೇಳುತ್ತಿದ್ದರು—"ಮಧ್ಯದಲ್ಲಿ ಚೈತ್ರ ತಿಂಗಳು ಮಾತ್ರ ಬಾಕಿ ಇದೆ. ವೈಶಾಖದ ಆರಂಭದಲ್ಲೋ ಅಥವಾ ಎರಡನೆಯ ವಾರದಲ್ಲೋ ಲಗ್ನ ನಡೆಯಬೇ

ಕಾಗಿದೆ. ನಾನು ಹೇಳಿದೆ–"ವಿಜಯಳ ಮೈಯಲ್ಲಿ ಸ್ವಸ್ಥವಿಲ್ಲ ಡಾಕ್ಟರ್‌ಬಾಬು ಸರಿಯಾದ ಔಷಧಿ...." ಅವರ ಬಾಯಲ್ಲಿನ ಮಾತು ಅಲ್ಲಿಗೇ ನಿಂತು ಹೋಯಿತು.

ಹೀಗೆ ಮಾತು ಅರ್ಧಕ್ಕೇ ನಿಂತುಹೋದದ್ದರಿಂದ ವಿಜಯಳು ಮುಖವೆತ್ತಿ ಅವರ ದೃಷ್ಟಿಯನ್ನನುಸರಿಸಿ ನೋಡಿದಳು. ವಿಲಾಸ ಕೋಣೆಯಲ್ಲಿ ಹೆಜ್ಜೆಯಿಡುತ್ತಿದ್ದ. ತಾನು ಬಂದಿದ್ದರಿಂದ ಇಲ್ಲಿ ನಡೆಯುತ್ತಿದ್ದ ಸಂಭಾಷಣೆ ಅರ್ಧಕ್ಕೇ ನಿಂತದ್ದು ಅವನ ಅನುಭವಕ್ಕೆ ಬಂದಿತು. ಇದರಿಂದ ವಿಲಾಸನ ಕಣ್ಣುಗಳು ಸಿಟ್ಟಿನಿಂದ ಕೆಂಪಾದವು. ಆದರೂ ಅವನು ಸಮಾಧಾನದಿಂದ ಹತ್ತಿರ ಬಂದು ಒಂದು ಕುರ್ಚಿಯಮೇಲೆ ಕುಳಿತುಕೊಂಡ. ಕಣ್ಣೆದುರಿಗೇ ಆ ಔಷಧದ ಚೀಟಿಯಿತ್ತು. ದೃಷ್ಟಿ ಬೀಳುತ್ತಲೇ ಅವನದನ್ನು ತೆಗೆದುಕೊಂಡು ಮೂರುನಾಲ್ಕುಬಾರಿ ಓದಿ ಮತ್ತೆ ಅಲ್ಲೇ ಇಟ್ಟು ಹೇಳಿದ– "ನರೇಂದ್ರಡಾಕ್ಟರನ ಚೀಟಿಯೆಂದು ತೋರುತ್ತೆ. ಅವನು ಇಲ್ಲಿಗೆ ಹೇಗೆ ಬಂದ? ಟಪಾಲಿನ ಮೂಲಕ ಕಳುಹಿಸಿದ್ದಾನೋ?"

ಯಾರೂ ಅವನ ಮಾತಿಗೆ ಉತ್ತರ ಕೊಡಲಿಲ್ಲ. ವಿಜಯಳು ಮುಖ ತಿರುಗಿಸಿಕೊಂಡು ಕಿಟಕಿಯಿಂದ ಹೊರಗೆ ನೋಡುತ್ತಿದ್ದಳು.

ವಿಲಾಸ ಅಸೂಯೆಯಿಂದ ಬೆಂದು ನಗುಮುಖದಿಂದ ಹೇಳಿದ– "ಡಾಕ್ಟರೆಂದರೆ ನರೇಂದ್ರನೇ ಡಾಕ್ಟರೆಂದು ತೋರುತ್ತೆ. ಆದ್ದರಿಂದಲೇ ಇವರು ಬೇರೆ ಔಷಧ ತೆಗೆದುಕೊಳ್ಳುತ್ತಲೇ ಇಲ್ಲ! ಸೀಸೆಯಲ್ಲಿ ಔಷಧಿ ಇದ್ದೇಯಿರುತ್ತೆ, ಆಮೇಲೆ ಇದನ್ನು ತಿಪ್ಪೆಗೆ ಚೆಲ್ಲುತ್ತಾರೆಂದು ತೋರುತ್ತೆ. ಹುಂ, ಅದೇನಾದರೂ ಆಗಲಿ. ಈ ಕಲಿಯುಗದ ಧನ್ವಂತರಿ ಈ ಚೀಟಿಯನ್ನು ಹೇಗೆ ಕಳುಹಿಸಿದ? ಹೇಳಿ. ಟಪಾಲು ಮೂಲಕನೇ?"

ಇದಕ್ಕೂ ಯಾರೂ ಉತ್ತರ ಕೊಡಲಿಲ್ಲ.

ಆಗ ಅವನು ದಯಾಳನ ಕಡೆ ತಿರುಗಿ ಕೇಳಿದ–"ನೀವಿದುವರೆಗೂ ಜೋರಾಗಿ ಉಪನ್ಯಾಸ ಹೊಡೆಯುತ್ತಿದ್ದುದನ್ನು ಮೆಟ್ಟಿಲಿನ ಹತ್ತಿರವೇ ಕೇಳಿದೆ. ನಿಮಗೆ ಏನಾದರೂ ಗೊತ್ತಿದೆಯೇ ಹೇಳಿ........ನಿಮ್ಮನ್ನೇ ಕೇಳುತ್ತಿರುವುದು. "

ಇಲ್ಲಿ ಕೆಲಸಕ್ಕೆ ಸೇರಿದಮೇಲೆ ವಿಲಾಸಬಿಹಾರಿಯೆಂದರೆ ಹುಲಿಯನ್ನು ಕಂಡಹಾಗೆ ದಯಾಳರು ಭಯಪಡುತ್ತಿದ್ದರು. ಅಲ್ಲದೆ ಕಾಲೀಪದನ

ಬಾಯಿಂದಲೂ ಅವನೆಲ್ಲ ಕೇಳಿದ್ದರು. ಆದ್ದರಿಂದಲೇ ವಿಲಾಸ ಆ ಚೀಟಿ ಯನ್ನು ತೆಗೆದುಕೊಂಡಾಗಿನಿಂದ ಅವರು ನಡುಗುತ್ತಿದ್ದರು.

ವಿಲಾಸ ಸ್ವಲ್ಪ ಹೊತ್ತಿನಮೇಲೆ ಗದರಿಸಿಕೊಂಡು ಕೇಳಿದ—"ಏನು ಜೆಕ್ಕಿನಹಾಗೆ ಸುಮ್ಮನಾದಿರಲ್ಲ? ಏನಾದರೂ ಗೊತ್ತಿದೆಯೇ ಹೇಳಿ."

ಇನ್ನೊಬ್ಬರ ಅಧೀನದಲ್ಲಿರುವ ಆಳಿನ ದೈನ್ಯ ನೋಡಿದರೆ ಎಂತಹ ವರಿಗೂ ದುಃಖವಾಗದೆ ಇರದು. ದಯಾಳರು ಗಾಬರಿಯಾಗಿ ಅಸ್ಫುಟವಾಗಿ ಹೇಳಿದರು—"ಹೌದು, ನಾವೇ ತಂದಿದ್ದೇನೆ."

"ಓಹೋ!....ನನಗೂ ಹಾಗೇ ತೋರಿತು! ಅವನೆಲ್ಲಿ ಸಿಕ್ಕ?"

ದಯಾಳರು ಆಗ ತಡೆದು ತಡೆದು ಹೇಗೋ ನಡೆದ ವಿಷಯವನ್ನು ಹೇಳಿ ಮುಗಿಸಿದರು.

ವಿಲಾಸ ಸ್ವಲ್ಪ ಹೊತ್ತು ಸ್ತಬ್ಧನಾಗಿ ಕುಳಿತಿದ್ದು ಆಮೇಲೆ ಹೇಳಿದ–

"ಹಿಂದಿನ ವರ್ಷದ ಲೆಕ್ಕ ಪೂರೈಸಿರೆಂದು ಹೇಳಿದ್ದೆ. ಮುಗಿಯಿತೇ?"

"ಎರಡು ದಿನದಲ್ಲೇ ಮುಗಿಸಿಬಿಡುತ್ತೇನೆ." ದಯಾಳರು ದೈನ್ಯದಿಂದ ಹೇಳಿದರು.

"ಏಕೆ ಮುಗಿಯಲಿಲ್ಲ?"

"ಮನೆಯಲ್ಲಿ ಬಹಳ ತೊಂದರೆಯಾಗಿತ್ತು....ಅಡಿಗೆ ಮಾಡಬೇಕಾ ಗಿತ್ತು....ಬರುವುದಕ್ಕೇ ಆಗಲಿಲ್ಲ."

ಇದಕ್ಕುತ್ತರವಾಗಿ ವಿಲಾಸ ಕಟುಸ್ವರದಲ್ಲಿ ದಯಾಳರು ತಡೆ ತಡೆದು ಹೇಳುತ್ತಿದ್ದುದನ್ನು ಅಣಕಿಸುತ್ತಾ ಕೈಯಲ್ಲಾಡಿಸುತ್ತಾ ಹೇಳಿದ—"ಬರು ವುದಕ್ಕೇ ಆಗಲಿಲ್ಲ. ಇನ್ನೇನು ನೀವು ನನ್ನನ್ನು ರಾಜನನ್ನು ಮಾಡಿ ಬಿಟ್ಟಿರಿ!" ಇನ್ನೂ ಕಠಿಣವಾಗಿ ಹೇಳಿದ—"ಇಂತಹ ಮುದುಕರುಗಳಿಂದ ಏನೂ ಕೆಲಸ ನಡೆಯುವುದಿಲ್ಲವೆಂದು ಆಗಲೇ ನಾನು ತಂದೆಯವರಿಗೆ ಹೇಳಿದ್ದೆ."

ಆಗ ವಿಜಯಳು ಮುಖ ತಿರುಗಿಸಿ ನೋಡಿದಳು. ಅವಳ ಮುಖ ಭಾವ ಶಾಂತವಾಗಿದ್ದರೂ ಕಣ್ಣುಗಳು ಕಿಡಿ ಕಾರುತ್ತಿದ್ದವು. ಅವಳು ಗಂಭೀರವಾದರೂ ಸ್ವಲ್ಪ ಕಠಿಣವಾಗಿ ಹೇಳಿದಳು—"ದಯಾಳಬಾಬು ಗಳನ್ನು ಇಲ್ಲಿಗೆ ಕರೆಸಿದವರು ಯಾರು ಗೊತ್ತಿವೆಯೇ? ನಿಮ್ಮ ತಂದೆಯವ ರಲ್ಲ, ನಾನು."

ವಿಲಾಸ ಸುಮ್ಮನಾದ. ವಿಜಯಳ ಇಂತಹ ದನಿ ಅವನು ಹಿಂದೆಂದೂ ಕೇಳಿರಲಿಲ್ಲ. ಅವಳ ಇಂತಹ ದೃಷ್ಟಿಯನ್ನೂ ಅವನು ನೋಡಿರಲಿಲ್ಲ. ಆದರೆ ಅವನೇನೂ ಇದಕ್ಕೆ ಬಗ್ಗುವವನಲ್ಲ. ಒಂದು ಕ್ಷಣ ಸುಮ್ಮನಿದ್ದು ಹೇಳಿದ —"ಯಾರಾದರೂ ಕರೆಸಿರಲಿ ನನಗದು ಬೇಕಿಲ್ಲ. ನನಗೆ ಕೆಲಸದೊಂದಿಗೆ ಮಾತ್ರ ಸಂಬಂಧ."

"ಮನೆಯಲ್ಲಿ ತೊಂದರೆ ಇದ್ದರೆ, ಅವರು ಹೇಗೆ ಕೆಲಸಕ್ಕೆ ಬರ ಬೇಕು" "

ವಿಲಾಸ ಉದ್ಧತನಾಗಿ ಹೇಳಿದ—"ಹೀಗೆ ಎಲ್ಲರೂ ತೊಂದರೆ ಹೇಳ ಬಹುದು. ಆದರೆ ತೊಂದರೆ ಕೇಳುತ್ತ ಕುಳಿತರೆ ನನ್ನ ಕೆಲಸ ನಡೆಯು ವುದಿಲ್ಲ. ಅತ್ಯಗತ್ಯದ ಕೆಲಸ ಮುಗಿಸಬೇಕೆಂದು ನಾನು ಅಪ್ಪಣೆ ಮಾಡಿದ್ದೆ. ಅದೇಕೆ ಮಾಡಲಿಲ್ಲವೆಂಬುದಕ್ಕೆ ನನಗೆ ವಿವರಣೆ ಬೇಕು. ಅವರ ತೊಂದರೆಯ ವಿಚಾರ ನನಗೆ ಬೇಕಾಗಿಲ್ಲ."

ವಿಜಯಳ ತುಟಿ ನಡುಗಿತು. ಅವಳು ಹೇಳಿದಳು—"ಎಲ್ಲರೂ ಸುಳ್ಳು ತೊಂದರೆಯನ್ನು ಹೇಳಿಕೊಳ್ಳುವುದಿಲ್ಲ. ಮಂದಿರದ ಆಚಾರ್ಯರಂತೂ ಎಂದಿಗೂ ಹೇಳಿಕೊಳ್ಳಲಾರರು. ಅದು ಹೋಗಲಿ. ಅಗತ್ಯದ ಕೆಲಸ ಆಗಲೇಬೇಕೆಂದು ನಿಮಗೆ ತಿಳಿದಿದ್ದ ಮೇಲೆ ನೀವೇ ಏಕೆ ಅದನ್ನು ಮುಗಿಸ ಲಿಲ್ಲ? ನಾನು ಕೇಳಿದ್ದಕ್ಕೆ ಈಗ ಉತ್ತರ ಕೊಡಿ. ನೀವೇಕೆ ನಾಲ್ಕುದಿನ ಕೆಲಸಕ್ಕೆ ಬರಲಿಲ್ಲ. ನಿಮಗೇನು ತೊಂದರೆ ಬಂದಿತ್ತು? ಹೇಳಿ, ಕೇಳೋಣ"

ವಿಲಾಸ ವಿಸ್ಮಯದಿಂದ ದಿಕ್ಕು ತೋರದಂತಾಗಿ ಹೇಳಿದ—"ನಾನೇ ಲೆಕ್ಕ ಬರೆದು ಪೂರೈಸಬೇಕಾಗಿತ್ತೇ? ನಾನು ಕೆಲಸಕ್ಕೇಕೆ ಬರಲಿಲ್ಲವೇ!"

"ಹೌದು, ತಿಂಗಳಿಗೆ ಇನ್ನೂರು ರುಪಾಯಿ ತೆಗೆದುಕೊಳ್ಳುತ್ತಿದ್ದೀ ರಲ್ಲ! ನಾನು ಸುಮ್ಮನೆ ಅದನ್ನು ಕೊಡುವುದಿಲ್ಲ, ಕೆಲಸಮಾಡುವುದಕ್ಕೆ ಕೊಡು ವುದು."

ವಿಲಾಸ ಯಂತ್ರದ ಗೊಂಬೆಯಂತೆ ಇಷ್ಟುಮಾತ್ರ ಹೇಳಿದ— "ನಾನೇನು ಆಳೇ?"

ಮಿತಿಮೀರಿದ ಸಿಟ್ಟಿನಿಂದ ವಿಜಯಳಿಗೆ ಹಿತಾಹಿತಜ್ಞಾನವೇ ಇಲ್ಲ ದಂತಾಯಿತು. ಅವಳು ಇನ್ನೂ ಕಟುವಾಗಿ ಹೇಳಿದಳು—"ಕೆಲಸ ಮಾಡು ವುದಕ್ಕೆ ಸಂಬಳ ಕೊಟ್ಟಮೇಲೆ ಅಂತಹರನ್ನು ಇನ್ನೇನೆನ್ನುತ್ತಾರೆ? ನಿಮ್ಮ

ಅಸಂಖ್ಯ ಉತ್ಪಾತವನ್ನು ನಾನು ಬಾಯಿಮುಚ್ಚಿಕೊಂಡು ಸಹಿಸಿಕೊಂಡು ಬಂದಿದ್ದೇನೆ. ನಾನು ಸಹಿಸಿದಷ್ಟೂ ನಿಮ್ಮ ಅನ್ಯಾಯ, ಉಪದ್ರವ ಇನ್ನೂ ಹೆಚ್ಚುತ್ತಿದೆ, ನಡೆಯಿರಿ. ಕೆಳಗೆ ಹೋಗಿ ಇಂದಿನಿಂದ ನನಗೂ ನಿಮಗೂ ಯಜಮಾನ–ನೌಕರನ ಸಂಬಂಧದ ಹೊರತು ಬೇರೆ ಸಂಬಂಧವಿಲ್ಲ. ನನ್ನ ಇತರ ಕೆಲಸಗಾರರು ಕೆಲಸಮಾಡುವ ನಿಯಮಗಳಿಗೊಳಗಾಗಿಯೇ ನೀವೂ ಕೆಲಸಮಾಡಬೇಕು. ಇಲ್ಲದಿದ್ದಗೆ ನಿಮ್ಮನ್ನು ಕೆಲಸದಿಂದ ತೆಗೆದುಹಾಕುತ್ತೇನೆ. ಇನ್ನುಮೇಲೆ ನನ್ನ ಕಛೇರಿಯಲ್ಲಿ ಕಾಲಿಡಬೇಡಿ."

ವಿಲಾಸ ಸಿಟ್ಟಿನಿಂದ ಹಾರಾಡುತ್ತಾ ಬಲಗೈಯ ಬೆಟ್ಟನ್ನು ನಡಗಿಸುತ್ತಾ ಚೀರಿದ—" ನಿನಗಿಷ್ಟು ದುಸ್ಸಾಹಸವೇ ? "

" ನನಗಲ್ಲ ದುಸ್ಸಾಹಸ, ನಿಮಗೆ. ನನ್ನ ಜಹಗೀರಿಯಲ್ಲೇ ಕೆಲಸ ಮಾಡುತ್ತಾ ನನ್ನ ಮೇಲೆ ಅತ್ಯಾಚಾರವೇ? ನನ್ನನ್ನು 'ನೀನು' ಎನ್ನುವ ಅಧಿಕಾರ ನಿಮಗೆ ಕೊಟ್ಟವರು ಯಾರು? ನನ್ನ ಆಳನ್ನು ನನ್ನ ಮನೆಯಲ್ಲೇ ಕೆಲಸದಿಂದ ತೆಗೆದುಹಾಕುವ, ನನ್ನ ಅತಿಥಿಯನ್ನು ನನ್ನ ಎದುರಿಗೇ ಅವಮಾನ ಮಾಡುವಷ್ಟು ಧೈರ್ಯ ನಿಮಗೆ ಹೇಗೆ ಬಂದಿತು ? "

ವಿಲಾಸ ಸಿಟ್ಟಿನಿಂದ ಹುಚ್ಚಾದಂತಾಗಿ ಮನೆಯೇ ನಡಗುವಂತೆ ಅರಚಿಕೊಂಡ—" ಆ ಅತಿಥಿಯ ಮೇಲೆ ನಾನು ಕೈಮಾಡನೆ ಅವನ ಕೈ ಮುರಿಯದಿದ್ದುದು ಅವರಪ್ಪನ ಪುಣ್ಯ....ನಿರ್ಲಜ್ಜ ! ಬದ್ಮಾಷ್ ! ಕಳ್ಳ ! ಲೋಫರ್ ! ಇನ್ನೆಲ್ಲಾದರೂ ಅವನನ್ನು ನೋಡಿದರೆ........"

ಈ ಧ್ವನಿಗೆ ಭಯಪಟ್ಟು ಗೋಪಾಲ ಕನ್ನಯ್ಯಸಿಂಹನನ್ನು ಕರೆದು ಕೊಂಡುಬಂದ. ಬಾಗಿಲ ಹತ್ತಿರ ಅವನು ಬಂದದ್ದನ್ನು ನೋಡಿ ನಾಚಿಕೆಯಿಂದ ವಿಜಯಳು ತನ್ನ ಕಂಠಸ್ವರವನ್ನು ತಗ್ಗಿಸಿ ಹೇಳಿದಳು—" ಅವರ ಮೈಮೇಲೆ ನೀವು ಕೈಮಾಡುವ ಸಾಹಸ ಮಾಡದಿದ್ದುದು ನಿಮ್ಮ ದೊಡ್ಡ ಭಾಗ್ಯ. ಇದು ನಿಮಗೆ ಗೊತ್ತಿಲ್ಲ. ನನಗೆ ಗೊತ್ತಿದೆ. ಅವರು ಸುಶಿಕ್ಷಿತರು, ದೊಡ್ಡ ಡಾಕ್ಟರು. ಅವರ ಮೇಲೆ ಕೈ ಮಾಡಿದ್ದರೂ ಅವರು ಒಬ್ಬ ಖಾಯಿಲೆ ಹೆಂಗಸಿನ ಕೋಣೆಯಲ್ಲಿ ಚರ್ಚೆಮಾಡದೆ ಸಹಿಸಿಕೊಂಡು ಹೋಗುತ್ತಿದ್ದರು. ನೀವು ಮಾತ್ರ ನನ್ನ ಈ ಬುದ್ಧಿವಾದವನ್ನು ಸ್ವಪ್ನದಲ್ಲೂ ಮರೆಯಬೇಡಿ. ಮುಂದೆ ಅವರ ಮೇಲೆ ಕೈಮಾಡುವ ಇಚ್ಛೆ ಇದ್ದರೆ ಹಿಂದಿನಿಂದ ಹೋಗಿ ಬೀಳಿ. ಇಲ್ಲದಿದ್ದರೆ ನಿಮ್ಮಂತಹ ಇನ್ನೂ ಐದಾರು ಜನರನ್ನು

ಕರೆದುಕೊಂಡು ಎದುರಿಗೆ ಹೋಗಿ. ಹುಂ, ಬಹಳ ಬೊಬ್ಬಾಟವಾಯಿತು. ಇನ್ನು ಸಾಕು. ಆಳುಕಾಳುಗಳೂ ಹೆದರಿ ಓಡಿಬಂದಿದ್ದಾರೆ. ಹುಂ, ಹೊರಡಿ. ಕೆಳಗೆ ಹೋಗಿ." ಎಂದು ಉತ್ತರದ ನಿರೀಕ್ಷಣೆಮಾಡದೆ ಮಗ್ಗು ಲಲ್ಲಿದ್ದ ಬಾಗಿಲಿನಿಂದ ಬೇರೆ ಕೋಣೆಗೆ ಹೊರಟುಹೋದಳು.

೧೯

ಮಗನ ಬಾಯಿಂದ ನಡೆದ ವಿಷಯವನ್ನು ಕೇಳಿ, ಸಿಟ್ಟು, ಬೇಸರ ಮತ್ತು ಆಶೆಯೆಲ್ಲ ಭಂಗವಾಯಿತೆಂಬ ನಿರಾಶೆಯಿಂದ ರಾಸಬಿಹಾರಿಯು ಬ್ರಹ್ಮಜ್ಞಾನ ಮತ್ತು ಅದಕ್ಕೆ ಸಂಬಂಧಿಸಿದ ವೇಷದ ಮುಖಭಾವವೆಲ್ಲ ಮಾಯವಾಯಿತು. ಅವನು ಅತಿ ಕಟುವಾಗಿ ಹೇಳಿದ—"ಹಿಂದುಗಳು ನಮ್ಮನ್ನು ನೀಚಜಾತಿಯವರೆಂದು ಹೇಳುವುದು ಸುಳ್ಳಲ್ಲ. ನಾವು ಬ್ರಾಹ್ಮ ರಾದರೇನು? ಯಾರಾದರೇನು? ಕೈವರ್ತರಲ್ಲವೇ? ಯಾರಾದರೂ ಬ್ರಾಹ್ಮಣ ಅಥವಾ ಕಾಯಸ್ಥರ ಹುಡುಗನಾಗಿದ್ದರೆ ದೊಡ್ಡಸ್ತಿಕೆಯನ್ನು ಕಲಿಯುತ್ತಿದ್ದ. ತನಗೆ ಯಾವುದರಿಂದ ಒಳ್ಳೆಯದಾಗುತ್ತೆಂಬ ಜ್ಞಾನವೂ ಬರುತ್ತಿತ್ತು. ಹೋಗು, ನಿನಗೇಕೆ? ಹೋಗಿ ನೇಗಿಲು ಹಿಡಿದು ನಿನ್ನ ಕುಲಕಸುಬನ್ನು ಮಾಡು. ಸದ್ಯ ಹೇಗಾದರೂ ಈ ಲಗ್ನವಾಗಿ ಬಿಡಲಿ. ಆಮೇಲೆ ಮನಸ್ಸಿಗೆ ಬಂದಂತೆ ಮಾಡೆಂದು ಎದ್ದಾಗ, ಕುಳಿತಾಗ ಗಿಳಿಗೆ ಹೇಳಿದಂತೆ ಹೇಳಿದೆ. ಆದರೆ ನೀನು ನನ್ನ ಮಾತು ಕೇಳಲಿಲ್ಲ. ಹೋದ ಅವಳಮೇಲೇ ಅಧಿಕಾರ ಮಾಡಲು. ಅವಳು ರಾಯವಂಶದ ಹುಡುಗಿ! ಹರಿರಾಯರ ಮೊಮ್ಮಗಳು ....ಹರಿರಾಯರ ಹೆಸರು ಕೇಳಿದರೆ ಹುಲಿ-ಕುರಿ ಒಂದೇ ಘಾಟಿನಲ್ಲಿ ನೀರು ಕುಡಿಯುತ್ತಿದ್ದವು. ಅವಳನ್ನು ಸಾಕುಮಾಡಲು ಹೋದ ಕೈಕಾಲು ಚಾಚಿ! ಶುದ್ಧ ಮೂರ್ಖ! ಮಾನಮರ್ಯಾದೆ ಹೋಯಿತು! ಇಷ್ಟು ದೊಡ್ಡ ಜಹ ಗೀರಿಯ ಆಶೆಯೆಲ್ಲ ಮಾಯವಾಯಿತು. ತಿಂಗಳು ತಿಂಗಳಿಗೆ ಸಂಬಳದ ಹೆಸರಿನಲ್ಲಿ ಇನ್ನೂರು ರುಪಾಯಿ ಸಿಕ್ಕುತ್ತಿತ್ತು. ಅದೂ ಹೋಯಿತು.... ಹೋಗು, ಹೋಗು, ಒಕ್ಕಲಿಗ ಹೋಗು. ಹೊಲಗದ್ದೆ ಹುಡುಕಿಕೊಂಡು ಹೋಗು! ಕಣ್ಣು ಕೆಂಪಗೆ ಮಾಡಿಕೊಂಡು ಈಗ ಅವಳ ಮೇಲೆ ದೂರು ಹೇಳಲು ಬಂದ ನನ್ನ ಹತ್ತಿರ. ತೊಲಗು ತೊಲಗಾಚೆ ನನ್ನ ಎದುರಿಗೆ ನಿಲ್ಲಬೇಡ ನಿರ್ಭಾಗ್ಯ, ಪಿಶಾಚಿ, ಕತ್ತೆ!"

ಈ ಘಟನೆ ನಡೆಯದಿದ್ದರೆ ಚೆನ್ನಾಗಿರುತ್ತೆಂದು ವಿಲಾಸನೂ ಅಂದು

ಕೊಂಡ. ಅದರಮೇಲೆ ತಂದೆಯ ಈ ಭೀಷಣಾಕೃತಿಯನ್ನು ನೋಡಿ ಅವನ ಹಾರಾಟ ಸಿಟ್ಟೆಲ್ಲ ಮಾಯವಾಯಿತು. ಆದರೂ ಅವನೇನೋ ಹೇಳಬೇಕೆನ್ನುವಷ್ಟರಲ್ಲಿ, ರಾಸಬಿಹಾರಿ ಸಿಟ್ಟಿನಿಂದ ಎದ್ದು ತನ್ನ ಕೋಣೆಗೆ ಹೊರಟುಹೋದ. ಅವನು ಮಗನಮೇಲೆ ಎಷ್ಟೇ ಸಿಟ್ಟು ಮಾಡಿದರೂ, ಕಾರ್ಯಸಾಧನೆ ಮಾಡುವಾಗ ಮಾತ್ರ ಸಿಟ್ಟಿನಿಂದ ದುಡುಕಿ ಕೆಲಸವನ್ನು ಮಣ್ಣುಗೂಡಿಸುವಷ್ಟು ಅವಿವೇಕಿಯಲ್ಲ. ಕೆಲಸದಲ್ಲಿ ಆಲಸ್ಯಮಾಡಿ ಹದ ಗೆಡಿಸುತ್ತಲೂ ಇರಲಿಲ್ಲ. ಆದ್ದರಿಂದ ಅಂದು ಅವನು ವಿಜಯಳು ಸಮಾಧಾನಳಾಗಲೆಂದು ಸುಮ್ಮನಿದ್ದು ಮರುದಿನ ತನ್ನ ಪ್ರಶಾಂತ ಹಾಗೂ ಗಂಭೀರ ಮುಖಚರ್ಯೆಯನ್ನು ತಾಳಿ ವಿಜಯಳ ದಿವಾನಕೋಣೆಗೆ ಬಂದು ಅಲ್ಲೊಂದು ಕುರ್ಚಿಯನ್ನೆಳೆದು ಕುಳಿತುಕೊಂಡ.

ವಿಜಯಳ ಸಿಟ್ಟು ಕ್ರಮವಾಗಿ ಮಾಯವಾಗಿ ಹೋಗಿತ್ತು. ತನ್ನ ನಿಷ್ಠುರತನ, ಒರಟುತನವನ್ನು ನೆನೆಸಿಕೊಂಡು ನಾಚಿಕೆಯಿಂದ ಕುಗ್ಗಿದ್ದಳು. ಆಳುಕಾಳುಗಳೆದುರಿಗೆ ನಡೆದ ನಾಟಕ ಇಷ್ಟು ಹೊತ್ತಿಗಾಗಲೇ ಬಗೆಬಗೆಯಾಗಿ ಬೆಳೆದು ಹಳ್ಳಿಯಲ್ಲೆಲ್ಲ ಹರಡಿ, ನದೀತಟದಲ್ಲೆಲ್ಲ ಹೆಂಗಸರ ಬಾಯಿಯವರೆಗೂ ಬಿದ್ದಿರಬಹುದು ಎಂದು ಊಹಿಸಿ ವಿಜಯಳು ಮನೆಯನ್ನು ಬಿಟ್ಟುಹೋಗುವುದನ್ನೇ ನಿಲ್ಲಿಸಿಬಿಟ್ಟಳು. ಇಂದು ಆಳೆಂದು ಕರೆದು ಎಲ್ಲರೆದುರಿಗೂ ಅವಮಾನಮಾಡಿದವನ ಕೊರಳಿಗೆ ಹಾರ ಹಾಕಿ ಇನ್ನೆರಡು ದಿನದಮೇಲೆ ತನ್ನ ಸ್ವಾಮಿಯೆನ್ನಬೇಕೆಂಬುದು ಅವಳ ಮನಸ್ಸಿಗೆ ಬಂದಮೇಲಂತೂ ಸಂಕೋಚದಿಂದ ಮನೆಯಲ್ಲೇ ತಲೆಯೆತ್ತಲಾರದೆ ಹೋದಳು.

ರಾಸಬಿಹಾರಿ ನಿಧಾನವಾಗಿ ಕೋಣೆಗೆ ಬಂದು ಕುರ್ಚಿಯಮೇಲೆ ಕುಳಿತರೂ ವಿಜಯಳಿಗೆ ಅವನ ಮುಖವನ್ನು ನೋಡುವುದು ಸಾಧ್ಯವಾಗಲಿಲ್ಲ. ಆದರೆ ಅವಳು ಪ್ರತಿಕ್ಷಣವೂ ಇದನ್ನು ಪ್ರತೀಕ್ಷಿಸುತ್ತಿದ್ದಳು. ಮುಂದೆ ನಡೆಯಬಹುದಾದ ಅಪ್ರಿಯವಾದ ವಿವಾದಗಳನ್ನು ಅವಳು ಮೊದಲೇ ಯೋಚಿಸಿದ್ದರಿಂದ ಸ್ಥಿರಳಾಗಿ ಕುಳಿತಿದ್ದಳು. ಆದರೆ ರಾಸಬಿಹಾರಿ ಅವಳ ಕಲ್ಪನೆಗೆ ವಿರುದ್ಧವಾಗಿ ಬಾಯಿಬಿಟ್ಟದ್ದರಿಂದ ಅವಳು ಅವಾಕ್ಕಾದಳು. ಅವನು ಸ್ವಲ್ಪಹೊತ್ತು ಸ್ತಬ್ಧಭಾವದಿಂದ ಕುಳಿತಿದ್ದು ನಿಟ್ಟುಸಿರೊಂದನ್ನು ಬಿಟ್ಟು ಹೇಳಿದ—“ಮಗು ವಿಜಯ, ನಡೆದದ್ದನ್ನು ಕೇಳಿ ನನಗೆಷ್ಟು ಆನಂದವಾಯಿತೆಂಬುದನ್ನು ಹೇಳಲು ನಾನು ನಿನ್ನೆಯೇ ಓಡಿಬರುತ್ತಿದ್ದೆ.

ಆದರೆ ನಾನು ಆ ಹಳೆಯ ವ್ಯಾಧಿಯಿಂದ ಹಾಸಿಗೆ ಹಿಡಿದಿದ್ದೆ. ನೀನು ಚೆನ್ನಾಗಿ ಬಾಳಮ್ಮ. ನಾನಿವೇ ಹರಸುತ್ತೇನೆ" ಎಂದು ಇನ್ನೂ ಗಟ್ಟಿಯಾಗಿ ಉಸಿರು ಬಿಟ್ಟು ಹೇಳಿದ—"ಸುಖದಲ್ಲಿ, ದುಃಖದಲ್ಲಿ, ಒಳ್ಳೆಯದರಲ್ಲಿ, ಕೆಟ್ಟದ್ದರಲ್ಲಿ, ಧರ್ಮ, ನ್ಯಾಯದಲ್ಲೇ ನನಗೆ ಅಚಲಶ್ರದ್ಧೆ ಕೊಡಲೆಂದೇ ನಾನು ಯಾವಾಗಲೂ ಆ ಸರ್ವಶಕ್ತ ಮಂಗಳಮಯ ಭಗವಂತನನ್ನು ಪ್ರಾರ್ಥಿಸುತ್ತೇನೆ" ಇಷ್ಟು ಹೇಳಿ ಅವನು ಎರಡು ಕೈಗಳನ್ನೂ ಎತ್ತಿ ಆ ಭಗವಂತನಿಗೆ ಕೈಮುಗಿದ.

ಆಮೇಲೆ ಕಣ್ಣು ತೆರೆದು ಇದ್ದಕ್ಕಿದ್ದಂತೆ ಉತ್ತೇಜಿತನಾಗಿ ಹೇಳಿದ—"ವಿಲಾಸ ನನ್ನಂತಹ ಸರಳ, ಭೋಳೆ, ಉದಾಸೀನ ಮನುಷ್ಯನ ಮಗನಾಗಿ ಇಷ್ಟು ದೊಡ್ಡ ಕಾರ್ಯಶೀಲನಾದದ್ದು ಹೇಗೆಂಬುದೇ ನನಗೆ ತಿಳಿಯದಾಗಿದೆ. ಇಷ್ಟು ದಿನವಾದರೂ ನನಗೆ ನನ್ನ ಕೆಲಸಕಾರ್ಯಗಳ ಜ್ಞಾನ, ಲಾಭನಷ್ಟಗಳ ಭಾವನೆ ಇಲ್ಲದಿರುವಾಗ ಅವನಿಷ್ಟು ಚಿಕ್ಕ ವಯಸ್ಸಿನಲ್ಲಿ ಅಂತಹ ದೃಢಕರ್ಮಿಯಾದ ಬಗೆ ಹೇಗೆ? ಆ ಭಗವಂತನ ಲೀಲೆಯೇನು? ಈ ಪ್ರಪಂಚದ ರಹಸ್ಯವೇನೆಂಬುದೇ ತಿಳಿಯುವುದಿಲ್ಲ ಮಗು" ಎಂದು ಇನ್ನೊಮ್ಮೆ ಕಣ್ಣು ಮುಚ್ಚಿ ಅವನು ಕೈ ಮುಗಿದ.

ವಿಜಯಳು ಸುಮ್ಮನಿದ್ದಳು. ರಾಸಬಿಹಾರಿ ಸ್ವಲ್ಪಹೊತ್ತು ಮೌನವಾಗಿದ್ದು ಮಾತನ್ನು ಮುಂದುವರೆಸಿದ—"ಆದರೆ ಯಾವುದು ಅತಿಯಾದರೂ ಚೆನ್ನಾಗಿರುವುದಿಲ್ಲ. ಕಾರ್ಯಸಾಧನೆಯೇ ವಿಲಾಸನ ಪ್ರಾಣವೆಂಬುದು ಗೊತ್ತಿದೆ. ಆ ವಿಚಾರದಲ್ಲಿದ್ದರೆ ಅವನು ಕುರುಡನಿದ್ದಂತೆ. ಕರ್ತವ್ಯಕರ್ಮದ ಅವಹೇಳನೆ ಅವನ ಹೃದಯವನ್ನು ಗಾಸಿಮಾಡುತ್ತದೆ. ಆದರೆ ಅದಕ್ಕಾಗಿಯೇ ಮಾನವಂತರ ಮಾನವನ್ನು ಕಳೆಯಬೇಕೆ? ದಯಾಳನಂತಹ ಮನುಷ್ಯನ ತಪ್ಪನ್ನು ಕ್ಷಮಿಸುವುದೂ ಅವನ ಕರ್ತವ್ಯವಲ್ಲವೇ? ಆದರೆ ಅಪರಾಧಕ್ಕೆ ಚಿಕ್ಕವರು ದೊಡ್ಡವರು, ದರಿದ್ರರು ಧನಿಕರೆಂಬ ಭೇದವಿರುವುದಿಲ್ಲ. ಆದಾಗ್ಯೂ ಅದನ್ನು ಅಕ್ಷರಶಃ ಪಾಲಿಸಬೇಕೆ? ನನಗೆ ಗೊತ್ತಿದೆ. ಕೆಲಸ ಮಾಡದಿರುವುದೂ ತಪ್ಪೆ. ಹೇಳಿದ ಕೆಲಸಕ್ಕೆ ತಪ್ಪಿಸಿಕೊಳ್ಳುವುದೂ ಮಹಾ ಅನ್ಯಾಯ. ಆಫೀಸಿನ ಶಿಸ್ತನ್ನು ಕಾಪಾಡದಿರುವುದೂ ಅಧಿಕಾರಿಗಳಿಗೆ ಅಪರಾಧ ಮಾಡಿದಂತೆಯೇ. ಆದರೆ ದಯಾಳನನ್ನೇಕೆ........ಅಲ್ಲ ಮಗು, ನಾವು ಮುದುಕರಾದೆವು, ನಮ್ಮಲ್ಲೂ ಆ ತೇಜ

ಸ್ಸಿಲ್ಲ. ಐರೋಪ್ಯರೂ ವಿಲಾಸನ ಕರ್ತವ್ಯನಿಷ್ಠತೆಯನ್ನೆಷ್ಟೇ ಪ್ರಶಂಸಿಸಲಿ, ಅವನನ್ನೆಷ್ಟೇ ದೊಡ್ಡವನೆನ್ನಲಿ........ನನಗೆ ಮಾತ್ರ ಇದು ಸ್ವಲ್ಪವೂ ಸರಿತೋರುವುದಿಲ್ಲ. ನನ್ನ ಮಗನೆಂದ ಮಾತ್ರಕ್ಕೇ ಈ ಬಾಯಿಂದ ಸುಳ್ಳು ಹೇಳಲಾರೆ. ಕೆಲಸವಾಗದಿದ್ದರೆ ಎರಡುದಿನದ ಮೇಲೆ ಆಗುತ್ತೆ. ನಷ್ಟವಾದರೆ ಹತ್ತು ರೂಪಾಯಿ ನಷ್ಟವಾಗುತ್ತೆ. ಅದಕೋಸ್ಕರವೇ ಮನುಷ್ಯನ ತಪ್ಪು ನೆಪ್ಪುಗಳನ್ನೂ ದೌರ್ಬಲ್ಯಗಳನ್ನೂ ಕ್ಷಮಿಸಕೂಡದೆ? ನಿನ್ನ ಜಮೀನುದಾರಿಯ ಉನ್ನತಿಯ ವಿಚಾರದಲ್ಲೇ ವಿಲಾಸನಿಗೆ ಯಾವಾಗಲೂ ಆಸಕ್ತಿ. ಅವನ ಪ್ರತಿ ಮಾತಿನಲ್ಲೂ ಇದು ಕಾಣುತ್ತೆ. ನನ್ನನ್ನು ತಪ್ಪು ತಿಳಿದುಕೊಳ್ಳಬೇಡ ಮಗು. ನನಗೆ ಪ್ರಪಂಚದ ವಿಚಾರದಲ್ಲಿ ವೈರಾಗ್ಯವಿದ್ದರೂ, ಆಸ್ತಿ............ಪಾಸ್ತಿಯನ್ನು ರಕ್ಷಣ ಮಾಡುವುದು, ಅದನ್ನು ಅಭಿವೃದ್ಧಿಗೊಳಿಸುವುದು ಗೃಹಸ್ಥನ ಮುಖ್ಯ ಧರ್ಮ. ಏಕೆಂದರೆ ಅದಿಲ್ಲದೆ ಪ್ರಪಂಚದಲ್ಲಿ ಸುಖವಿಲ್ಲವೆಂಬುದು ನನ್ನ ದೃಢ ವಿಶ್ವಾಸ. ವಿಲಾಸನ ಕೈಯಲ್ಲಿ ನಿಮ್ಮಿಬ್ಬರ ಜಮೀನುದಾರಿ ಇಮ್ಮಡಿಯಾಗಿ, ಮುಮ್ಮಡಿ, ನಾಲ್ವಡಿಯಾಗಿ, ಕೊನೆಗೆ ಹತ್ತು ಮಡಿ ಹೆಚ್ಚಾಯಿತೆಂದು ಕೇಳಿದರೂ ನನಗೇನೂ ಆಶ್ಚರ್ಯವಾಗುವುದಿಲ್ಲ........ಆಗುವುದೂ ಹಾಗೆಯೇ. ಎಲ್ಲ ನಿಜ. ಎಲ್ಲ ಸರಿಯೇ. ಆದ ಮಾತ್ರಕ್ಕೆ ಇಂತಹ ದೊಡ್ಡ ಉನ್ನತಿಯಲ್ಲಿ ಒಂದು ಸಣ್ಣ ಅಡ್ಡಿ ಬಂದದ್ದಕ್ಕೆ ಧೈರ್ಯವನ್ನು ಕಳೆದುಕೊಳ್ಳುವುದು ಸರಿಯಲ್ಲ. ಆದ್ದರಿಂದಲೇ ಆ ಉದ್ಧತ ವರ್ತನೆಗೆ ನೀನು ಕೊಟ್ಟ ಉಚಿತ ದಂಡದಿಂದ ಅವನು ಮುಂದೆ ತಿದ್ದಿಕೊಳ್ಳಲೆಂದು ನಾನು ಅನವರತ ಆ ಅದ್ವಿತೀಯ ನಿರಾಕಾರ ಪರಬ್ರಹ್ಮನ ಶ್ರೀ ಪಾದಪದ್ಮದಲ್ಲಿ ಪ್ರಾರ್ಥನೆ ಮಾಡುತ್ತಿದ್ದೇನೆ...........ಕೆಲಸ! ಕೆಲಸ! ನಾವು ಬರಿಯ ಕೆಲಸ ಮಾಡುವುದಕ್ಕಾಗಿಯೆ ಪ್ರಪಂಚದಲ್ಲಿ ಬಂದಿದ್ದೇವೆಯೇ? ಕೆಲಸಕ್ಕಾಗಿ ದಯಾ, ಪ್ರೇಮವನ್ನೆಲ್ಲ ಬಲಿಕೊಡಬೇಕೆ? ಇಂದು ಅವನು ನಿನ್ನಿಂದ ಉತ್ತಮ ಶಿಕ್ಷೆಯ ಸುಯೋಗ ಪಡೆದದ್ದು ಒಳ್ಳೆಯದೇ ಆಯಿತು.”

ವಿಜಯಳು ಏನೂ ಮಾತಾಡಲಿಲ್ಲ. ರಾಸಬಿಹಾರಿ ಸ್ವಲ್ಪ ಹೊತ್ತು ತನ್ನಲ್ಲಿ ತಾನೇ ಮಗ್ನನಾಗಿದ್ದು ಆ ಮೇಲೆ ಮುಖವೆತ್ತಿದ. ತುಸು ನಕ್ಕು ಕೋಮಲ ಸ್ವರದಲ್ಲಿ ಅವನು ಮತ್ತೆ ಹೇಳತೊಡಗಿದ—“ನನ್ನ ಎರಡು ಮಕ್ಕಳಲ್ಲಿ, ಒಂದು ಪ್ರಚಂಡಕಾರ್ಯ ತತ್ಪರನಾದರೆ, ಇನ್ನೊಂದು ಸ್ನೇಹ....

ಮಮತೆಯಲ್ಲಿ ಮುಳುಗಿಸೆ. ಒಂದು ಕೆಲಸದಲ್ಲಿ ಉನ್ಮತ್ತವಾಗಿದ್ದರೆ........ ಇನ್ನೊಂದು ದಯಾ........ಪ್ರೇಮದಿಂದ ಹುಚ್ಚಾಗಿವೆ. ಈ ಎರಡು ಜೀತನ ಗಳನ್ನು ಸೇರಿಸಿ ಸಂಸಾರ ರಥ ಉರುಳಿದರೆ ಆಗ ಈ ದುಃಖಮಯ ಸಂಸಾರ ದಲ್ಲಿ ಸ್ವರ್ಗವೇ ಬಂದಂತಾಗುತ್ತೆಂದು ನಾನು ನಿನ್ನೆಯಿಂದ ಯೋಚಿಸು ತ್ತಿದ್ದೇನೆ. ಈ ಅಲೌಕಿಕ ಸಂಸಾರವನ್ನು ನೋಡಲು ದೇವರು ನನಗಿನ್ನು ಕೆಲವು ಕಾಲ ಆಯಸ್ಸು ಕೊಡಲೆಂದು ದೇವರನ್ನು ಪ್ರಾರ್ಥಿಸುತ್ತೇನೆ," ಎಂದು ಅವನು ಮೇಜಿನ ಮೇಲೆ ತಲೆ ಬಗ್ಗಿಸಿ ನಮಸ್ಕರಿಸಿ ಮತ್ತೆ ತಲೆ ಎತ್ತಿ ಹೇಳಿದ—"ಧರ್ಮದ ವಿಚಾರದಲ್ಲೂ ಅವನಿಗೆ ಅಗಾಧ ಪ್ರೇಮ. ಮಂದಿರ ಸ್ಥಾಪನೆಗೆ ಅವನೆಷ್ಟು ಪ್ರಯತ್ನ ಮಾಡಿದ! ಅವನ ವಿಷಯ ಸರಿಯಾಗಿ ತಿಳಿಯದವರಿಗೆ ವಿಲಾಸನಿಗೆ ಪ್ರಪಂಚದಲ್ಲಿ ಬ್ರಾಹ್ಮಧರ್ಮ ಹೊರತು ಬೇರೆ ಯಾವ ಉದ್ದೇಶವೂ ಇಲ್ಲವೆಂದು ತೋರುತ್ತೆ. ಅದಕ್ಕಾಗಿಯೇ ಅವನು ಬದುಕಿದ್ದಾನೆಂದೆನಿಸುತ್ತೆ. ಇದು ಹೊರತು ಅವನಿಗೆ ಇನ್ನೇನೂ ತಿಳಿಯು ದೇನೋ ಎಂತ ತೋರುತ್ತೆ. ಅಂದಹಾಗೆ ನೋಡು ಮಗು ನನ್ನ ಮಗನ ವಿಚಾರದಲ್ಲೇ ನಾನು ಮಗ್ನನಾಗಿ ಅವನ ವಿಚಾರ ನಿನಗೆ ಹೇಳುತ್ತಿದ್ದೇನೆ. ನಿನಗೇನೋ ನನ್ನಷ್ಟು ಅವನ ವಿಚಾರ ತಿಳಿಯದೇನೊ ಎನ್ನುವಂತೆ ಮಾತಾ ಡುತ್ತಿದ್ದೇನೆ. ನೀನೇನೋ ನನ್ನಷ್ಟು ಅವನ ಶುಭಾಕಾಂಕ್ಷಿಣಿ ಅಲ್ಲದಂತೆ ತಿಳಿದಿದ್ದೇನೆ, ಎಂದು ಮಿತವಾಗಿ ನಕ್ಕು ಹೇಳಿದ—"ಅದಕ್ಕೇ ನನಗಷ್ಟು ಆನಂದವಾಗುತ್ತೆ ಮಗು! ನಿನ್ನ ಹೃದಯ ನನಗೆ ಸ್ಪಷ್ಟವಾಗಿ ಕಾಣುತ್ತಿದೆ. ನಿನ್ನ ಕಲ್ಯಾಣಕರವಾದ ಭವಿಷ್ಯ ಉಜ್ವಲವಾಗಿದೆ. ನಿನ್ನ ಹೊರತು ಈ ಉದಾತ್ತ ಕೆಲಸವನ್ನು ಮಾಡುವವರು ಯಾರು? ಅದು ಯಾರಿಂದ ಸಾಧ್ಯ? ಅವನ ಧರ್ಮ–ಅರ್ಥ–ಕಾಮ–ಮೋಕ್ಷ ಎಲ್ಲಕ್ಕೂ ನೀನು ಜೊತೆಗಾತಿ! ಅವನ ಮುಂದಿನ ಶ್ರೇಯಸ್ಸೆಲ್ಲವೂ ನಿನ್ನ ಕೈಯಲ್ಲಿದೆ. ಅವನ ಶಕ್ತಿ, ನಿನ್ನ ಬುದ್ಧಿ. ಅವನು ಭಾರ ಹೊತ್ತು ನಡೆಯುತ್ತಾನೆ, ನೀನವನ ಮಾರ್ಗದರ್ಶ ಕಳು. ಆಗಲೇ ನಿಮ್ಮಿಬ್ಬರ ಜೀವನ ಸಾರ್ಥಕವಾಗುತ್ತೆ. ಇದರಿಂದಲೇ ನನಗಿಂದು ಸುಖದ ಅನುಭವವಾಗುತ್ತಿದೆ. ಇನ್ನು ನಾನು ವಿಲಾಸನ ಭವಿಷ್ಯ ಕ್ಕಾಗಿ ಸ್ವಲ್ಪವೂ ಭಯಪಡಬೇಕಾಗಿಲ್ಲ, ಸ್ವಲ್ಪವೂ ಸಂದೇಹ ಪಡಬೇಕಾಗಿಲ್ಲ ವೆಂದು ನನಗೆ ಸ್ಪಷ್ಟವಾಗಿದೆ. ಆದರೆ ಇಷ್ಟು ದೂರಾಲೋಚನೆ, ಇಷ್ಟು

ವಿವೇಕವೆಲ್ಲ ಇಷ್ಟುದಿನ ನೀವೆಲ್ಲಿ ಮುಚ್ಚಿಟ್ಟುಕೊಂಡಿದ್ದಿ ಹೇಳು. ಇನತ್ತು ನಾನು ಅವಾಕ್ಕಾಗಿದ್ದೇನೆ."

ವಿಜಯಳು ಪುಲಕಿತಳಾದಳು. ಆದರೂ ನಿಶ್ಶಬ್ದಳಾಗಿ ಕುಳಿತಿದ್ದಳು. ರಾಸಬಿಹಾರಿ ಗಡಿಯಾರವನ್ನು ನೋಡಿ ಚಕಿತನಾಗಿ ಹೇಳಿದ—"ಓಹೋ ಹತ್ತು ಬಡಿಯಿತು. ನಾನಿನ್ನೂ ದಯಾಳನ ಹೆಂಡತಿಯನ್ನು ನೋಡಲು ಹೋಗಬೇಕು."

"ಅವರು ಈಗ ಹೇಗಿದ್ದಾರೆ ?" ವಿಜಯಳು ಕೇಳಿದಳು.

"ಆರೋಗ್ಯವಾಗೇ ಇದ್ದಾರೆ" ಎಂದು ಅವನು ಬಾಗಿಲಕಡೆ ಒಂದೆರಡು ಹೆಜ್ಜೆ ಇಟ್ಟ ಕೂಡಲೆ ನಿಂತು ಹೇಳಿದ. "ಅಂದಹಾಗೆ ಮುಖ್ಯವಾದ ಮಾತನ್ನೇ ಹೇಳಲಿಲ್ಲ." ಎಂದು ವಾಪಸು ಬಂದು ತನ್ನ ಸ್ಥಾನದಲ್ಲಿ ಕುಳಿತು ಹೇಳಿದ—"ಈ ವೃದ್ಧ ಕಾಕಾಜಿಯ ಮಾತನ್ನು ಕೇಳಲೇಬೇಕು ವಿಜಯ! ....ಕೇಳುತ್ತೀಯಾ ಹೇಳು" ಎಂದು ಅವಳ ಮುಖಭಾವವನ್ನು ತಿಳಿದು ಹೇಳಿದ—"ಮಗನ ಈ ಮಾತನ್ನು ತಾಯಿ ನಡೆಸಿಕೊಡಲೇಬೇಕು, ಹೇಳು ವಿಜಯ ನಡೆಸಿಕೊಡುತ್ತೀಯಾ ?"

"ಹೇಳಿ." ವಿಜಯಳು ಅಸ್ಫುಟ ದನಿಯಲ್ಲಿ ಹೇಳಿದಳು.

"ಅವನು ತನ್ನ ನಿದ್ದೆಯನ್ನೂ ಕೂಡ ಬಿಟ್ಟಿದ್ದಾನೆ........ಪಶ್ಚಾತ್ತಾಪದಿಂದ ಬೇಯುತ್ತಿದ್ದಾನೆ. ಆದರೆ ಈ ವಿಚಾರದಲ್ಲಿ ನೀನು ತುಸು ಕಠಿಣವಾಗಿರಬೇಕು ಮಗು. ನಿನ್ನ ಆತ್ಮಾಭಿಮಾನದಿಂದ ಅವನು ಬರಲಿಲ್ಲ. ಆದರೆ ಇಂದು ಅವನು ಬರದಿರಲಾರ........ಖಂಡಿತ ಬಂದೇ ಬರುತ್ತಾನೆ. ಆದರೆ ಅವನು ಕ್ಷಮೆ ಬೇಡಿದ ಕೂಡಲೆ ನೀನು ಅವನನ್ನು ಕ್ಷಮಿಸಿಬಿಡಬೇಡ. ಇದೇ ನನ್ನ ಪ್ರಾರ್ಥನೆ. ನೀನು ಅವನಿಗೆ ಕೊಟ್ಟ ಶಿಕ್ಷೆಯನ್ನು ಅವನು ಇನ್ನೊಂದು ದಿನವಾದರೂ ಅನುಭವಿಸಲೆಂದೇ ನನ್ನ ಅಭಿಲಾಷೆ.

ಈ ಮಾತಿಗೆ ವಿಜಯಳ ಮುಖದಲ್ಲಿ ಆಶ್ಚರ್ಯದ ಚಿಹ್ನೆಯನ್ನು ನೋಡಿ ಅವನು ನಕ್ಕ. ಮತ್ತೆ ಸ್ನೇಹದ ದನಿಯಲ್ಲಿ ಹೇಳಿದ—"ನಿನಗೆಷ್ಟು ಕಷ್ಟವಾಗಿದೆಯೆಂಬುದು ನನಗೇನು ಗೊತ್ತಿಲ್ಲವೇ ಮಗು ? ನಿನ್ನ ವಿಷಯ ನನಗೆ ತಿಳಿಯದೇ? ನೀನು ನನ್ನ ಮಗಳಿದ್ದ ಹಾಗೆ. ಅವನಿಗಿಂತ ನಿನಗೆ ಹೆಚ್ಚು ದುಃಖವಾಗಿದೆ. ಆದರೆ ಅಪರಾಧಕ್ಕೆ ಪೂರಾ ಶಿಕ್ಷೆಯಾದ ಹೊರತು ಪ್ರಾಯಶ್ಚಿತ್ತವಾಗುವುದಿಲ್ಲ. ಇನ್ನೊಂದು ದಿನ ಅವನು ದುಃಖ ಅನುಭವಿಸದ

ಹೊರತು ಮುಕ್ತನಾಗುವುದಿಲ್ಲ. ನಿನಗೆ ಅಷ್ಟು ನಿರ್ದಾಕ್ಷಿಣ್ಯವಾಗಿರುವುದಕ್ಕೇ ಸಾಧ್ಯವಾಗದಿದ್ದಗೆ, ಅವನನ್ನು ನೋಡಬೇಡ. ಇಂದು ಅವನು ವಿಫಲನಾಗಿಯೇ ಮನೆಗೆ ಬರಲಿ. ಇನ್ನೂ ಸ್ವಲ್ಪ ಹೆಚ್ಚು ಕಾಲ ಅವನೀದುಃಖವನ್ನನುಭವಿಸಲಿ. ಇದೇ ನನ್ನ ಹೆಬ್ಬಯಕೆ ವಿಜಯ."

ರಾಸಬಿಹಾರಿ ಹೊರಟು ಹೋಗುತ್ತಲೇ, ವಿಜಯಳು ನಿಜವಾಗಿ ವಿಸ್ಮಿತಳಾಗಿ ಸ್ತಬ್ಧಳಾಗಿ ಕುಳಿತುಬಿಟ್ಟಳು. ಅವಳು ಈ ನಡೆನುಡಿಯನ್ನು ನಿರೀಕ್ಷಿಸಿರಲಿಲ್ಲ. ಇದಕ್ಕೆ ಬದಲು ತಾನು ಎದುರಿಸಬಹುದಾದ ಸನ್ನಿವೇಶಕ್ಕೆ ಸಿದ್ಧಳಾಗಿ ಕಠಿಣಳಾಗಿ ಕುಳಿತಿದ್ದಳು. ವಿಲಾಸ ತಾನೊಬ್ಬನೇ ಪೆಟ್ಟು ತಿಂದು ಹೋಗಿದ್ದರೂ, ಅದಕ್ಕೆ ಸೇಡು ತೀರಿಸಿಕೊಳ್ಳುವ ಸಮಯದಲ್ಲಿ ಅವನೊಬ್ಬನೇ ಬರಲಾರನೆಂದೂ, ಜೊತೆಗೆ ರಾಸಬಿಹಾರಿ ಬಂದಗೆ ತಾನು ಬಹಳ ಕಠಿಣ ಪರಿಸ್ಥಿತಿಯನ್ನು ಎದುರಿಸಬೇಕಾಗಬಹುದೆಂದೂ ಯೋಚಿಸುತ್ತಿದ್ದ ವಿಜಯಳ ಮನಸ್ಸಿಗೆ ಎಳ್ಳಷ್ಟೂ ಶಾಂತಿಯಿರಲಿಲ್ಲ.

ಆ ವೃದ್ಧ ಹೊರಗೆ ಹೋದಕೂಡಲೇ, ಅವಳಿಗಿದ್ದ ಭಯದ ಭಾರೀ ಅಂಶಕ್ಕೆ ಪರಿಹಾರವಾಯಿತಷ್ಟೇ ಅಲ್ಲ, ಹಿಂದೆ ಇವನಲ್ಲಿ ತಾನು ಆಂತರಿಕ ಶ್ರದ್ಧೆ ಇಟ್ಟಿದ್ದಳೆಂಬುದೂ ನೆನಪಾಯಿತು. ಆ ಶ್ರದ್ಧೆಯೇಕೆ ಮಾಯವಾಯಿತೆಂಬುದು ಪದೇ ಪದೇ ಅವಳ ಮನಸ್ಸಿನಲ್ಲಿ ಕೊರೆಯತೊಡಗಿತು. ಏನಾದರಾಗಲಿ ಈ ವೃದ್ಧನ ಯಥಾರ್ಥ ಮನಸ್ಸನ್ನು ತಿಳಿಯದೆ ತಾನು ಅವನಲ್ಲಿ ತಪ್ಪು ನಡೆದುಕೊಂಡೆನೆಂದೂ ಇದರಿಂದ ಪರಲೋಕಗತ ಪಿತನಿಗೂ ಅನ್ಯಾಯ ಮಾಡಿದಂತಾಯಿತೆಂದೂ ಅವಳು ಅಂದುಕೊಂಡಳು. "ಅವರು ನಿಜವಾದ ಅಪರಾಧದ ವಿಷಯದಲ್ಲಿ ತಮ್ಮ ಮಕ್ಕಳನ್ನೂ ಕ್ಷಮಿಸಲಿಲ್ಲವಲ್ಲ. ನಾನು ಕ್ಷಮಿಸಿ ಅವನು ಶಿಕ್ಷೆಯನ್ನನುಭವಿಸುವುದನ್ನು ತಪ್ಪಿಸಕೂಡದೆಂದು ಬೇರೆ ಬಾರಿಬಾರಿಗೂ ಹೇಳಿ ಹೋಗಿದ್ದಾರೆ." ಎಂದು ಅವಳು ಮನಸ್ಸಿನಲ್ಲೇ ಹೇಳಿಕೊಂಡಳು.

ಇದಲ್ಲದೆ ರಾಸಬಿಹಾರಿಯ ಮಾತು ಕತೆ, ವಿಚಾರಪರಂಪರೆಯಲ್ಲಿ ರಹಸ್ಯವಾಗಿ ಅಡಗಿದ್ದರೂ ಸ್ಪಷ್ಟವಾಗಿ ತಲೆತೋರುತ್ತಿದ್ದುದೆಂದರೆ ವಿಲಾಸನಿಗೆ ತನ್ನಲ್ಲಿದ್ದ ಅಪೂರ್ವ ಪ್ರೇಮ, ಅದರ ಪರಿಣಾಮವಾಗಿಯೇ ಅವನಿಗೆ ಉಂಟಾದ ಹೊಟ್ಟೆಕಿಚ್ಚು. ಇದು ಮೊದಲಿನಿಂದಲೂ ವಿಜಯಳಿಗೆ ಗೊತ್ತಿದ್ದರೂ, ಈ ವೃದ್ಧ ರಾಸಬಿಹಾರಿಯು ಕಲಕಿದ್ದರಿಂದ ಅದು ಹೊಸ ಸ್ವರೂಪ

ತಾಳಿ ಪ್ಯದೋರಿತು. ಇಷ್ಟು ದಿನಗಳಿಂದ ಹೃದಯಾಂತರಾಳದಲ್ಲಿ ಅಡ ಗಿದ್ದ ಆ ಭಾವನೆ ಈಗ ಹೊರಗಿನ ಆಘಾತದಿಂದ ತರಂಗ ತರಂಗವಾಗಿ ಮೇಲೆ ಬಂದು ಮನಸ್ಸನ್ನು ಕಲಕತೊಡಗಿತು. ಆದ್ದರಿಂದ ರಾಸಬಿಹಾರಿ ಹೊರಟುಹೋದ ಎಷ್ಟೋ ಹೊತ್ತಿನವರೆಗೂ ಅವನ ಮಾತು ಅವಳ ಕಿವಿ ಯಲ್ಲಿ ಗುಯಿಗುಟ್ಟುತ್ತಿತ್ತು. ಅವಳು ನಿಶ್ಯಬ್ದಳಾಗಿ ಕಿಟಕಿಯಲ್ಲಿ ನೋಡು ತ್ತಿದ್ದಳು ಅಸೂಯೆ ಪ್ರಪಂಚದಲ್ಲಿ ಯಾವಾಗಲೂ ನಿಂದಿತವಾದದ್ದೇ. ಆದರೂ ವಿಜಯಳ ದೃಷ್ಟಿಯಲ್ಲಿ ಇಂದು ವಿಲಾಸನ ಅಸೂಯೆ ಅವನ ಎಲ್ಲ ದೋಷಗಳನ್ನೂ ಮರೆಸಿಬಿಟ್ಟಿತು. ಹಿಂದಿನ ದಿನದವರೆಗೂ ಆ ತಂದೆ ಮಕ್ಕಳ ಅನೇಕಪ್ರಕಾರದ ಭಯಾನಕ ಪ್ರತಿಹಿಂಸೆ, ತೀವ್ರ ದ್ವೇಷ ತನ್ನನ್ನು ಕೇವಲ ನಿಸ್ಸಹಾಯಳನ್ನಾಗಿ ಮಾಡಿದ್ದೂ, ಇಂದು ಅದೇ ತಂದೆ ಮಕ್ಕಳನ್ನು ತನ್ನವ ರೆಂದು ತಿಳಿದುಕೊಂಡಿದ್ದರಿಂದ ಅವಳಿಗೆ ಸಾಂತ್ವನೆಯಾದಂತಾಯಿತು.

ಕಾಲೀಪದ ಬಂದು ಕೇಳಿದ—"ಅಮ್ಮಾ ಹಾಗಾದರೆ ನಾನು ಬರುವು ದಕ್ಕಾಗುವುದಿಲ್ಲವೆಂದು ಊರಿಗೆ ಕಾಗದ ಬರೆಯಲೇ?"

ವಿಜಯಳು ಹಿಂದೆ ಮುಂದೆ ನೋಡಿದಳು—"ಹುಂ——"

ಕಾಲೀಪದ ಹೋಗುತ್ತಿದ್ದ. ವಿಜಯಳು ಅವನನ್ನು ಕರೆದು ಸಂಕೋಚ ಮತ್ತು ನಾಚಿಕೆಯಿಂದ ಹೇಳಿದಳು—"ಇಲ್ಲದಿದ್ದರೆ ನಾನು ಹೇಳುವುದು ಕಾಲೀಪದ, ಕಾಗದವನ್ನೇ ಬರೆದಮೇಲೆ ಒಂದು ತಿಂಗಳ ಪೂರ್ತಿ ಊರಿಗೆ ಹೋಗಿ ಬರಬಾರದೇಕೆ? ಅವರ ಮಾತೂ ನಡೆದ ಹಾಗಾಯಿತು. ನೀನು ಒಮ್ಮೆ ಮನೆಗೆ ಹೋಗಿ ಬಂದ ಹಾಗಾಯಿತು. ಬಹಳ ದಿನಗಳಿಂದ ಹೋಗಿಲ್ಲ. ಏಕೆ? ಇದಕ್ಕೇನು ಹೇಳುತ್ತಿ

ಕಾಲೀಪದನಿಗೆ ಮನಸ್ಸಿನಲ್ಲೇ ಆಶ್ಚರ್ಯವಾಯಿತು. ಆದರೂ ಅದಕ್ಕೆ ಅವನು ಒಪ್ಪಿಗೆಯಿತ್ತು ಹೇಳಿದ—" ಆಗಲಮ್ಮಾವ್ರೇ, ತಿಂಗಳ ಪೂರ್ತಿ ಊರಿನಕಡೆ ಹೋಗಿ ತಿರುಗಾಡಿ ಬರುತ್ತೇನೆ." ಅವನು ಹೊರಟು ಹೋದಮೇಲೆ ತನ್ನ ಈ ದೌರ್ಬಲ್ಯಕ್ಕಾಗಿ ವಿಜಯಳಿಗೆ ಬಹಳ ನಾಚಿಕೆ ಯಾಯಿತು. ಆದರೂ ಅವಳು ಅವನನ್ನು ಮತ್ತೆ ಕರೆದು ಬೇಡವೆಂದು ಹೇಳ ಲಾರದಾದಳು. ಅದಕ್ಕೂ ಅವಳಿಗೆ ಬಹಳ ಸಂಕೋಚವಾಯಿತು.

ಮನೆಯ ಕಡೆಯ ಕೋಣೆಗಳಲ್ಲಿ ವಿಜಯಳ ಜಮೀನುದಾರಿಯ ಕೆಲಸ ಕಾರ್ಯಗಳು ನಡೆಯುತ್ತಿದ್ದುವು. ಅದಕ್ಕೆ ಎದುರಾಗಿ ಎತ್ತರವಾಗಿ

ಬೆಳೆದ ಮರಗಳ ಗುಂಪಿತ್ತು. ಆದ್ದರಿಂದ ವಾಸವಾಗಿದ್ದ ಮನೆಯ ಮಹಡಿಯ ಮೇಲಿನ ಕೈಸಾಲೆಯಿಂದ ಅಲ್ಲಿ ನಡೆಯುವುದೊಂದೂ ಕಾಣಿಸುತ್ತಿರಲಿಲ್ಲವೆಂದೇ ಹೇಳಬಹುದಾಗಿತ್ತು. ಅಲ್ಲದೆ ಪೂರ್ವದಿಕ್ಕಿನ ಗೋಡೆಯಲ್ಲಿ ಒಂದು ಸಣ್ಣ ಬಾಗಿಲಿತ್ತು. ಅಲ್ಲಿ ಯಾವ ಕೆಲಸಗಾರರು ಯಾವಾಗ ಬರುತ್ತಾರೆಂಬುದೊಂದೂ ತಿಳಿಯುತ್ತಿರಲಿಲ್ಲ.

ಅಂದಿನಿಂದ ಮತ್ತೆ ದಯಾಳರು ಬರಲಿಲ್ಲ. ಅವರು ಕೆಲಸಕ್ಕೆ ಬರುತ್ತಿದ್ದಾರೆಯೇ ಇಲ್ಲವೇ ಎಂಬುದನ್ನೂ ದಾಕ್ಷಿಣ್ಯದಿಂದ ವಿಜಯಳು ವಿಚಾರಿಸಲಿಲ್ಲ. ವಿಲಾಸಬಿಹಾರಿ ಈಕಡೆ ಕಾಲಿಡುತ್ತಿಲ್ಲವೆಂದು ಅವಳು ಯಾರನ್ನೂ ಕೇಳದೆ ನಿಶ್ಚಯಿಸಿಕೊಂಡಿದ್ದಳು. ಮಧ್ಯದಲ್ಲಿ ಒಂದು ದಿನ ರಾಸಬಿಹಾರಿ ಒಂದು ಕಾಲು ಘಂಟೆ ಬಂದು ಕುಳಿತು ಮಾತಾಡಿ ಹೋಗಿದ್ದ. ಆದರೆ ಆಗ ಖಾಯಿಲೆಯ ವಿಷಯ, ಇನ್ನು ಕೆಲವು ಸಾಮಾನ್ಯ ವಿಷಯದ ಹೊರತು ಇನ್ನೇನೂ ನಡೆಯಲಿಲ್ಲ.

ಮನುಷ್ಯನ ಅಂತರಂಗದ ವಿಷಯ ಅಂತರ್ಯಾಮಿಗೇ ಗೊತ್ತು. ಆದರೆ ಅಂದು ಮಗನ ವಿರುದ್ಧ ಮಾತಾಡಿದಾಗ ರಾಸಬಿಹಾರಿಯ ಮುಖದಲ್ಲಿದ್ದ ಪ್ರಸನ್ನತೆ ಮತ್ತು ಸಹೃದಯತೆ ಯಾವುದೋ ಅಜ್ಞಾತ ಕಾರಣದಿಂದ ಈಗ ಮಾಯವಾಗಿತ್ತು. ಇದನ್ನು ನೋಡಿ ವಿಜಯಳ ಮನಸ್ಸಿನಲ್ಲಿ ತವಕ ಉಂಟಾಯಿತು. ಯಾವುದೋ ಕುರುಡು ಲೆಕ್ಕದಿಂದ ಎಲ್ಲ ಸಂಬಂಧಿಸಿ ಲೆಕ್ಕ ಹಾಕಿ ವಿಜಯಳು ಬಹಳ ಅಶಾಂತಿಯಿಂದಲೇ ಕಾಲ ಕಳೆಯುತ್ತಿದ್ದಳು.

ಅಂದು ಸಂಜೆ ವಿಜಯಳು ತನ್ನ ಮನೆಯ ಹತ್ತಿರವೇ ನದೀ ತೀರದಲ್ಲಿ ಸುತ್ತಾಡಿ ಬರೋಣವೆಂದು ಹೊರಹೊರಡಬೇಕೆನ್ನುವಷ್ಟರಲ್ಲೇ, ಮುದುಕ ಗುಮಾಸ್ತೆ ಲೆಕ್ಕದ ಪುಸ್ತಕವನ್ನು ಹೊತ್ತು ಬಂದು ಭಕ್ತಿಯಿಂದ ನಮಸ್ಕಾರ ಮಾಡಿ ಕೇಳಿದ—"ಯಾವ ಕಡೆ ತಾಯಿ? ಕನ್ನೈಯಾ ಸಿಂಹನೆಲ್ಲಿ?"

"ಇಲ್ಲೇ ಹತ್ತಿರ ಸ್ವಲ್ಪ ನದೀ ದಡದಲ್ಲೇ ಸುತ್ತಾಡಿ ಬರುತ್ತೇನೆ. ಇದಕ್ಕೆ ಆಳಿನ ಅಗತ್ಯವೇನೂ ಇಲ್ಲ. ನನ್ನಿಂದ ಏನಾದರೂ ಆಗಬೇಕಿತ್ತೇನು?"

"ಹೌದು ಸ್ವಲ್ಪ ಕೆಲಸವಿತ್ತು. ಇಲ್ಲದಿದ್ದರೆ ನಾಳೆಯಾಗುತ್ತೆ." ಅವನು ಹೊರಟದ್ದನ್ನು ನೋಡಿ ವಿಜಯಳು ನಸುನಕ್ಕು ಕೇಳಿದಳು—

" ಸ್ವಲ್ಪವೇ ಕೆಲಸವಿದ್ದರೆ ಈಗಲೇ ಹೇಳಿ. ಇಷ್ಟು ದೊಡ್ಡ ಲೆಕ್ಕದ ಪುಸ್ತಕ ಹೊತ್ತುಕೊಂಡು ಎತ್ತ ಕಡೆ ಹೊರಟಿರಿ ? "

" ತಮ್ಮ ಹತ್ತಿರವೇ ಬಂದೆ ತಾಯಿ. ಹಿಂದಿನ ವರ್ಷದ ಲೆಕ್ಕವೆಲ್ಲ ಆಗಿದೆ. ಅದನ್ನೆಲ್ಲ ನೋಡಿ ಇದಕ್ಕೆ ರುಜು ಮಾಡಬೇಕಾಗಿದೆ. ಅಲ್ಲದೆ ಚಾಲ್ತೀ ವರ್ಷದ ದಿನವಹಿಯ ಜಮಾ ಖರ್ಚನ್ನೂ ತಮಗೆ ತೋರಿಸಿ ತಮ್ಮ ರುಜು ಪಡೆಯಬೇಕೆಂದು ಚಿಕ್ಕ ಬಾಬುಗಳ ಅಪ್ಪಣೆಯಾಗಿದೆ."

ವಿಜಯ ಬಹಳ ಆಶ್ಚರ್ಯದಿಂದ ವಾಪಸು ಬಂದು ಹೊರಗಿನ ಕೋಣೆಯಲ್ಲಿ ಕುಳಿತಳು. ಆ ಗುಮಾಸ್ತನೂ ಜೊತೆಗೆ ಬಂದು ಆ ಲೆಕ್ಕಪತ್ರಗಳನ್ನೆಲ್ಲ ಮೇಜಿನ ಮೇಲಿಟ್ಟ. ಅವನು ಲೆಕ್ಕದ ಪುಸ್ತಕವನ್ನು ತೆಗೆಯಬೇಕೆಂದಿರುವಾಗಲೇ ವಿಜಯಳು ತಡೆದು " ಚಿಕ್ಕಬಾಬುಗಳು ಯಾವಾಗ ಈ ಅಪ್ಪಣೆಯನ್ನು ಮಾಡಿದರು ? " ಎಂದು ಕೇಳಿದಳು.

" ಇಂದು ಬೆಳಿಗ್ಗೆ."

" ಅವರು ಇವತ್ತು ಬಂದಿದ್ದರೇ ? "

" ಅವರು ನಿತ್ಯವೂ ಬರುತ್ತಾರೆ."

" ಈಗ ಅವರು ಕಚೇರಿಯಲ್ಲಿದ್ದಾರೆಯೆ ? "

" ನನ್ನನ್ನು ಕಳುಹಿಸಿ ಅವರು ಈಗತಾನೆ ಹೋದರು."

ಅಂದಿನ ಘಟನೆ ಎಲ್ಲರಿಗೂ ಗೊತ್ತಿತ್ತು. ಆ ಗುಮಾಸ್ತ ವಿಜಯಳ ಮಾತಿನ ಇಂಗಿತವನ್ನು ತಿಳಿದು ಮೆಲ್ಲಗೆ ಎಲ್ಲ ವಿಷಯಗಳನ್ನೂ ಹೇಳಿದ. "ವಿಲಾಸಬಿಹಾರಿಯವರು ನಿತ್ಯವೂ ಸರಿಯಾಗಿ ಹನ್ನೊಂದು ಗಂಟೆಗೆ ಕಚೇರಿಗೆ ಬರುತ್ತಾರೆ. ಯಾರೊಂದಿಗೂ ಹೆಚ್ಚು ಮಾತಾಡುವುದಿಲ್ಲ. ಒಂದೇ ಮನಸ್ಸಿನಿಂದ ಕೆಲಸ ಮಾಡಿ ಸಂಜೆ ಐದು ಘಂಟೆಗೆ ಸರಿಯಾಗಿ ವಾಪಸು ಹೋಗುತ್ತಾರೆ. ದಯಾಳಬಾಬುಗಳ ಮನೆಯ ಪರಿಸ್ಥಿತಿ ಸುಧಾರಿಸುವವರೆಗೂ ಅವರಿಗೆ ರಜ ಕೊಟ್ಟಿದ್ದಾರೆ. ಅವರೇನೂ ಬರಬೇಕಾಗಿಲ್ಲ."

ವಿಜಯಳು ಬಹಳ ಸಂಕೋಚದಿಂದ ಇದೆಲ್ಲ ಕೇಳಿ, ವಿಲಾಸ ಬಹಳ ಆತ್ಮಾಭಿಮಾನದಿಂದಲೋ, ಸಿಟ್ಟಿನಿಂದಲೋ ಈ ಹೊಸ ನಿಯಮವನ್ನು ವ್ಯವಹಾರದಲ್ಲಿ ತಂದಿರಬೇಕೆಂದುಕೊಂಡಳು. ಆದರೂ ಇಷ್ಟುದಿನ ಯಾರ ಸಹಿಯಿಂದ ಕೆಲಸನಡೆಯುತ್ತಿತ್ತೋ ಈಗಲೂ ಅವರ ಸಹಿಯಿಂದಲೇ ಕೆಲಸ

ವಾಗುತ್ತೆ, ಹೊಸ ನಿಯಮದ ಅಗತ್ಯವೇನೂ ಇಲ್ಲವೆಂದು ಅವಳು ಹೇಳಲಿಲ್ಲ. ಅಷ್ಟೇ ಅಲ್ಲ 'ಅದನ್ನಿಲ್ಲಿಟ್ಟು ಹೋಗಿ, ನಾಳೆ ಬಂದು ನನ್ನ ಸಹಿ ತೊಗೊಂಡು ಹೋಗಿ' ಎಂದು ಅವಳು ಹೇಳಿ ಅವನನ್ನು ಕಳುಹಿಸಿ ಅಲ್ಲೇ ಸ್ತಬ್ಧಳಾಗಿ ಕುಳಿತು ಬಿಟ್ಟಳು. ಹೊರಗಡೆ ಕತ್ತಲಾಗುತ್ತ ಬಂದಿತು. ಸಂಜೆಯ ಮಸಕು ಮಾಯ ವಾಯಿತು. ಆದರೂ ಅವಳು ಏಳುವ ಲಕ್ಷಣ ತೋರಲಿಲ್ಲ. ಅವಳು ಇನ್ನೂ ಎಷ್ಟು ಹೊತ್ತು ಹಾಗೆಯೇ ಕುಳಿತಿರುತ್ತಿದ್ದಳೋ ಏನೋ, ಅಷ್ಟರಲ್ಲೇ ಆಳು ಕೈಯಲ್ಲಿ ದೀಪವನ್ನು ಹಿಡಿದುಕೊಂಡು ಬಂದು ಕತ್ತಲಿನಲ್ಲಿ ಯಜಮಾನಿ ಯೊಬ್ಬಳೇ ಕುಳಿತದ್ದನ್ನು ನೋಡಿ ಚಕಿತನಾದ. ವಿಜಯಳಿಗೂ ನಾಚಿಕೆ ಯಾದಂತಾಗಿ ಎದ್ದು ಹೊರಗೆ ಬಂದಳು. ಅಲ್ಲಿ ನೋಡಿ ಸ್ತಂಭಿತಳಾದಳು.

ಅಲ್ಲಿ ಅವಳು ನೋಡಿದ ವ್ಯಕ್ತಿಯನ್ನು ಅವಳು ಆಗ ಅಲ್ಲಿಗೆ ಬರ ಬಹುದೆಂದು ಊಹಿಸಿಯೂ ಇರಲಿಲ್ಲ. ಅವನು ಯಾವ ಕಾರಣದಿಂದಲೂ, ಯಾವ ಹಟದಿಂದಲೂ ಅಲ್ಲಿಗೆ ಬರುವುದು ಸಂಭವನವಾಗಿರಲಿಲ್ಲ. ಆದರೂ ಅಂದಿನ ಆ ವ್ಯಕ್ತಿ ಅದೇ ಐರೋಪ್ಯರ ಉಡುಪಿನಲ್ಲಿ ಗೇಟಿನೊಳಗೆ ಬರುತ್ತಿ ದ್ದುದು ಅವಳಿಗೆ ಆ ಮಸುಕು ಬೆಳಕಿನಲ್ಲೂ ಸ್ಪಷ್ಟವಾಗಿ ಕಂಡಿತು. ಸಾಧಾ ರಣ ಬಂಗಾಳಿಗಳಿಗಿಂತ ಎತ್ತರವಾದ ಮೈಕಟ್ಟಿನ ಆ ವ್ಯಕ್ತಿ ದೊಡ್ಡದಾಗಿ ಹೆಜ್ಜೆಯಿಡುತ್ತಾ ಈ ಕಡೆಯೇ ಬರುತ್ತಿದ್ದ.

ಇಂದು ಅವನು ಯಾರೋ ಪೊಲೀಸು ಕರ್ಮಚಾರಿಯೆಂಬ ಭ್ರಮೆ ಯಿರಲಿಲ್ಲ. ಆದರೂ ಅವಳಲ್ಲಿ ತುಂಬಿದ್ದ ಭಯ ಮತ್ತು ನಿರಾಶೆಯಿಂದ ಅವಳ ಅಮಿತ ಆನಂದ ಮಾಯವಾಯಿತು! ಮರಬಳ್ಳಿಗಳಿಂದ ಮುಚ್ಚಿ ಹೋಗಿದ್ದ ಆ ದಾರಿಯಲ್ಲಿ ಅವನು ಬರುತ್ತಿದ್ದುದು ಮರೆಯಾದರೂ, ಅವನ ಕಾಲಿನ ಬೂಡಸಿನ ಸದ್ದು ಬರಬರುತ್ತಾ ಹತ್ತಿರ ಕೇಳಿಸುತ್ತಿತ್ತು. ಅವನನ್ನು ಆದರಪೂರ್ವಕ ಸ್ವಾಗತಿಸಿ ಕೂಡಿಸುವುದು ಅನ್ಯಾಯವೆಂದು ಅವಳು ಅಂದು ಕೊಂಡಳು. ಆದರೂ ಬಾಗಿಲ ಹೊರಗೇ ಅವನನ್ನು ಅವಹೇಳನಮಾಡಿ ಕಳು ಹಿಸುವುದೂ ಅವಳಿಗೆ ಅಸಾಧ್ಯವಾಗಿ ಕಂಡಿತು.

ಈ ಉಭಯಸಂಕಟದಿಂದ ಪಾರಾಗಲು ಅವಳಿಗೆ ಯಾವ ಉಪಾ ಯವೂ ತೋರಲಿಲ್ಲ. ಆ ರಸ್ತೆಯ ತಿರುವಿನಲ್ಲಿ ಮರದ ಕೆಳಗೆ ಅವನ ಸುಂದ ರಾಕೃತಿ ಕಣ್ಣಿಗೆ ಬಿದ್ದ ಕೂಡಲೆ ಅವಳು ಜಾಗ್ರತೆಯಾಗಿ ಕೋಣೆಯೊಳಗೆ ಹೊರಟುಹೋದಳು. ಆ ಗುಮಾಸ್ತ ಹಿಂದಿರುಗಿ ಹೋಗುತ್ತಿದ್ದವನು, ಈ

ಸಾಹೇಬ ವ್ಯಕ್ತಿಯನ್ನು ನೋಡಿ ಅವನು ಗಾಬರಿಯಾದ. ಆದರೆ ಆ ವ್ಯಕ್ತಿ ಪ್ರಶ್ನೆಮಾಡಿದ್ದನ್ನು ಕೇಳಿ ಅವನು ಗುರುತಿಸಿ ಹೇಳಿದ—"ಹೂಂ. ಅವರು ಹೊರಗಿನ ಕೋಣೆಯಲ್ಲಿದ್ದಾರೆ." ಎಂದು ಹೇಳಿ ಅವನು ಹೊರಟುಹೋದ. ಈ ಪ್ರಶ್ನೆ ಮತ್ತು ಉತ್ತರವೆರಡೂ ವಿಜಯಳಿಗೆ ಕೇಳಿಸಿತು. ಮರುಕ್ಷಣವೇ ಅವನು ಕೋಣೆಯೊಳಗೆ ಕಾಲಿಟ್ಟು, ನಮಸ್ಕಾರಮಾಡಿದ. ಅವನು ಕೋಲು ಮತ್ತು ಹ್ಯಾಟನ್ನು ಮೇಜಿನಮೇಲಿಟ್ಟು ನಗುತ್ತಾ ಹೇಳಿದ—"ನನ್ನ ಔಷಧಿ ಬಹಳಚೆನ್ನಾಗಿ ಕೆಲಸಮಾಡಿದೆಯೆಂದು ತೋರುತ್ತೆ."

ಇಂದು ಕಣ್ಣೆತ್ತಿ ನರೇಂದ್ರನನ್ನು ನೋಡಲು ಸಾಧ್ಯವಿಲ್ಲವೆಂದು ಒಂದು ಕ್ಷಣ ಮುಂಚೆ ವಿಜಯಳು ಯೋಚಿಸಿದ್ದಳು.... ತನ್ನ ಬಾಯಿಂದ ಒಂದು ಶಬ್ದವೂ ಬರಲಾರದೆಂದುಕೊಂಡಿದ್ದಳು. ಆದರೆ ಅವನ ದನಿ ಕೇಳಿದ ಕೂಡಲೆ ಅವಳ ಸಂಕೋಚವೆಲ್ಲ ಪರಿಹಾರವಾಯಿತಲ್ಲದೆ, ಅವಳ ಮನಸ್ಸಿನಲ್ಲಿದ್ದ ದುಃಖ, ಗ್ಲಾನಿಯೆಲ್ಲ ಒಂದು ನಿಮಿಷದಲ್ಲಿ ಮಾಯವಾಗಿ ಅವಳು ಕೂಡಲೆ ಕೇಳಿದಳು—"ನಿಮಗೆ ಹೇಗೆ ತಿಳಿಯಿತು? ನನ್ನನ್ನು ನೋಡಿದ್ದರಿಂದಲೋ, ಅಥವಾ ಯಾರಾದರೂ ಹೇಳಿದರೋ"

"ಹೇಳಬೇಕೇಕೆ? ನನ್ನ ಔಷಧವನ್ನು ಕುಡಿಯುವ ಅಗತ್ಯವೂ ಇಲ್ಲ. ನಾನು ಬರೆದುಕೊಟ್ಟ ಚೀಟಿಯನ್ನು ಮೇಲಿಂದ ಕೆಳಗಿನವರವಿಗೂ ಒಮ್ಮೆ ನೋಡಿ ಎಸೆದುಬಿಟ್ಟರೆ ಅರ್ಧ ಕೆಲಸವಾಗುತ್ತೆಂದು ದಯಾಳಬಾಬುಗಳು ಹೇಳಲಿಲ್ಲವೆ?" ಎಂದು ಅವನು ತನ್ನ ಈ ಹಾಸ್ಯಕ್ಕಾಗಿ ತಾನೇ ಗಟ್ಟಿಯಾಗಿ ನಕ್ಕ.

ಇವನು ದಯಾಳರಿಂದ ನಡೆದುದೆಲ್ಲವನ್ನೂ ಕೇಳಿ ತಿಳಿದುಕೊಂಡು ತನ್ನನ್ನು ಹಾಸ್ಯಮಾಡಲು ಬಂದಿದ್ದಾನೆಂದು ವಿಜಯಳು ಯೋಚಿಸಿದಳು. ಆದ್ದರಿಂದ ಆತನ ಆ ಉಚ್ಚ ಹಾಸ್ಯಕ್ಕೆ ಸಿಟ್ಟಾಗಿ ಹೇಳಿದಳು—"ಓಹೋ ಅದಕ್ಕೇ ಉಳಿದರ್ಧವನ್ನು ಸರಿಮಾಡುವುದಕ್ಕಾಗಿ ನೀವು ಔಷಧವನ್ನು ಬರೆದು ಕೊಡಲು ಬಂದಿದ್ದೀರೆಂದು ತೋರುತ್ತಲ್ಲವೇ?"

ಇದರಿಂದ ನರೇಂದ್ರ ಸ್ವಲ್ಪ ಅಪ್ರತಿಭನಾಗಿ ನಗುವುದನ್ನು ನಿಲ್ಲಿಸಿ ಹೇಳಿದ—"ಇದೊಳ್ಳೆಯ ತಮಾಷೆಯಾಯಿತು."

"ಅದಕ್ಕೇ ನೀವಿಷ್ಟು ಸಂತೋಷವಾಗಿದ್ದೀರೆಂದು ತೋರುತ್ತೆ."

ನರೇಂದ್ರ ಗಂಭೀರನಾಗಿ ಹೇಳಿದ—"ಸಂತೋಷವಾಗಿದ್ದೇನೆಯೇ?

ಎಂದಿಗೂ ಇಲ್ಲ. ಅದನ್ನು ಕೇಳಿದಕೂಡಲೆ ತುಸು ವಿನೋದದಂತೆ ಕಂಡರೂ, ಆಮೇಲೆ ಅದಕ್ಕಾಗಿ ನಾನು ಬಹಳ ದುಃಖಪಟ್ಟೆ. ವಿಲಾಸಬಾಬುಗಳ ಸ್ವಭಾವ ಅಷ್ಟೊ ಸಮಾಧಾನದ್ದಲ್ಲ. ಇದ್ದಕ್ಕಿದ್ದಂತೆ ಸಿಟ್ಟಾಗಿ ಇತರರನ್ನು ಅವಮಾನ ಮಾಡುತ್ತಾರೆ. ಆದರೂ ಅದಕ್ಕಾಗಿ ನೀವು ಅಸಹಿಷ್ಣುಗಳಾಗಿ ಅವರಿಗೆ ಅವ ಮಾನಕರವಾದ ಮಾತನಾಡಿದ್ದೂ ಅಷ್ಟು ಒಳ್ಳೆಯದಲ್ಲ. ಇದು ಬಯಲಾದರೆ ಮುಂದೆ ಎಷ್ಟು ಲಜ್ಜೆ ಮತ್ತು ದುಃಖಕ್ಕೆ ಕಾರಣವಾಗುತ್ತೆ. ನೀವೇ ಯೋಚಿಸಿ ನೋಡಿ ನನ್ನಿಂದ ನಿಮ್ಮಿಬ್ಬರಲ್ಲಿ ಇಂತಹ ವಿಷಾದದ ಘಟನೆ ನಡೆದದ್ದ ಕ್ಕಾಗಿ........"

ಈ ವ್ಯಕ್ತಿಯ ಪವಿತ್ರ ಹೃದಯವನ್ನು ನೋಡಿ ವಿಜಯಳು ಮನಸ್ಸಿ ನಲ್ಲೇ ಮುಗ್ಧಳಾದಳು. ಆದರೂ ಹಾಸ್ಯದ ಭಂಗಿಯಲ್ಲಿ ಅವಳು ಕೇಳಿದಳು —" ಆದರೂ ನಿಮ್ಮ ನಗುವೂ ನಿಂತಿಲ್ಲವಲ್ಲ" ಎಂದು ಅವಳು ನಗಲು ಶುರು ಮಾಡಿದಳು. "

ನರೇಂದ್ರ ಪ್ರಯತ್ನದಿಂದ ಈಗ ಇನ್ನೂ ಗಂಭೀರವಾಗಿ ಹೇಳಿದ— " ನೀವು ಮತ್ತೆ ಮತ್ತೆ ಹೀಗೇಕೆ ಯೋಚಿಸುತ್ತೀರಿ? ನನಗೆ ನಿಜವಾಗಿಯೂ ಬಹಳ ದುಃಖವಾಗಿದೆ. ಆದರೆ ಆಗ ನಿಮ್ಮಿಬ್ಬರ ಸಂಬಂಧ ನನಗೆ ಗೊತ್ತಿರ ಲಿಲ್ಲ. " ಸ್ವಲ್ಪ ಹೊತ್ತು ಸುಮ್ಮನಿದ್ದು ಅವನು ಮತ್ತೆ ಹೇಳಿದ—"ಅಂದು ಸಂಜೆಯೇ ಅವರ ತಂದೆ ಕೆಳಗೆ ಬಂದು ಇದೆಲ್ಲ ಅಸೂಯೆಯಿಂದಾದದ್ದೆಂದು ಬಿಡಿಸಿ ಹೇಳಿದರು. ನಿನ್ನೆ ದಯಾಳ ಬಾಬುಗಳು ಇದೇ ವಿಷಯವನ್ನು ಹೇಳಿ ದರು. ಇದನ್ನು ಕೇಳಿ ನನಗೆಷ್ಟು ನಾಚಿಕೆಯಾಯಿತೆಂಬುದನ್ನು ವಿವರಿಸಿ ಹೇಳ ಲಾರೆ. ಆದರೆ ಇಷ್ಟು ಜನರ ಮಧ್ಯದಲ್ಲಿ ನನ್ನಮೇಲೆ ಅಸೂಯೆಪಡುವಂತಹು ದೇನೆಂಬುದೇ ನನಗೆ ತಿಳಿಯದಾಗಿದೆ. ನೀವು ಬ್ರಹ್ಮಸಮಾಜಿಗಳು. ಬೇಕಾ ದರೆ ಯಾರ ಜೊತೆಗಾದರೂ ಮಾತಾಡುತ್ತೀರಿ. ನನ್ನೊಂದಿಗೂ ಹಾಗೇ ಮಾತಾಡಿದಿರಿ. ಇದರಲ್ಲಿ ಅವರಿಗೆ ಏನು ತಪ್ಪು ಕಂಡಿತೆಂಬುದೇ ನನಗೆ ಅರ್ಥ ಗಲೊಲ್ಲದು. ಏನಾದರಾಗಲಿ ನನ್ನನ್ನು ನೀವುಗಳು ಕ್ಷಮಿಸಿ. ನಿಮ್ಮ ಭಾಷೆ ಯಲ್ಲಿ ಏನು ಹೇಳುತ್ತೀರಿ........ಅಭಿ........ಅಭಿನಂದನೆಗಳು! ನಿಮಗೆ ಅಭಿ ನಂದನೆಗಳನ್ನು ಮಾಡಿ ಹೋಗುತ್ತೇನೆ. ನೀವಿಬ್ಬರು ಸುಖವಾಗಿರಿ."

ನರೇಂದ್ರ ಹಿಂದಿನ ಅವನ ಆಚರಣೆಯ ವಿಷಯ ಹೇಳಿದರೂ, ತನ್ನ ನಡವಳಿಕೆ ಸುದ್ದಿಯನ್ನೇ ಹೇಳದಿದ್ದುದನ್ನು ವಿಜಯಚೆನ್ನಾಗಿ ಗಮನಿಸಿದಳು.

ನರೇಂದ್ರನ ಕೊನೆಯ ಮಾತುಗಳನ್ನು ಕೇಳಿ ಅವಳ ಕಣ್ಣುಗಳು ಹನಿಗೂಡಿದವು. ಅವಳು ಮುಖ ತಿರುಗಿಸಿ ಹೇಗೋ ಅದನ್ನು ತಡೆದಳು.

ತನ್ನ ಮಾತಿಗೆ ಉತ್ತರವನ್ನು ನಿರೀಕ್ಷಿಸದೆ ನರೇಂದ್ರ ಹೇಳಿದ—"ಅಂದ ಹಾಗೆ ಅಂದು ಕಾಲೀಪದನ ಕೈಯಲ್ಲಿ ಸೂಕ್ಷ್ಮದರ್ಶಿನಿಯನ್ನು ಸ್ಪೇರ್ಷಗೇಕೆ ಕಳುಹಿಸಿದಿರಿ?"

ಕಂಠ ಬಿಗಿದಿದ್ದನ್ನು ಸರಿಮಾಡಿಕೊಳುತ್ತಾ ವಿಜಯಳು ಹೇಳಿದಳು—

"ನಿಮ್ಮ ಪದಾರ್ಥವನ್ನು ನೀವೇ ವಾಪಸು ತೆಗೆದುಕೊಂಡು ಹೋಗ ಬಯಸಿದ್ದಿರಿ."

"ಆದರೆ ದುಡ್ಡಿನ ವಿಷಯ ನೀವು ಅವನೊಂದಿಗೆ ಹೇಳಿಕಳುಹಿಸಿಯೇ ಇರಲಿಲ್ಲವಲ್ಲ? ಅಂತಹ ಸ್ಥಿತಿಯಲ್ಲಿ ನನ್ನ........"

"ಹೌದು. ಹೇಳಿ ಕಳುಹಿಸಿರಲಿಲ್ಲ. ಖಾಯಿಲೆಯಿಂದ ನನ್ನದು ತಪ್ಪು ಆಯಿತು. ಆದರೆ ತಾವು ಅದಕ್ಕೇನೂ ಕಡಮೆ ಶಿಕ್ಷೆ ಮಾಡಲಿಲ್ಲವಲ್ಲ."

ನರೇಂದ್ರ ಸಂಕೋಚದಿಂದ ಹೇಳಿದ—"ಆದರೆ ಕಾಲೀಪದ...."

"ಅಲ್ಲದೆ ನಾನು ಕೇಳಿದೆ. ಅವನು ಏನಾದರೂ ಹೇಳಲಿ. ನಾನು ನಿಮಗೆ ಅದನ್ನು ಉಚಿತವಾಗಿ ಕೊಡುವಷ್ಟು ಅಧಿಕಪ್ರಸಂಗಕ್ಕೆ ಹೋಗುತ್ತೇನೆಂಬುದನ್ನು ನೀವು ಹೇಗೆ ನಂಬಿದಿರಿ? ಅದು ನಿಜವಿದ್ದರೂ, ನಿಮ್ಮ ಕೈಯಿಂದೇಕೆ ಅದಕ್ಕೆ ಶಿಕ್ಷೆ ಕೊಡಲಿಲ್ಲ? ಆಳಿನ ಮೂಲಕ ಏಕೆ ಅವಮಾನ ಮಾಡಿದಿರಿ? ನಿಮಗೇನು ನಾನು ಕೇಡು ಬಯಸಿದ್ದೆ?" ಎನ್ನುತ್ತಿದ್ದಂತೆ ಅವಳ ಕಂಠ ಮತ್ತೆ ಬಿಗಿಯಿತು.

ನರೇಂದ್ರ ಬಹಳ ಸಂಕೋಚದಿಂದ ಮುಖವೆತ್ತಿ ಅವಳನ್ನು ನೋಡಿದ. ಆದರೆ ಅವಳು ಮುಖ ತಿರುಗಿಸಿಕೊಂಡು ಕಿಟಕಿಯಲ್ಲಿ ನೋಡುತ್ತಿದ್ದಳು. ಅವಳ ಮುಖದಮೇಲೆ ಅವನ ದೃಷ್ಟಿ ಬೀಳದೆ ಅವಳ ಕುತ್ತಿಗೆಯಲ್ಲಿದ್ದ ವಜ್ರದ ಹಾರದ ಮೇಲೆ ಬಿದ್ದಿತು. ಆ ದೀಪದ ಪ್ರಕಾಶದಲ್ಲಿ ಅದು ತಳತಳನೆ ಹೊಳೆಯುತ್ತಿತ್ತು. ಇಬ್ಬರೂ ಸ್ವಲ್ಪ ಹೊತ್ತು ಸುಮ್ಮನಿದ್ದರು. ಆಮೇಲೆ ನರೇಂದ್ರ ದುಃಖದ ದನಿಯಲ್ಲಿ ಹೇಳಿದ—"ನಾನು ಮಾಡಿದ್ದು ಸರಿಯಲ್ಲವೆಂದು ಆಗಲೆ ನಾನು ಅಂದುಕೊಂಡೆ. ಆದರೆ ಆಗಲೆ ರೈಲು ಹೊರಟುಬಿಟ್ಟಿತ್ತು. ಕಾಲೀಪದನದೇನು ತಪ್ಪು. ನಾನವನಮೇಲೆ ಸಿಟ್ಟಾಗ

ಬಾರದಾಗಿತ್ತು." ಸ್ವಲ್ಪ ಹೊತ್ತು ಸುಮ್ಮನಿದ್ದು ಮತ್ತೆ ಹೇಳಿದ—"ನೋಡಿ ಈ ಅಸೂಯೆ ಎಷ್ಟು ಕೆಟ್ಟದ್ದೆಂಬುದು ನನಗೆ ಚನ್ನಾಗಿ ಅರ್ಥವಾಗಿದೆ. ಇದು ತ್ವಷ್ಟಕ್ಕೆ ಜೀಕೆಯುವುದಲ್ಲದೆ, ಸಾಂಕ್ರಾಮಿಕ ರೋಗದಂತೆ ಇತರರ ಮೇಲೂ ಆಕ್ರಮಣ ಮಾಡುತ್ತೆ. ನನ್ನಲ್ಲಿ ಅಸೂಯೆಪಡುವಂತಹ ಭ್ರಮೆ ವಿಲಾಸಬಾಬುಗಳಿಗೆ ಇನ್ನಾವುದೂ ಅಲ್ಲ. ಅವರಿಗಾಗಿ ಅವರ ತಂದೆಯವರು ಸಹ ದುಃಖ ಮತ್ತು ಸಂಕೋಚವನ್ನು ವ್ಯಕ್ತಪಡಿಸಿದರು. ಆದರೆ ಆಗ ನನ್ನದೂ ಕಡಿಮೆ ತಪ್ಪಾಗಲಿಲ್ಲವೆಂದರೆ ನಿಮಗೆ ಆಶ್ಚರ್ಯವಾಗಬಹುದು."

ವಿಜಯಳು ಮುಖ ತಿರುಗಿಸಿದಳು—"ನಿಮ್ಮ ತಪ್ಪು ಹೇಗೆ?"

ನರೇಂದ್ರ ಅತ್ಯಂತ ಸರಳ ಮತ್ತು ಸ್ವಾಭಾವಿಕ ಸ್ವರದಲ್ಲಿ ಹೇಳಿದ. "ನನ್ನನ್ನು ನಿರರ್ಥಕವಾಗಿ ಅವಮಾನ ಮಾಡಿದ್ದರಿಂದ ನಿಮಗೆ ನಿಜವಾಗಿಯೂ ದುಃಖವಾಯಿತು. ಅಂದು ನಿಮ್ಮ ಮಾತನ್ನು ಕೇಳಿ ಎಲ್ಲರಿಗೂ ಅರ್ಥವಾಯಿತು. ಆಮೇಲೆ ರಾಸಬಿಹಾರಿ ಬಾಬುಗಳು ಕೆಳಗೆ ಬಂದು ತಮ್ಮ ಮಗನ ಅಸೂಯೆಯ ವಿಷಯ ಪ್ರಸ್ತಾಪಿಸಿ ನಾನು ದುಃಖಪಡಬೇಕಾದ್ದಿಲ್ಲವೆಂದು ಹೇಳಿದಮೇಲೆ, ಇದ್ದಕ್ಕಿದ್ದಂತೆ ನನ್ನ ದುಃಖ ಇನ್ನೂ ಹೆಚ್ಚಿತು. ಇದರಲ್ಲೇನೋ ಇರಬೇಕು. ಇಲ್ಲದೆ, ನಿರರ್ಥಕವಾಗಿ ಒಬ್ಬರ ಮೇಲೊಬ್ಬರು ಅಸೂಯೆಪಡುತ್ತಾರೇಕೆ? ಅದಾದಮೇಲೆ ಸುಮಾರು ಎಂಟು ಹತ್ತು ದಿನ, ದಿನಕ್ಕೆ ಹನ್ನೆರಡು ಹದಿಮೂರು ಗಂಟೆಗಳ ಕಾಲ-ನಿಮ್ಮ ವಿಷಯವನ್ನೇ ಯೋಚಿಸುತ್ತಿದ್ದೆ. ನೀವು ಖಾಯಿಲೆಯಾದಾಗ ಆಡಿದ ಆ ಮಾತುಗಳೇ ನೆನಪಿಗೆ ಬರುತ್ತಿತ್ತು. ಆದ್ದರಿಂದಲೇ ಇದು ಭಯಂಕರ ಸಾಂಕ್ರಾಮಿಕ ರೋಗವೆಂದು ನಾನು ಹೇಳಿದ್ದು. ಕೆಲಸ ಕಾರ್ಯಗಳೆಲ್ಲ ಮಣ್ಣುಗೂಡಿದವು. ಯಾವಾಗಲೂ ನಿಮ್ಮ ವಿಷಯವೇ ಮನಸ್ಸಿನಲ್ಲಿ ಕೆಲಸಮಾಡುತ್ತಿತ್ತು. ಇದೇಕಾಗಬೇಕಾಗಿತ್ತು? ಹೇಳಿ. ಇಷ್ಟೇ ಅಲ್ಲ ಸುಮ್ಮನೆ ನಿಮ್ಮನ್ನು ನೋಡುವುದಕ್ಕಾಗಿಯೇ ಈ ದಾರಿಯಲ್ಲಿ ಎರಡು ಮೂರು ಸಲ ಓಡಾಡಿದೆ. ಹೀಗೆ ಈ ಹುಚ್ಚು ಎಷ್ಟೋ ದಿನ ನನ್ನ ಬೆನ್ನು ಹತ್ತಿತ್ತು," ಎಂದು ಅವನು ನಗಲು ಶುರುಮಾಡಿದ.

ವಿಜಯಳು ಅವನನ್ನು ನೋಡಿದಳು. ಯಾವ ಮಾತೂ ಆಡಲಿಲ್ಲ. ಸುಮ್ಮನೆ ಎದ್ದು ಮಗ್ಗುಲ ಬಾಗಿಲಿನಿಂದ ಮನೆಯೊಳಗೆ ಹೊರಟು ಹೋದಳು. ಆಗ ನರೇಂದ್ರನ ನಗು ಒಂದು ಕ್ಷಣದಲ್ಲೇ ಮಾಯವಾಯಿತು.

ಅವಳು ಹೋದ ದಾರಿಯನ್ನೇ ನೋಡುತ್ತಾ 'ಇದೇನು ಹೊಸ ಅಪರಾಧ ಮಾಡಿದೆ' ನೆಂದು ದಂಗಾಗಿ ಕುಳಿತ.

ಆಳು ಬಂದು—"ನೀವು ಹೋಗಕೂಡದಂತೆ. ಚಹ ಸಿದ್ಧವಾಗುತ್ತಿದೆ" ಎಂದು ಹೇಳಿದಕೂಡಲೆ ನರೇಂದ್ರ ವ್ಯಸ್ತನಾಗಿ 'ನನಗೆ ಚಹ ಬೇಕಾಗಿಲ್ಲ' ಎಂದ.

"ಆದಗೆ ಅಮ್ಮಾವ್ರು ನಿಮ್ಮನ್ನು ಕುಳಿತಿರಬೇಕೆಂದು ಹೇಳಿದ್ದಾರೆ" ಎಂದು ಹೇಳಿ ಆಳು ಹೊರಟುಹೋದ. ಇದರಿಂದಲೂ ನರೇಂದ್ರನಿಗೆ ಆಶ್ಚರ್ಯವಾಯಿತು.

ಸುಮಾರು ಕಾಲುಗಂಟೆಯಾದಮೇಲೆ ಆಳಿನ ಕೈಯಿಲ್ಲಿ ಚಹವನ್ನು ತೆಗೆಸಿಕೊಂಡು ತಾನು ಉಪಾಹಾರದ ತಟ್ಟೆಯನ್ನು ಹಿಡಿದುಕೊಂಡು ವಿಜಯಳು ಬಂದಳು. ಎಷ್ಟು ಪ್ರಯತ್ನಮಾಡಿದರೂ ವಿಜಯಳಿಗೆ ಮುಖದ ಮೇಲಿನ ಅಳುವಿನ ಭಾವನೆಯನ್ನು ಮರೆಮಾಚಲು ಸಾಧ್ಯವಾಗಲಿಲ್ಲವೆಂಬುದು ಆ ಮಸುಕಿನಲ್ಲಿ ಯಾರಿಗೂ ತಿಳಿಯುತ್ತಿರಲಿಲ್ಲ. ಆದರೆ ಡಾಕ್ಟರಿಗೆ ಮಾತ್ರ ಅದು ತಿಳಿಯದಿರಲಿಲ್ಲ. ಆದರೆ ಅವನು ಈಗ ಯಾವ ಅಭಿಪ್ರಾಯವನ್ನೂ ವ್ಯಕ್ತಪಡಿಸಲಿಲ್ಲ. ಈಗ ಕೆಲವು ದಿನಗಳಿಂದ ಅವನು ಎಷ್ಟೋ ವಿಷಯಗಳಲ್ಲಿ ಗಂಭೀರನಾಗಿರುವುದನ್ನು ಕಲಿತುಕೊಂಡಿದ್ದ. ಹಿಂದೆ ಒಂದು ದಿನ ಒಂದು ರೀತಿಯಲ್ಲಿ ಅಪರಿಚಿತನಾಗಿದ್ದರೂ ಅವನು ಸಾಧಾರಣ ಕುತೂಹಲವನ್ನೂ ತಡೆಯದೆ ಕೈಯಿಂದ ವಿಜಯಳ ಮುಖ ಹಿಡಿದೆತ್ತಿದ್ದ. ಈಗ ಅಂತಹ ಕಾಲ ಹೊರಟುಹೋಗಿತ್ತು. ಆದ್ದರಿಂದಲೇ ಅವನು ಸುಮ್ಮನಿದ್ದ.

ಆಳು ಮೇಜಿನಮೇಲೆ ಚಹವನ್ನಿಟ್ಟು ಹೊರಟುಹೋದ. ವಿಜಯಳು ಅದರ ಹತ್ತಿರವೇ ಉಪಾಹಾರದ ತಟ್ಟೆಯನ್ನಿಟ್ಟು ತನ್ನ ಸ್ಥಳದಲ್ಲಿ ಹೋಗಿ ಕುಳಿತುಕೊಂಡಳು. ಕೂಡಲೆ ನರೇಂದ್ರ ಇದಕ್ಕಾಗಿಯೆ ಕಾದಿದ್ದನೇನೋ ಎನ್ನುವಂತೆ ತಟ್ಟೆಯನ್ನು ಹತ್ತಿರ ಎಳೆದುಕೊಂಡು ಗಬಗಬನೆ ತಿನ್ನಲು ಶುರು ಮಾಡಿದ.

ಐದಾರು ನಿಮಿಷಗಳು ಸುಮ್ಮನೆ ಕಳೆದಮೇಲೆ ಮೊದಲು ವಿಜಯಳು ಮಾತಿಗೆ ಶುರು ಮಾಡಿದಳು. ಮೌನವನ್ನು ಹೆಚ್ಚು ತಾಳಲಾರದೆ ಅವನು

ಗಟ್ಟಿಯಾಗಿ ನಕ್ಕು ಹೇಳಿದಳು—“ ನೀವು ಆ ಮೊದಲಿನ ಭೂತದ ವಿಷಯು ವನ್ನು ಮುಗಿಸಲೇ ಇಲ್ಲವಲ್ಲ.”

ನರೇಂದ್ರ ಇನ್ನೇನೋ ಯೋಚಿಸುತ್ತಿದ್ದುದರಿಂದ ಮುಖವೆತ್ತಿ ಕೇಳಿದ —“ ಯಾವ ಭೂತದ ವಿಷಯ ? ”

“ ಅದೇ ಆ ಹುಚ್ಚು ಭೂತ, ನಿಮ್ಮ ಕುತ್ತಿಗೆಯ ಮೇಲೆ ಕುಳಿತಿತ್ತಲ್ಲ ಅದು. ಈಗ ಅದು ಇಳಿದುಹೋಯಿತಲ್ಲವೇ ? ”

“ ಹೌದು. ಇಳಿದುಹೋಯಿತು ” ಈಗ ನರೇಂದ್ರನು ನಕ್ಕು ಹೇಳಿದ.

“ ಸಧ್ಯ ಒಳ್ಳೆಯದೇ ಆಯಿತು ಬಿಡಿ. ನೀವು ಉಳಿದಹಾಗಾಯಿತು. ಇಲ್ಲದಿದ್ದರೆ ಇನ್ನೆಷ್ಟು ದಿನ ನಿಮ್ಮ ಬೆನ್ನಟ್ಟಿ ಗೋಳಾಡಿಸುತ್ತಿತ್ತೋ ಯಾರು ಬಲ್ಲರು ? ”

“ ಹೌದು. ” ನರೇಂದ್ರ ಬಾಯಲ್ಲಿ ಚಹದ ಬಟ್ಟಲಿದ್ದ ಹಾಗೇ ಉತ್ತರಕೊಟ್ಟ.

ವಿಜಯಳು ಇನ್ನೇನೂ ಹೇಳ ಬಯಸದಿದ್ದರೂ, ಅವಳ ಬಾಯ ವರೆಗೂ ಬಂದ ನಿಟ್ಟುಸಿರನ್ನು ಹೇಗೋ ತಡೆದು ಸುಮ್ಮನಾದಳು. ತಾನಾ ಡಿದ ಮಾತಿನ ಹಾಸ್ಯದೊಂದಿಗೆ ಅವಳು ಬೆರೆಯದಾದಳು.

ಮತ್ತೆ ಸ್ವಲ್ಪ ಹೊತ್ತು ಕೋಣೆಯೆಲ್ಲ ಸ್ತಬ್ಧವಾಗಿತ್ತು. ನರೇಂದ್ರ ನಿಧಾನವಾಗಿ ಚಹವನ್ನು ಕುಡಿದು ಮುಗಿಸಿ, ಜೇಬಿನಿಂದ ಗಡಿಯಾರವನ್ನು ತೆಗೆದುನೋಡಿ “ ಇನ್ನು ಹತ್ತು ನಿಮಿಷ ಅವಕಾಶವಿದೆ. ನಾನಿನ್ನು ಹೊರಟೆ.” ಎಂದ.

“ ಕಲಿಕತ್ತೆಗೆ ಇದೇ ಕೊನೆಯ ಗಾಡಿಯೆಂದು ತೋರುತ್ತೆ.”

ನರೇಂದ್ರ ಎದ್ದುನಿಂತು ತಲೆಯಮೇಲೆ ಹ್ಯಾಟನ್ನು ಇಟ್ಟುಕೊಂಡು ಹೇಳಿದ—“ ಇನ್ನೊಂದು ಗಾಡಿ ಇದೆ. ಆದರೆ ಅದು ಹೊರಡುವುದಕ್ಕೆ ಇನ್ನೂ ಸುಮಾರು ಒಂದೂವರೆ ಗಂಟೆ ತಡ. ಹೊರಡುತ್ತೇನೆ........ನಮ ಸ್ಕಾರ” ಎಂದು ಕೋಲನ್ನು ಹಿಡಿದುಕೊಂಡು ಜಾಗ್ರತೆಯಾಗಿ ಕೋಣೆ ಯಿಂದ ಹೊರಹೊರಟ.

೨೧

ವಿಲಾಸ ಹೊತ್ತಿಗೆ ಸರಿಯಾಗಿ ಕಚೇರಿಗೆ ಬಂದು ತನ್ನ ಕೆಲಸವನ್ನು ಮುಗಿಸಿಕೊಂಡು ಮನೆಗೆ ಹೋಗುತ್ತಿದ್ದ. ಅಗತ್ಯವಿದ್ದಾಗ ಮಾತ್ರ

ಗುಮಾಸ್ತನನ್ನು ಕಳುಹಿಸಿ ವಿಜಯಳ ಅಭಿಪ್ರಾಯವನ್ನು ತೆಗೆದುಕೊಳ್ಳುತ್ತಿದ್ದ.

ತಾನು ಮಾತ್ರ ಬರುತ್ತಿರಲಿಲ್ಲ. ಹೇಳಿ ಕಳುಹಿಸಿದ ಹೊರತು ಅವನಾಗಿ ಬರುವುದಿಲ್ಲವೆಂದು ವಿಜಯಳಿಗೂ ತಿಳಿದಿತ್ತು. ಆದರೆ ಅವನ ಆಚರಣೆಯಲ್ಲಿ ಸ್ವಾಭಿಮಾನ ವೇದನೆ ಮತ್ತು ಅನುತಾಪ ತೋರುತ್ತಿತ್ತೇ ಹೊರತು ಸಿಟ್ಟಿನ ಚಿಸ್ಹೆ ಇರಲಿಲ್ಲ. ಇದರಿಂದ ವಿಜಯಳ ಸಿಟ್ಟೂ ಬೇಗ ಶಾಂತವಾಯಿತು.

ತನ್ನ ನಡೆ ನುಡಿ ನಾಟಕದ ಅಭಿನಯದಂತೆ ಕಂಡಿದ್ದರಿಂದ ಅವಳಿಗೆ ಮಧ್ಯದಲ್ಲಿ ನಾಚಿಕೆಯಾಗುತ್ತಿತ್ತು. ಈ ವಿಷಯವನ್ನು ತೆಗೆದುಕೊಂಡು ಎಷ್ಟೋ ಜನ ನಗೆಯಾಡುತ್ತಿರಬಹುದೆಂದು ಅವಳು ಯೋಚಿಸುತ್ತಿದ್ದಳು. ಅಷ್ಟೇ ಅಲ್ಲದೆ ಇದುವರೆಗೂ ಎಲ್ಲರೆದುರಿಗೂ ಸರ್ವಾಧಿಕಾರಿಯಾಗಿದ್ದವನನ್ನು, ಜಮೀನುದಾರಿಯ ವಿಷಯದಲ್ಲಿ ಎಲ್ಲರ ಮೇಲೂ ಅಧಿಕಾರ ಮಾಡುತ್ತಿದ್ದವನನ್ನು ಎಲ್ಲರೆದುರಿಗೂ ಇಷ್ಟು ಚಿಕ್ಕವನನ್ನಾಗಿ ಮಾಡಿದ್ದಕ್ಕೆ ಅವಳಿಗೆ ನಿಜವಾಗಿಯೂ ದುಃಖವಾಯಿತು. ಮೊದಲಿನ ರೀತಿಯಂತೆ ಆಗದಿದ್ದರೂ ಈ ಘಟನೆ ನಡೆವೇ ಇಲ್ಲದಂತೆ ಮಾಡಿದರಾದರೂ ಅವಳಿಗೆ ಎಷ್ಟೋ ಸಮಾಧಾನವಾಗುತ್ತಿತ್ತು. ಅವಳು ಹೀಗೆ ಯೋಚಿಸುತ್ತಿರುವಾಗ ಒಂದು ದಿನ ಅಕಸ್ಮಾತ್ ಆಳು ಬಂದು ಹೇಳಿದ—"ವಿಲಾಸಬಾಬುಗಳು ನಿಮ್ಮನ್ನು ಭೇಟಿ ಮಾಡಲು ಬಂದಿದ್ದಾರೆ."

ಇದೊಂದು ಹೊಸ ಅನುಭವದಂತಿತ್ತು. ವಿಜಯಳು ಕಾಗದ ಬರೆಯುತ್ತಿದ್ದವಳು ಮುಖವೆತ್ತದೆ "ಒಳಗೆ ಕರೆ" ಎಂದಳು. ಅನೇಕ ಆಶಂಕೆಗಳಿಂದ ಅವಳ ಮನಸ್ಸು ಚಂಚಲವಾಯಿತು. ವಿಲಾಸ ಬಂದಕೂಡಲೆ ಅವಳೆದ್ದು ನಿಂತು ಶಾಂತ ರೀತಿಯಿಂದ "ಬನ್ನಿ" ಎಂದು ನಮಸ್ಕಾರ ಮಾಡಿದಳು.

ವಿಲಾಸ ಕುರ್ಚಿಯ ಮೇಲೆ ಕುಳಿತುಕೊಳ್ಳುತ್ತಾ ಹೇಳಿದ—"ಕೆಲಸ ಹೆಚ್ಚಾಗಿದ್ದುದರಿಂದ ಬರಲಾಗಲಿಲ್ಲ. ನೀನು ಆರೋಗ್ಯವಾಗಿದ್ದೀಯಷ್ಟೆ?"

"ಹೂಂ"

"ಅದೇ ಔಷಧ ತೊಗೊಳ್ಳುತ್ತಿದ್ದೀಯಾ?"

ಇದಕ್ಕೆ ವಿಜಯಳು ಉತ್ತರ ಕೊಡಲಿಲ್ಲ. ವಿಲಾಸನೂ ಮತ್ತೆ ಪ್ರಶ್ನೆ

ಮಾಡಲಿಲ್ಲ. ಅವನು ಮಾತನ್ನು ಬದಲಿಸಿ ಹೇಳಿದ—"ನಾಳೆ ಹೊಸ ವರ್ಷದ ಮೊದಲನೆಯ ದಿನ. ಎಲ್ಲರನ್ನೂ ಕರೆಸಿ ಭಗವಚ್ಚರ್ಚೆ ಮಾಡಿ ಸೋಣವೆಂದು ಆಸೆಯಿದೆ."

ವಿಲಾಸ ಮೊದಲನೆಯ ಪ್ರಶ್ನೆಯ ಉತ್ತರಕ್ಕಾಗಿ ಹೆಚ್ಚು ಬಲವಂತ ಮಾಡದಿದ್ದುದಕ್ಕೆ ವಿಜಯಳಿಗೆ ಸಮಾಧಾನವೆನಿಸಿತು. ಅವಳು ಸಂತೋಷ ದಿಂದ ಹೇಳಿದಳು :—" ಇನ್ನೊಳ್ಳೆಯ ವಿಷಯವೇ."

"ಅನೇಕ ಕಾರಣಗಳಿಂದ ಮಂದಿರಕ್ಕೆ ಹೋಗಲಾಗಲಿಲ್ಲ. ನಿನ್ನ ಅಭ್ಯಂತರವೇನೂ ಇಲ್ಲದಿದ್ದರೆ ಇಲ್ಲೇ........"

ವಿಜಯಳು ಕೂಡಲೆ ಒಪ್ಪಿಗೆಯಿತ್ತದ್ದಲ್ಲದೆ ಉತ್ಸಾಹವನ್ನೂ ತೋರಿಸಿ ಹೇಳಿದಳು:—" ಹಾಗಾದರೆ ಮನೆಯನ್ನು ಹಣ್ಣು-ಹೂವು, ಬಳ್ಳಿಗಳಿಂದ ಅಲಂಕರಿಸಬೇಡವೇ? ನಿಮ್ಮ ಮನೆಯಲ್ಲಿ ಬೇಕಾದಷ್ಟು ಹೂ ಇವೆ. ಆಳಿಗೆ ಹೇಳಿ ನಾಳೆ ಬೆಳಿಗ್ಗೆಯೇ........ನಿಮ್ಮ ಅಭಿಪ್ರಾಯವೇನು? ಸರಿಯಲ್ಲವೇ?"

ವಿಲಾಸ ಹೆಚ್ಚಿನ ಆನಂದದ ಆಡಂಬರವನ್ನು ತೋರದೆ ಸಹಜವಾಗೇ ಹೇಳಿದ—" ಹಾಗೇ ಆಗಲಿ. ನಾನೆಲ್ಲ ವ್ಯವಸ್ಥೆ ಮಾಡುತ್ತೇನೆ."

ವಿಜಯಳೊಂದು ಕ್ಷಣ ಸುಮ್ಮನಿದ್ದು ಹೇಳಿದಳು—" ನಾಳೆ ಹೊಸ ವರ್ಷಾರಂಭ. ಸ್ವಲ್ಪ ಊಟ ತಿಂಡಿಗೂ ವ್ಯವಸ್ಥೆ ಮಾಡಿದರೆ........"

ಇದಕ್ಕೂ ಸಮ್ಮತಿಯಿತ್ತು ವಿಲಾಸ 'ಉಪಾಸನೆಯಾದ ಮೇಲೆ ಉಪಾಹಾರಕ್ಕೆ ಸರಿಯಾದ ಏರ್ಪಾಡು ಮಾಡುವಂತೆ ಗುಮಾಸ್ತನಿಗೆ ಹೇಳು ತ್ತೇನೆ' ಎಂದ. ಇನ್ನು ಕೆಲವು ಸಾಮಾನ್ಯ ಮಾತುಗಳಾಡಿ ಅವನು ಹೊರಟು ಹೋದಕೂಡಲೆ ವಿಜಯಳಿಗೆ ಬಹು ದಿವಸಗಳಿಂದಿಲ್ಲದ ಶಾಂತಿ ಸಮಾಧಾನಗಳಾಯಿತು. ಅಂದು ಘರ್ಷಣೆಯಾದಮೇಲೆ ಅವಳು ಅನು ಭವಿಸುತ್ತಿದ್ದ ದುಗುಡವೆಂತಹುದೆಂಬುದು ಈಗ ಅರ್ಥವಾಯಿತು. ಇಷ್ಟು ಸ್ವಲ್ಪ ದಿವಸಗಳಲ್ಲೇ ವಿಲಾಸ ಮೊದಲಿಗಿಂತಲೂ ಎಷ್ಟು ಇಳಿದು ಹೋಗಿ ದ್ದಾನೆಂಬುದು ಅವಳ ಮನಸ್ಸಿಗೆ ಬಂದಿತು. ಅವಮಾನ ಮತ್ತು ಪಶ್ಚಾ ತ್ತಾಪದಿಂದ ಅವನೆಷ್ಟು ಸೊರಗಿದ್ದಾನೆಂಬುದನ್ನು ಅವಳು ತನ್ನ ಕಣ್ಣು ಗಳಿಂದಲೇ ನೋಡಿ, ಅಂದು ವೃದ್ಧ ರಾಸಬಿಹಾರಿ ಆಡಿದ ಮಾತುಗಳನ್ನು ನೆನಸಿಕೊಂಡಳು. ವಿಲಾಸ ಅವಳಲ್ಲಿ ಅಗಾಧ ಪ್ರೇಮ ಮಾಡುತ್ತಾನೆಂಬುದು ಅವನ ಭಾವ ಭಂಗಿಗಳಿಂದ ಸ್ಪಷ್ಟವಾದರೂ, ಒಂದು ದಿನವೂ ಏಕಾಂತ

ದಲ್ಲಿ ಅವನ ಪ್ರೇಮಕ್ಕೆ ಅವಳ ಹೃದಯದಲ್ಲನುವು ದೊರೆತಿರಲಿಲ್ಲ. ಸಂಜೆಯ ಮುಸುಕಿನಲ್ಲಿ ಏಕಾಂತದಲ್ಲಿ ತನ್ನ ಕೋಣೆಯಲ್ಲಿ ಅವಳ ಕಲ್ಪನೆಗೆ ವಿಷಯ ವಾಗಿ ಅವಳಿಗೆ ವ್ಯಥೆಯನ್ನು ಕೊಡುತ್ತಿದ್ದವೆಂದರೆ ವಿಲಾಸನಲ್ಲ, ಇನ್ನೊಂದು ವ್ಯಕ್ತಿ. ಮಧ್ಯಾಹ್ನದಲ್ಲಿ ಪುಸ್ತಕದಲ್ಲಿ ಬೇಸರ ಹುಟ್ಟಿ, ಕಸೂತಿಯಲ್ಲೂ ಮನಸ್ಸು ನಿಲ್ಲದಿದ್ದಾಗ, ಉರಿಬಿಸಲಿನಲ್ಲಿ ಮನೆ ಶೂನ್ಯವಾಗಿ ಕಂಡಾಗ ಮುಂದಿನ ಗೃಹಸ್ಥ ಜೀವನದ ಆಶಾಕಿರಣ ಅವಳ ಮನಸ್ಸಿನಲ್ಲಿ ಮೂಡಿ ಈ ಶೂನ್ಯ ಗೃಹವನ್ನು ಪರಿಪೂರ್ಣ ಮಾಡುತ್ತಿದ್ದುದರಲ್ಲಿ ವಿಲಾಸನಿಗೆ ಸ್ವಲ್ಪವೂ ಸ್ಥಾನವಿರಲಿಲ್ಲ. ಅವಳ ಮನಸ್ಸನ್ನೆಲ್ಲಾ ಆವರಿಸಿದ್ದ ವ್ಯಕ್ತಿಯ ಬೆಲೆ ಸಂಸಾರದ ದುರ್ಗಮ ಯಾತ್ರೆಯಲ್ಲಿ ಸಹಾಯಕನಾಗುವ ದೃಷ್ಟಿಯಿಂದ ವಿಲಾಸನಿಗಿಂತ ಅತಿ ಸ್ವಲ್ಪ. ಅವನು ಅಪಟು ಮತ್ತು ನಿರುಪಾಯ. ಆಪತ್ತಿನ ಸಮಯದಲ್ಲಿ ಅವನಿಂದ ಯಾವ ವಿಧವಾದ ಸಹಾಯವೂ ಆಗಲಾರದು. ಅಂತಹ ಕೆಲಸಕ್ಕೆ ಬಾರದ ಮನುಷ್ಯನ ಎಲ್ಲ ಕೆಲಸಗಳ ಭಾರವನ್ನೂ ಜೀವನದಲ್ಲೆಲ್ಲಾ ತಾನೇ ಹೊತ್ತು ಹೋಗಬೇಕೆಂಬುದು ಅವಳಿಗೆ ಚೆನ್ನಾಗಿ ತಿಳಿದಿದ್ದರೂ, ಅವಳ ಮನಸ್ಸು ಅಮಿತ ಆನಂದದಿಂದ ಉಕ್ಕೇರಿ ಅವಳ ಮೈ ಥರಥರನೆ ನಡುಗುತ್ತಿತ್ತು. ಇಂದು ವಿಲಾಸ ಬಂದು ಹೋದಮೇಲೂ ಅವಳ ಆ ಅನುಭವಕ್ಕೆ ಯಾವ ಅಡ್ಡಿ ಆತಂಕವೂ ಬಂದೊದಗಲಿಲ್ಲ. ಆದರೆ ವಿಲಾಸ ಕೇಳಿಕೊಳ್ಳದಿದ್ದರೂ, ಅವನ ದೋಷಗಳನ್ನು ಪುನರ್ವಿಚಾರ ಮಾಡುವ ಭಾರ ಹೊತ್ತು ಅವಳು ಯೋಚಿಸುತ್ತ ಕುಳಿತಳು. ನಡೆದ ಘಟನೆಯಿಂದ ತೋರುವಷ್ಟು ಅವನ ಸ್ವಭಾವ ಹೀನವಾಗಿ ಕಾಣಲಿಲ್ಲ. ವಿಲಾಸನಂತೆ ಮಾನಸಿಕ ವ್ಯಥೆಯಲ್ಲಿ ಬಿದ್ದಿರುವ ಅನೇಕರೂ ಇನ್ನು ಬೇರೆ ರೀತಿಯಾಗೇ ವರ್ತಿಸುತ್ತಿದ್ದರೆಂದೂ ಅವಳು ಯೋಚಿಸಿದಳು. ಅವನು ಪ್ರೇಮ ಮಾಡಿದ ಆ ಅಪರಾಧಕ್ಕಾಗಿಯೇ ಶಿಕ್ಷೆಯನ್ನೂ ಅನುಭವಿಸಿದನೆಂಬುದು ಅವಳ ಮನಸ್ಸಿಗೆ ಬಂದಿದ್ದರಿಂದ ಅವಳು ಅವನನ್ನು ಕರುಣೆಯಿಂದ ಕ್ಷಮಿಸಿದಳು.

ಬೆಳಿಗ್ಗೆ ಎದ್ದಕೂಡಲೆ, ವಿಲಾಸ ಬಹಳ ಹೊತ್ತಿನಿಂದ ಆಳುಕಾಳುಗಳಿಂದ ಮನೆಯನ್ನು ಸಿಂಗರಿಸುತ್ತಿದ್ದಾನೆಂದು ಅವಳ ಕಿವಿಗೆ ಬಿದ್ದಿತು. ಅವಳೂ ಜಾಗ್ರತೆಯಾಗಿ ಸಿದ್ಧಳಾಗಿ ಕೆಳಗೆ ಹೋಗಿ ಸಂಕೋಚದಿಂದ—
"ನನಗೇಕೆ ಹೇಳಿಕಳುಹಿಸಲಿಲ್ಲ?" ವೆಂದು ಕೇಳಿದಳು.

" ಅಂತಹ ಅಗತ್ಯವೇನಿತ್ತು ? " ವಿಲಾಸ ಸ್ನೇಹ ಸ್ವರದಲ್ಲಿ ಕೇಳಿದ.

ವಿಜಯಳು ತುಸು ನಕ್ಕು ಪ್ರಸನ್ನಳಾಗಿ ಹೇಳಿದಳು—" ನಿಮ್ಮ ಕೆಲಸಕ್ಕೆ ಸಹಾಯ ಮಾಡದಿರುವಷ್ಟು ಅಪ್ರಯೋಜಕಳೇ ನಾನು ? ಹೂಂ. ನಾನೀಗ ಏನು ಮಾಡಬೇಕು ಹೇಳಿ."

ವಿಲಾಸ ನಕ್ಕು ಹೇಳಿದ—" ನಮ್ಮ ಕೆಲಸದಲ್ಲೇನೂ ವ್ಯತ್ಯಾಸವಾಗದಂತೆ ನೋಡಿಕೋ."

" ಸರಿ " ಎಂದು ಅವಳು ಒಂದು ಸೋಫಾದ ಮೇಲೆ ಕುಳಿತು ಸ್ವಲ್ಪ ಹೊತ್ತಿನ ಮೇಲೆ " ಉಪಾಹಾರದ ವ್ಯವಸ್ಥೆ ಏನಾಯಿತು ? " ಎಂದಳು.

" ಎಲ್ಲ ಸರಿಯಾಗಿದೆ. ಏನೂ ಯೋಚಿಸಬೇಕಾಗಿಲ್ಲ. " ವಿಲಾಸ ತಿರುಗಿ ಹೇಳಿದ.

" ನಾನಲ್ಲಿಗೇಕೆ ಹೋಗಬಾರದು ? "

" ಸರಿಯೇ " ಎಂದು ಅವನು ಮತ್ತೆ ಕಾರ್ಯ ತತ್ಪರನಾದ.

ಎಂಟು ಗಂಟೆಯಲ್ಲೇ ಎಲ್ಲ ಸಿದ್ಧತೆಗಳೂ ಮುಗಿದವು. ಇಷ್ಟರಲ್ಲೇ ವಿಜಯಳು ಬಂದು ಅನೇಕ ಸಣ್ಣ ಪುಟ್ಟ ಸಲಹೆಗಳನ್ನು ವಿಲಾಸನಿಂದ ಪಡೆದು ಹೋದಳು. ಅವಳಿಗೆ ಯಾವುದರಲ್ಲೂ ಯಾವ ಅಡ್ಡಿಯೂ ಕಾಣಲಿಲ್ಲ. ಆ ಹಿಂದಿನ ವಿರೋಧ ಗೊತ್ತಿಲ್ಲದಂತೆ ಮಾಯವಾಗಿ ಹೀಗೆ ಸುಲಭವಾಗಿ ಮಾತು ಕತೆ ನಡೆಯಬಹುದೆಂದು ಇಬ್ಬರೂ ಯೋಚಿಸಿರಲಿಲ್ಲ.

ವಿಜಯಳು ನಕ್ಕು ಹೇಳಿದಳು—" ನಾನು ಶುದ್ಧ ಅಪ್ರಯೋಜಕಳೆಂದು ನೀವು ನಿರ್ಣಯಿಸಿದ್ದೀರಿ. ನಾನೂ ನಿಮ್ಮ ಕೆಲಸದಲ್ಲಿ ಒಂದು ತಪ್ಪನ್ನು ಕಂಡು ಹಿಡಿದಿದ್ದೇನೆ."

ವಿಲಾಸ ಬೆಪ್ಪಾಗಿ ಹೇಳಿದ—" ನಾನೇನು ಅಪ್ರಯೋಜಕಳೆಂದೆನಲಿಲ್ಲವಲ್ಲ ತಪ್ಪೇನು ? "

" ನಾವು ಇರುವುದು ಒಟ್ಟು ನಾಲ್ಕೈದು ಜನ. ಸುಮಾರು ಇಪ್ಪತ್ತು ಜನಗಳಿಗೆ ಉಪಾಹಾರಕ್ಕೆ ವ್ಯವಸ್ಥೆಯಾಗಿದೆಯಲ್ಲ ? "

" ಅದು ಸರಿ. ಅಪ್ಪ ತನ್ನ ಕೆಲವು ಬಂಧುಗಳಿಗೆ ಆಹ್ವಾನ ಕೊಟ್ಟಿದ್ದಾರೆ. ಆದರೆ ಅವರೆಷ್ಟು ಜನ, ಯಾರು ಯಾರೆಂಬುದು ನನಗೆ ಸರಿಯಾಗಿ ಗೊತ್ತಿಲ್ಲ."

" ಇದೆಲ್ಲ ನನಗೆ ಹೇಳಲೇ ಇಲ್ಲವಲ್ಲ ? " ವಿಜಯಳು ಆಶ್ಚರ್ಯದಿಂದ ಕೇಳಿದಳು.

" ನಾನಿಲ್ಲಿಂದ ಹೋದಕೂಡಲೆ, ತಂದೆಯವರು ಕಾಗದ ಬರೆದು ಕಳು ಹಿಸಿರಲಿಲ್ಲವೇ ? " ವಿಲಾಸನೂ ಆಶ್ಚರ್ಯದಿಂದ ಕೇಳಿದ.

" ಇಲ್ಲ. "

" ಆದರೆ ಅವರು ಸ್ಪಷ್ಟವಾಗಿ ಹೇಳಿದ್ದರು ......." ವಿಲಾಸ ಅಲ್ಲಿಗೆ ತಡೆದ.

" ಏನು ಹೇಳಿದ್ದರು ? "

" ಬಹುಶಃ ನಾನು ಕೇಳುವುದರಲ್ಲೇ ತಪ್ಪಾಯಿತೋ, ಅಥವಾ ಅವರ ಕಾಗದ ಬರೆಯುವದನ್ನೇ ಮರೆತು ಬಿಟ್ಟರೋ ತಿಳಿಯಲಿಲ್ಲ. "

ವಿಜಯಳು ಮತ್ತೇನೂ ಕೇಳಲಿಲ್ಲ. ಅವಳ ಮನಸ್ಸಿನ ಆನಂದ ಇದ್ದಕ್ಕಿದ್ದಂತೆ ಮಾಯವಾಯಿತು.

ಅರ್ಧ ಗಂಟೆಯೊಳಗೆ ರಾಸಬಿಹಾರಿಯೂ ಬಂದ. ಒಂಬತ್ತು ಗಂಟೆ ಯೊಳಗೆ ಅವನು ಆಹ್ವಾನಿಸಿದ್ದ ಮಾನ್ಯ ಅಥಿತಿಗಳೂ ಬರಲಾರಂಭಿಸಿದರು. ಅವರೆಲ್ಲರೂ ಬ್ರಹ್ಮಸಮಾಜಿಗಳಲ್ಲದಿದ್ದರೂ, ರಾಸಬಿಹಾರಿಯ ಆಗ್ರಹ ಪೂರ್ವಕ ಆಹ್ವಾನವನ್ನು ಮೀರಲಾರದೆ ಬಂದಿದ್ದರು.

ರಾಸಬಿಹಾರಿ ಎಲ್ಲರನ್ನೂ ಆದರದಿಂದ ಸ್ವಾಗತಿಸಿ, ವಿಜಯಳಿಗೆ ಪರಿಚಯವಿಲ್ಲದವರನ್ನು ಅವಳಿಗೆ ಪರಿಚಯ ಮಾಡಿಸುತ್ತಾ, ನಿಕಟ ಭವಿಷ್ಯ ದಲ್ಲಿ ಆ ಹುಡುಗಿಯೊಂದಿಗೆ ಅತ್ಯಂತ ಹತ್ತಿರದ ಸಂಬಂಧ ಬೆಳೆಯುವು ದೆಂಬುದನ್ನು ಹೇಳಲು ಮರೆಯಲಿಲ್ಲ. ವಿಜಯಳು ಗಂಭೀರಳಾಗಿ ಅವರೆಲ್ಲ ರನ್ನೂ ಕುಳಿತುಕೊಳ್ಳುವಂತೆ ಹೇಳಿದಳು. ಅವಳು ಹೀಗೆ ಆದರೋಪಚಾರದಲ್ಲಿ ಮಗ್ನಳಾಗಿದ್ದಾಗ, ದೂರದಲ್ಲಿ ತೋಟದ ಹತ್ತಿರ ದಾರಿಯಲ್ಲಿ ದಯಾಳ ಬಾಬುಗಳು ಕಂಡರು. ಆದರೆ ಅವರೊಬ್ಬರೇ ಇರದೆ, ಅವರ ಜೊತೆಗೆ ಇನ್ನೊಬ್ಬ ಅಪರಿಚಿತ ಯುವತಿಯೂ ಇದ್ದಳು. ಒಳ್ಳೆಯ ರೂಪವಂತಳು. ವಿಜಯಳಿಗಿಂತ ಅವಳ ವಯಸ್ಸು ಸ್ವಲ್ಪ ಹೆಚ್ಚಾಗಿತ್ತು. ದಯಾಳರೂ ಅವ ಳನ್ನು ತನ್ನ ಸೋದರಸೊಸೆಯೆಂದು ಹೇಳಿದ್ದರು. ಅವಳ ಹೆಸರು ನಳಿನಿ. ಕಲಿಕತ್ತಾದಲ್ಲಿ ಕಾಲೇಜಿನಲ್ಲಿ ಅವಳು ಬಿ. ಎ. ಕ್ಲಾಸಿನಲ್ಲಿ ಓದುತ್ತಿದ್ದಳು. ಈನ್ನೂ ಬೇಸಿಗೆಯರಜ ಬಂದಿರಲಿಲ್ಲ. ಅದರೂ ಅತ್ತೆಗೆ ಖಾಯಿಲೆ

ಯಾಗಿದ್ದರಿಂದ ಸೇವೆಮಾಡಲು ಬಂದಿದ್ದಳು. ಬೇಸಿಗೆ ರಜವನ್ನು ಇಲ್ಲೇ ಮುಗಿಸಿಕೊಂಡು ಹೋಗಬೇಕೆಂದು ಮಾಡಿದ್ದಳು!

ನಳಿನಿಯನ್ನು ವಿಜಯಳು ಕಲಿಕತ್ತೆಯಲ್ಲಿ ನೋಡಿದ್ದರೂ, ಇಬ್ಬರಲ್ಲಿ ಮಾತುಕತೆಗಳಾಗಿರಲಿಲ್ಲ. ಆದರೂ ಇಲ್ಲಿ ಎಲ್ಲರಿಗಿಂತಲೂ ಅವಳೇ ಹೆಚ್ಚು ಆಪ್ತಳಾಗಿ ವಿಜಯಳಿಗೆ ಕಂಡಳು. ವಿಜಯಳು ಎರಡು ಕೈಗಳನ್ನು ಮುಂದೆ ಚಾಚಿ ಅವಳನ್ನು ಹಿಡಿದಪ್ಪಿ, ಹತ್ತಿರದಲ್ಲಿ ಕೂಡಿಸಿಕೊಂಡು ಪ್ರೇಮಾಲಾಪ ಗಳನ್ನು ಷುರುಮಾಡಿದಳು.

ಒಂಭತ್ತೂವರೆಗೆ ಉಪಾಸನೆ ಆರಂಭವಾಗಬೇಕಾಗಿತ್ತು, ಅದಕ್ಕಿನ್ನೂ ಸ್ವಲ್ಪ ಕಾಲಾವಕಾಶವಿದ್ದುದ್ದರಿಂದ ಎಲ್ಲರೂ ಹೊರಗಡೆ ಕೈಸಾಲೆಯಲ್ಲಿ ನಿಂತು ಮಾತಾಡುತ್ತಿದ್ದರು. ಅಷ್ಟರಲ್ಲೇ ಒಳಗಿನಿಂದ ರಾಸಬಿಹಾರಿಯ ಉಚ್ಚಸ್ವರ ಕೇಳಬಂದಿತು. ಅವನು ಯಾರೊಡನೆಯೋ ಹೀಗೆ ಹೇಳುತ್ತಿದ್ದ:—"ಬಾಪ್ಪ ಬಾ, ನಿನಗೆ ಬೇಕಾದಷ್ಟು ಕೆಲಸ. ಆದ್ದರಿಂದ ನೀನು ಈ ಹೊತ್ತಿಗೆ ಇಲ್ಲಿಗೆ ಬರುವ ನಿರೀಕ್ಷಣೆಯೇ ಇರಲಿಲ್ಲ."

ವಿಜಯಳು ಯಾರೆಂದು ಮುಖವೆತ್ತಿ ನೋಡಿದಳು. ನರೇಂದ್ರ ಮುಂದೆ ನಿಂತಿದ್ದ. ಆದರೆ ಇದು ಕೇವಲ ಅಸಂಭವವಾದ್ದರಿಂದ ಅವಳಿಗೆ ನಂಬಿಕೆಯಾಗಲಿಲ್ಲ. ನಳಿನಿಯೂ ಮುಖವೆತ್ತಿ ನೋಡಿ 'ನರೇಂದ್ರಬಾಬು' ಎಂದಳು.

ಅವನಿಗೆ ರಾಸಬಿಹಾರಿ ಆಹ್ವಾನ ಕೊಟ್ಟಿದ್ದರಿಂದ ಅವನೀಗ ಇಲ್ಲಿಗೆ ಬಂದಿದ್ದಾನೆಂಬ ವಿಚಾರವೇ ವಿಜಯಳಿಗೆ ಹೊಳೆಯದೆ ಅವಳು ಸ್ವಪ್ನ ಮುಗ್ಧಳಂತಾದಳು. ಅವಳಿಗೆ ಆ ಕಡೆ ಕಣ್ಣೆತ್ತಿ ಸಹ ನೋಡಲಾಗಲಿಲ್ಲ. ಆದರೆ ವಿಲಾಸಬಿಹಾರಿ ಅವನನ್ನು ಆದರದಿಂದ ಸ್ವಾಗತಿಸಿದ್ದು ಅವಳಿಗೆ ಸ್ಪಷ್ಟ ವಾಗಿ ಕೇಳಿಸಿತು. ಕೂಡಲೆ ರಾಸಬಿಹಾರಿ ಅವರಿಬ್ಬರನ್ನೂ ಕರೆದುಕೊಂಡು ಹೋಗಿ ಕೋಣೆಯ ಮಧ್ಯದಲ್ಲಿ ನಿಂತ. ಜೊತೆಗೆ ಇನ್ನೂ ಅನೇಕ ವ್ಯಕ್ತಿಗಳು ಬಂದರು. ಆಗ ಆ ವೃದ್ಧ ಶಾಂತ ಗಂಭೀರ ಸ್ವರದಿಂದ ಆ ಇಬ್ಬರನ್ನು ಉದ್ದೇಶಿಸಿ ಹೇಳಿದ—"ನಿಮ್ಮ ತಂದೆಯ ಸಂಬಂಧದಿಂದ ನೀವಿಬ್ಬರೂ ಅಣ್ಣ ತಮ್ಮಂದಿರಾಗಬೇಕೆಂಬುದನ್ನು ಇವತ್ತು ವಿಶೇಷ ರೀತಿಯಲ್ಲಿ ನಿಮಗೆ ಹೇಳಬಯಸುತ್ತೇನೆ ವಿಲಾಸ. ವನಮಾಲೀ ತೀರಿಕೊಂಡ. ಜಗದೀಶನೂ ಹೊರಟುಹೋದ. ನನಗೂ ಕರೆ ಬರುತ್ತಿದೆ. ಈ ಇಹ ಪ್ರಪಂಚದಲ್ಲಿ ನಮಗೆ ದೇಹಗಳು ಮಾತ್ರ

ಬೇರೆಬೇರೆಯಾಗಿತ್ತೇ ಹೊರತು, ಇನ್ನೇನೂ ಬೇರೆಯಾಗಿರಲಿಲ್ಲವೆಂಬ ಈಗಿನ ಕಾಲದವರು........ ನೀವು ನಂಬುವುದಿಲ್ಲ. ನಂಬುವ ಸಂಭವವೂ ಇಲ್ಲ. ಅದನ್ನು ನಿಮಗೆ ತಿಳಿಯಹೇಳುವುದಕ್ಕೂ ನನಗಿಷ್ಟವಿಲ್ಲ. ಹೊಸ ವರ್ಷದ ಈ ಆರಂಭದ ದಿನ ನೀವು ನಿಮ್ಮ ಗೃಹಚ್ಛಿದ್ರದಿಂದ ನನ್ನ ಉಳಿದ ಕಾಲವನ್ನು ನೀವು ಅಂಧಕಾರಮಯವಾಗಿ ಮಾಡಬೇಡಿರೆಂಬುದೇ ನನ್ನ ಹೆಬ್ಬಯಕೆ" ಎನ್ನುತ್ತಿದ್ದಂತೆಯೇ ಅವರ ಕೊನೆಯ ಮಾತು ನಡುಗಿತು. ಅಳುವಿನಿಂದ ಅವನ ಕಂಠ ಬಿಗಿಯಿತು. ನರೇಂದ್ರನಿಂದ ಇನ್ನು ತಡೆಯಲಾಗಲಿಲ್ಲ. ಅವನು ಮುಂದೆ ಬಂದು ವಿಲಾಸನ ಒಂದು ಕೈಯನ್ನು ತನ್ನ ಬಲಗೈಯಿಂದ ಎಳೆದು ಆವೇಗದಿಂದ ಹೇಳಿದ—"ವಿಲಾಸಬಾಬು. ನನ್ನ ಎಲ್ಲ ಅಪರಾಧಗಳನ್ನು ಕ್ಷಮಿಸಿರಿ. ನಾನು ನಿಮ್ಮ ಕ್ಷಮೆ ಬೇಡುತ್ತೇನೆ."

ಇದಕ್ಕೆ ಪ್ರತ್ಯುತ್ತರವಾಗಿ ವಿಲಾಸ ತನ್ನ ಕೈ ಬಿಡಿಸಿಕೊಂಡು ನರೇಂದ್ರ ನನ್ನು ಆಲಂಗಿಸಿಕೊಂಡು ಹೇಳಿದ—"ನಾನೇ ಅಪರಾಧ ಮಾಡಿದ್ದೇನೆ. ನನ್ನನ್ನೇ ಕ್ಷಮಿಸು ನರೇಂದ್ರ."

ಆ ವೃದ್ಧ ರಾಸಬಿಹಾರಿ ನಡುಗುವ ದನಿಯಿಂದ ಹೇಳಿದನು—"ಹೇ ಸರ್ವಶಕ್ತಿಮಾನ್ ಪರಮೇಶ್ವರ! ಈ ನಿನ್ನ ದಯೆ, ನಿನ್ನ ಅನುಗ್ರಹಕ್ಕೆ ನಿನ್ನ ಪಾದಪದ್ಮಗಳಲ್ಲಿ ನನ್ನ ಅನಂತಕೋಟಿ ನಮಸ್ಕಾರಗಳು" ಎಂದು ಅವನು ಎರಡು ಕೈಗಳನ್ನೂ ಎತ್ತಿ ಮುಗಿದು ಹೊದೆದುಕೊಳ್ಳುವ ವಸ್ತ್ರದಂಚಿನಿಂದ ತನ್ನ ಕಣ್ಣುಗಳನ್ನು ಒರೆಸಿಕೊಳ್ಳುತ್ತಾ ಹೇಳಿದ—"ಈ ಶುಭ ಮುಹೂರ್ತ ದಲ್ಲಿ ನಿಮ್ಮಿಬ್ಬರ ಜೀವನ ಸಾರ್ಥಕವಾಗಲಿ. ನೀವೆಲ್ಲರೂ ಇದೇ ಆಶೀರ್ವಾದ ಮಾಡಿ" ಎಂದು ಅವನು ಆಶ್ಚರ್ಯಪಡುತ್ತಿದ್ದ ಸಭಿಕರನ್ನು ನೋಡಿದ.

ದಯಾಳರ ವಿನಹ ಇನ್ನಾರಿಗೂ ಏನೂ ಗೊತ್ತಿರಲಿಲ್ಲ. ಆದ್ದರಿಂದ ಈ ಮರ್ಮಸ್ಪರ್ಶಿ ಕರುಣಅನುಷ್ಠಾನವನ್ನುನೋಡಿ ಎಲ್ಲರೂ ದಿಗ್ಭ್ರಾಂತರಾದರು ಕೂಡಲೆ ರಾಸಬಿಹಾರಿಗೆ ಇದರ ಅರಿವಾಗಿ ಅವರೆಲ್ಲರನ್ನೂ ನೋಡಿ ಸ್ನಿಗ್ಧ ಸ್ವರದಲ್ಲಿ ಹೇಳಿದ—"ಗರಗಸ ಹೋಗುವಾಗಲೂ ಕತ್ತರಿಸುತ್ತದೆ. ಬರುವಾ ಗಲೂ ಕತ್ತರಿಸುತ್ತದೆಂದು ಹೆಂಗಸರು ಹೇಳುವ ನಾಣ್ಣುಡಿ. ನನ್ನ ಸ್ಥಿತಿಯೂ ಹಾಗೇ ಆಗಿದೆ. ಇವನೂ ನನ್ನ ಹುಡುಗ. ಅವನೂ ನನ್ನ ಹುಡುಗ," ಎಂದು ರಾಸಬಿಹಾರಿ ಅವರಿಬ್ಬರನ್ನೂ ಕಣ್ಣಿಂದ ಸೂಚಿಸಿ ಹೇಳಿದ—"ನನ್ನ ಬಲ ಗೈಗೆ ನೋವಾದಂತೆಯೇ ಎಡಗೈಗೂ ನೋವಾಗುತ್ತೆ. ಆದರೆ ನಿಮ್ಮಗಳ ಕರು

ಜ್ಞೆಯಿಂದ ಇಂದು ನನಗೆ ಅತ್ಯಂತ ಶುಭದ ಮತ್ತು ಆನಂದದ ದಿನ. ನಾನಿನ್ನೇನು ಹೇಳಲಿ ? ”

ವಸ್ತುಸ್ಥಿತಿ ಸರಿಯಾಗಿ ಅರ್ಥವಾಗದಿದ್ದರೂ, ಎಲ್ಲರೂ ಹರ್ಷಸೂಚಕ ಧ್ವನಿಯನ್ನು ಮಾಡಿದರು. ರಾಸಬಿಹಾರಿ ಸ್ವಲ್ಪ ತಲೆ ತಗ್ಗಿಸಿ, ವಸ್ತ್ರದ ಕೊನೆಯಿಂದ ಮತ್ತೊಮ್ಮೆ ಕಣ್ಣೊರೆಸಿಕೊಂಡು ಹತ್ತಿರವಿದ್ದ ಕುರ್ಚಿಯ ಮೇಲೆ ಗಂಭೀರವಾಗಿ ಕುಳಿತುಕೊಂಡ. ಅವನ ಗಂಭೀರ ಮುಖವನ್ನು ನೋಡಿ, ಅವನು ಭಾವರಾಶಿಯಲ್ಲಿ ಮುಳುಗಿದ್ದಾನೆಂದೂ ಅವನ ವಿಚಾರವಾಗಿ ಇನ್ನೇನೂ ಹೇಳಬೇಕಾದ್ದಿಲ್ಲವೆಂದೂ ಅಲ್ಲಿ ನೆರೆದಿದ್ದವರೆಲ್ಲರೂ ಸ್ಪಷ್ಟವಾಗಿ ತಿಳಿದುಕೊಂಡರು. ದಯಾಳರು ತಮ್ಮ ನೆರೆತ ಗಡ್ಡವನ್ನು ನೇವರಿಸುತ್ತಾ ಎದ್ದುನಿಂತು ಪ್ರಾರ್ಥನೆಗೆ ಪೀಠಿಕೆಯ ರೂಪವಾಗಿ ಹೇಳಿದರು—“ವಿರುದ್ಧ ಹೃದಯಗಳು ಸಮಾವೇಶವಾದೆಡೆಯೇ ಭಗವಂತ ಸನ್ನಿಹಿತನಾಗಿರುತ್ತಾನೆ. ಆದ್ದರಿಂದ ಇಂದು ಇಲ್ಲಿ ಭಗವಂತನ ಸನ್ನಿಧಾನಕ್ಕೆ ಎಳ್ಳಷ್ಟೂ ಸಂಶಯವಿಲ್ಲ.”

ಅದಾದಮೇಲೆ ಸಮಾರು ಕಾಲುಗಂಟೆಯವರೆಗೂ ಅವರು ಭಗವಂತನ ಉಪಾಸನೆ ಮಾಡಿದರು, ಅವರ ಹೃದಯದಲ್ಲಿ ನಿಷ್ಕಪಟ ಭಕ್ತಿ ಮತ್ತು ವಿಶ್ವಾಸವಿದ್ದುದರಿಂದ ಅವರ ಬಾಯಿಂದ ಬಂದಿದ್ದೆಲ್ಲ, ಎಲ್ಲರ ಹೃದಯಕ್ಕೂ ತಗುಲಿ ಎಲ್ಲರ ಕಣ್ಣುಗಳು ತೇವವಾದವು. ಅವರ ಪೈಕಿ ರಾಸಬಿಹಾರಿಯ ಕಣ್ಣಿನಿಂದ ನೀರು ಧಾರಾಕಾರವಾಗಿ ಹರಿಯಿತು. ಉಪಾಸನೆ ಮುಗಿದ ಮೇಲೂ ಅವನು ಭಾವಸಮಾಧಿಯಲ್ಲೇ ಇದ್ದ. ಬಹು ಹೊತ್ತಿನವರೆಗೂ ಅವನಿಗೆ ಪ್ರಜ್ಞೆ ಇತ್ತೇ ಇಲ್ಲವೇ ಎಂಬುದೇ ತಿಳಿಯಲಿಲ್ಲ.

ವಿಜಯಳ ಮನಸ್ಸಿನ ಸ್ಥಿತಿಯೇನೆಂಬುದು ಒಬ್ಬರಿಗೂ ತಿಳಿಯಲಿಲ್ಲ. ಅವಳು ತಲೆತಗ್ಗಿಸಿಕೊಂಡು ಬಹಳ ಹೊತ್ತು ಕಲ್ಲಿನಂತೆ ನಿಸ್ತಬ್ಧಳಾಗಿ ಕುಳಿತಿದ್ದಳು. ಆ ಮೇಲೆ ಅವಳು ಮುಖವೆತ್ತಿದಾಗ ಅವಳ ಮುಖ ಬಿಳಿಚಿಕೊಂಡಿತ್ತು.

ದಯಾಳರ ಭಕ್ತಿಯಿಂದ ಗದ್ಗದವಾದ ಧ್ವನಿ ಎಲ್ಲರ ಹೃದಯದಲ್ಲೂ ಪ್ರತಿಧ್ವನಿತವಾಗುತ್ತಿರುವಾಗ, ರಾಸಬಿಹಾರಿ ಕಣ್ಣು ತೆರೆದುನಿಂತು ಅಳುವ ದನಿಯಲ್ಲಿ ಹೇಳಿದ —“ನನ್ನಲ್ಲಿ ಸಾಧನೆಯ ಬಲ ಅಷ್ಟಾಗಿ ಇಲ್ಲ. ಆದರೂ ದಯಾಳರು ನುಡಿದ ಆ ಮಹಾ ಸತ್ಯ........ಸಮ್ಮಿಳಿತ ಹೃದಯಗಳ ಸಂಧಿ

ಸ್ಥಳದಲ್ಲೇ ಆ ಅದ್ವಿತೀಯ ನಿರ್ವಿಕಾರ ಪರಬ್ರಹ್ಮ ಆವಿರ್ಭವಿಸುತ್ತಾನೆಂದು ಹೇಳಿದ ಪರಮ ರಹಸ್ಯವನ್ನು ಇಂದು ನಾನು ಅಂತರಂಗದಲ್ಲಿ ಸಾಕ್ಷಾತ್ಕರಿಸಿ ಧನ್ಯನಾದೆ." ಎಂದು ಅವನು ಮುಂದೆ ಹೋಗಿ ದಯಾಳರನ್ನು ಆಲಿಂಗಿಸಿ ಕೊಂಡು ಹೇಳಿದ—"ದಯಾಳ! ತಮ್ಮ! ಇದು ಕೇವಲ ನಿನ್ನ ಪುಣ್ಯ ಪ್ರತಾಪದಿಂದ, ನಿಮ್ಮ ಆಶೀರ್ವಾದದಿಂದ...."

ದಯಾಳರ ಕಣ್ಣುಗಳು ಕ್ಷೀಣವಾದವು. ಅವರ ಬಾಯಿಂದ ಏನೂ ಹೊರಡದಿದ್ದುದರಿಂದ ಸುಮ್ಮನಿದ್ದರು.

ಮಗ್ಗಲು ಕೋಣೆಯಲ್ಲಿ ಉಪಹಾರದ ವ್ಯವಸ್ಥೆ ಉತ್ತಮವಾಗಿ ಆಗಿತ್ತು. ವಿಲಾಸ ಆ ಕಡೆ ಸಂಜ್ಞೆ ಮಾಡಿದ ಕೂಡಲೇ, ರಾಸಬಿಹಾರಿ ಅವನನ್ನು ತಡೆದು ಹೇಳಿದ—"ಇಂದು ಇನ್ನೂ ಒಂದು ವಿಷಯಕ್ಕಾಗಿ ನಿಮ್ಮ ಆಶೀರ್ವಾದವನ್ನು ಬೇಡುತ್ತೇನೆ. ಇಂದು ವನಮಾಲಿ ಬದುಕಿದ್ದರೆ, ತನ್ನ ಮಗಳ ಲಗ್ನದ ವಿಷಯವನ್ನು ಅವನೇ ಪ್ರಸ್ತಾಪಿಸುತ್ತಿದ್ದ. ನಾನು ಆ ವಿಷಯವನ್ನು ಹೇಳಬೇಕಾಗಿರಲಿಲ್ಲ. ಆದರೆ ಅದರ ಭಾರ ನನ್ನ ಮೇಲೆ ಬಿದ್ದಿದೆ. ನಾನೇ ಇಂದು ಕನ್ಯಾವರರಿಬ್ಬರಿಗೂ ಹಿರಿಯ. ನಾನೀತಿಂಗಳ ಕೊನೆಯ ವಾರದಲ್ಲಿ ಪೂರ್ಣಿಮಾದಿವಸ ಲಗ್ನ ನಿಶ್ಚಯ ಮಾಡಿದ್ದೇನೆ. ಇದು ನಿರ್ವಿಘ್ನವಾಗಿ ನೆರವೇರುವಂತೆ ನೀವು ಸರ್ವಾಂತಃಕರಣದಿಂದ ಆಶೀರ್ವಾದ ಮಾಡಬೇಕು" ಎಂದು ಅವನು ಒಂದು ಜೊತೆ ಬಂಗಾರದ ಬಳೆಯನ್ನು ಜೇಬಿನಿಂದ ತೆಗೆದು ದಯಾಳರ ಕೈಯಲ್ಲಿ ಕೊಟ್ಟ.

ದಯಾಳರು ಅವೆರಡನ್ನು ತೆಗೆದುಕೊಂಡು ವಿಜಯಳ ಕಡೆ ಹತ್ತಿರ ಸರಿದು ತಮ್ಮ ಕೈ ಮುಂದೆ ಚಾಚಿ ಹೇಳಿದರು.—"ನಾನೀ ಶುಭಮುಹೂರ್ತದ ಸೂಚನೆಯಾಗಿ ನಿನ್ನ ಕಲ್ಯಾಣವನ್ನು ಮನೋವಾಕ್ಕಾಯಗಳಿಂದಲೂ ಹರಸುತ್ತೇನೆ. ನಿನ್ನ ಕೈಯುಗಳನ್ನು ಕೊಡಮ್ಮ ನೋಡೋಣ."

ಆದರೆ ತಗ್ಗಿಸಿ ಕುಳಿತಿದ್ದ ವಿಜಯಳು ಸ್ವಲ್ಪವಾದರೂ ಚಲಿಸಲಿಲ್ಲ. ದಯಾಳರು ಮತ್ತೊಮ್ಮೆ ಹೇಳಿದರೂ ಅವಳು ಮೊದಲಿನಂತೆ ಕುಳಿತಿದ್ದಳು. ನಳಿನಿ ಹತ್ತಿರ ಇದ್ದಳು. ಅವಳು ತನ್ನ ಮಾವನ ಒದ್ದಾಟವನ್ನು ನೋಡಿ ತುಸು ನಕ್ಕು ವಿಜಯಳ ಎರಡು ಕೈಗಳನ್ನೂ ಹಿಡಿದುಕೊಂಡಳು. ಆಗ ದಯಾಳರು ಆ ಅತ್ಯಾಚಾರದ ಎರಡು ಬಳೆಗಳನ್ನು, ತಿಳಿಯದೆ ಮೂರ್ತಿಯಂತೆ ಕುಳಿತಿದ್ದ ಅವಳ ಕೈಗೆ ತೊಡಿಸಿ ಆಶೀರ್ವದಿಸಿದರು.

ಅಲ್ಲಿದ್ದವರಲ್ಲಿ ಯಾರಿಗೂ ಏನೂ ತಿಳಿಯಲಿಲ್ಲ. ಇದು ನಾಚಿಕೆಯ ಮನೋಭಾವವಿರಬಹುದೆಂದು ಎಲ್ಲರೂ ಸಂತೋಷಪಟ್ಟು, ಆಶೀರ್ವಾದ ಮಾಡುತ್ತಾ ತಮ್ಮ ಸಮ್ಮತಿಯಿತ್ತರು.

ಊಟ ತಿಂಡಿಗಳೆಲ್ಲ ಮುಗಿಯಿತು. ಆಗಲೇ ಹೊತ್ತಾದ್ದರಿಂದ ಒಬ್ಬೊಬ್ಬರಾಗಿ ಎಲ್ಲರೂ ಹೊರಟರು. ತನ್ನ ದುಗುಡವನ್ನು ಹೇಗೋ ಮರೆ ಮಾಚಿಕೊಂಡು, ಅತಿಥಿಗಳಿಗೆ ಉಪಚಾರ ಮಾಡಿ ಕಳುಹಿಸಿ ಕೊಟ್ಟಳು. ಅವಳ ಆಂತರಿಕ ದುಃಖ ದೇವರೊಬ್ಬನಿಗಲ್ಲದೆ ರಾಸಬಿಹಾರಿಗೂ ತಿಳಿದಿತ್ತು. ಆದರೆ ಅವನು ಇದನ್ನು ಸ್ವಲ್ಪವೂ ತೋರಗೊಡಲಿಲ್ಲ. ಊಟ-ತಿಂಡಿಯಲ್ಲ ಆದಮೇಲೆ ಅವನು ಬಾಯಲ್ಲಿ ಒಂದು ಲವಂಗವನ್ನು ಹಾಕಿಕೊಂಡು, ಬಿಸಲು ಹೆಚ್ಚಾದರೆ ಹೋಗಲಾರೆ" ಎಂದು ಮತ್ತೊಮ್ಮೆ ಆಶೀರ್ವಾದಮಾಡಿ, ನಿಧಾನವಾಗಿ ಹೊರಹೊರಟ.

ಎಲ್ಲರೂ ಹೊರಟುಹೋದರೂ, ವಿಜಯ ಮತ್ತು ನಳಿನಿ ಹೊರಗಿನ ಕೈಸಾಲೆಯಲ್ಲಿ ನಿಂತು ಮಾತಾಡುತ್ತಿದ್ದರು. ವಿಜಯಳು ಹೇಳಿದಳು—"ನಿಮ್ಮ ಜೊತೆ ಮಾತಾಡಿದ್ದರಿಂದ ನನಗೆಷ್ಟು ಸುಖವಾಯಿತೆಂಬುದನ್ನು ಹೇಳುವು ದಕ್ಕಾಗುವುದಿಲ್ಲ. ಇಲ್ಲಿಗೆ ಬಂದಂದಿನಿಂದ ನಾನೊಬ್ಬಂಟಿಗಳಾಗಿದ್ದೇನೆ. ಮಾತಾಡೋಣವೆಂದರೆ ಯಾರೂ ಇಲ್ಲ; ನಿಮಗೆ ಇಚ್ಛೆಯಾದಾಗ ಪುರು ಸೊತ್ತಾಗಿ ಇಲ್ಲಿಗೆ ಬಂದು ಹೋಗುತ್ತಿರಿ."

ನಳಿನಿ ತಲೆಯಲ್ಲಾಡಿಸುತ್ತಾ ತನ್ನ ಒಪ್ಪಿಗೆಯಿತ್ತಳು. ವಿಜಯಳು ಹೇಳಿದಳು—"ನಾನು ಸಂಜೆಗೆ ನಿಮ್ಮತ್ತೆಯನ್ನು ನೋಡಲು ಬರುತ್ತೇನೆ." ಆದರೆ ಬಿಸಲನ್ನು ನೋಡಿ ಸ್ವಲ್ಪ ವ್ಯಸ್ತಳಾಗಿ ಹೇಳಿದಳು—"ದಯಾಳ ಬಾಬುಗಳು ಕಚೇರಿಗೆ ಬಂದಿರುತ್ತಾರೆ. ಅವರನ್ನು ಕರೆಯಲೇ?" ಅವಳು ಆಳನ್ನು ನೋಡಿಬರಲು ಮುಂದೆ ಹೆಜ್ಜೆ ಇಡುತ್ತಲೇ ನಳಿನಿ ಅವಳನ್ನು ತಡೆದು ಹೇಳಿದಳು—"ಅವರೀಗ ಮನೆಗೆ ಹೋಗುವುದಿಲ್ಲ. ಒಟ್ಟಿಗೆ ಸಂಜೆಗೆ ಬರು ತ್ತಾರೆ."

ವಿಜಯಳು ಸಂಕೋಚದಿಂದ ಹೇಳಿದಳು—"ನೀವು ನನಗೀವಿಷಯ ವನ್ನು ಮೊದಲೇ ಏಕೆ ಹೇಳಲಿಲ್ಲ. ನಾನು ಆಳನ್ನು ಕರೆಯುತ್ತೇನೆ. ಅವನು...."

"ಊಹುಂ, ಆಳೇನು ಬೇಡ. ನರೇಂದ್ರಬಾಬುಗಳಿಗಾಗಿ ನಾನು

ಕಾಯುತ್ತಿದ್ದೇನೆ. ಅವರು ಮಾವನವರನ್ನು ನೋಡಲು ಹೋಗಿದ್ದಾರೆ. ಈಗ ಬರುತ್ತಾರೆ"

ವಿಜಯಳು ಆಶ್ಚರ್ಯದಿಂದ ಕೇಳಿದಳು—"ಅವರ ಪರಿಚಯ ನಿಮಗಿದೆಯೇ? ನನಗದು ಗೊತ್ತೇ ಇಲ್ಲವಲ್ಲ."

"ಪರಿಚಯವೇನೂ ಇರಲಿಲ್ಲ. ಮೊನ್ನೆ ನನ್ನ ಮಾವನವರ ಕಾಗದ ನೋಡಿಕೊಂಡು ನಾನು ಸ್ಟೇಷನ್‌ಗೆ ಬಂದೆ. ಅಲ್ಲಿ ಅವರು ನಿಂತಿದ್ದರು. ಅವರ ಜೊತೆಗೆ ಇಲ್ಲಿಗೇಬಂದೆ."

"ಓಹೋ ಹಾಗೋ!"

"ಅವರೆಂತಹ ವಿಚಿತ್ರ ಮನುಷ್ಯರು ನೋಡಿದಿರಾ? ಎರಡು ದಿನದಲ್ಲೇ ಆತ್ಮೀಯರಾದಂತಾದರು. ಇವತ್ತು ನಮ್ಮ ಮನೆಯಲ್ಲೇ ಸ್ನಾನ ಊಟ ತೀರಿಸ ಕೊಂಡು ಕಲಿಕತ್ತೆಗೆ ಹೋಗುತ್ತಾರೆ. ನಮ್ಮತ್ತೆಗೆ ಅವರನ್ನು ಕಂಡರೆ ಮಗ ನಷ್ಟು ವಿಶ್ವಾಸ."

"ಹೌದು ವಿಚಿತ್ರ ಮನಷ್ಯರು."

"ಅವರಿಗೆ ಯಾರನ್ನು ಕಂಡರೂ ಬೇಸರವಿಲ್ಲವೆಂಬುವೇ ನನಗೆ ಅನುಭವ. ಇಂದು ವಿಲಾಸಬಾಬುಗಳ ಜೊತೆಗೆ ಅವರ ಭೇಟಿಯಾದದ್ದು ಬಹಳ ಚೆನ್ನಾಯಿತು. ಅವರ ತಂದೆಯಾದರೂ ಎಂತಹ ಮನುಷ್ಯರು. ನಮ್ಮ ಸಮಾಜದಲ್ಲಿ ಎಲ್ಲರೂ ಹಾಗಾಗಲು ಯತ್ನಿಸಬೇಕು. ರಾಸಬಿಹಾರಿಯ ಆದರ್ಶ ನಮ್ಮಲ್ಲಿ ಎಲ್ಲರ ಮನೆಗಳಲ್ಲೂ ಏರ್ಪಟ್ಟಲ್ಲಿ ನಮ್ಮ ಸಮಾಜ ನಮ್ಮ ಧರ್ಮ ಸಾರ್ಥಕವಾಗುತ್ತೆ. ನಿಮ್ಮ ಅಭಿಪ್ರಾಯವೇನು? ನಾನು ಹೇಳುವುದು ಸರಿಯಲ್ಲವೇ?"

ನರೇಂದ್ರ ಕೈಯಲ್ಲಿ ಹ್ಯಾಟನ್ನು ಹಿಡಿದುಕೊಂಡು ಆಕಡೆಯೇ ಬರುತ್ತಿದುದು ಕಂಡಿತು. ವಿಜಯಳು ಅವಳ ಪ್ರಶ್ನೆಗೆ ಉತ್ತರ ಕೊಡವೆ ಆಕಡೆ ಅವಳ ಗಮನವನ್ನು ಸೆಳೆದು"ನೋಡಿ, ಅವರು ಬರುತ್ತಿದ್ದಾರೆ"ಎಂದಳು.

ನರೇಂದ್ರ ಹತ್ತಿರಬಂದು ವಿಜಯಳಿಗೆ ಹೇಳಿದ—"ಇದು ನೋಡಿ ಇಷ್ಟರಲ್ಲೇ ಇಬ್ಬರಿಗೂ ಅತ್ಯಂತ ಸ್ನೇಹ ಷುರುವಾಯಿತು. ಇವತ್ತು ಹೊಸ ವರ್ಷದ ಮೊದಲ ದಿನ ಬಹಳ ವೈಭವದಿಂದ ಆರಂಭವಾಯಿತು. ಬೆಳಿಗ್ಗೆಯೆಲ್ಲ ಬಹಳ ಆನಂದವಾಗಿತ್ತು. ಇದರಿಂದ ಈ ವರ್ಷವೆಲ್ಲ ಹೀಗೇ ಕಳೆಯ

ಬಹುದೆಂಬ ಆಶೆಯಿದೆ. ಆದರೆ ಇದೇನು ಇಷ್ಟು ಸಪ್ಪಗಿದ್ದೀರಲ್ಲ ಕಾರಣ ವೇನು ?

ವಿಜಯಳು ಬೇಸರದ ದನಿಯಲ್ಲಿ ಹೇಳಿದಳು—"ನೀವು ಒಂದು ದಿನಕ್ಕೆ ಎಷ್ಟು ಬಾರಿ ಈ ಪ್ರಶ್ನೆ ಕೇಳುತ್ತಿರುವಿರಲ್ಲ."

ನರೇಂದ್ರ ನಕ್ಕು ಹೇಳಿದ—"ಇನ್ನೊಂದು ಸಲ ಕೇಳಿದೆನೇ? ಒಂದು ವೇಳೆ ಕೇಳಿದರೂ ತಪ್ಪೇನು? ನೀವು ಇದ್ದಕ್ಕಿದ್ದಂತೆ ಹೀಗೇಕೆ ಸಿಟ್ಟಾಗುತ್ತೀರಿ? ಇದೊಂದು ನಿಮಲ್ಲಿ ದೊಡ್ಡ ತಪ್ಪು" ಎಂದು ಅವನು ಮತ್ತೊಮ್ಮೆ ನಕ್ಕ.

ವಿಜಯಳು ನಗುವನ್ನು ತಡೆದು ಗಂಭೀರವಾಗಿದ್ದಂತೆ ತೋರಿಸಿ ಕೊಂಡು ಹೇಳಿದಳು—"ಎಲ್ಲರೂ ನಿಮ್ಮಂತೆ ನಿರ್ದೋಷಿಗಳಾಗಿರುವುದ ಕ್ಕಾಗುತ್ತದೆಯೇ ? ಅಲ್ಲದೆ ಕಾಲೀಪದನಂತವರು ನಿಮ್ಮನ್ನೂ ಸಿಡುಕರೆಂದು ದೂರುತ್ತಾರೆ.?

ಕಾಲೀಪದನ ಹೆಸರನ್ನು ಕೇಳಿ ನರೇಂದ್ರ ಗಟ್ಟಿಯಾಗಿ ನಕ್ಕು ಆಮೇಲೆ ಅವನು ಹೇಳಿದ—"ನೀವು ಮಹಾ ಹಟಗಳು. ಯಾವ ರೀತಿಯಲ್ಲೂ ನೀವು ಇತರರ ಒಂದು ತಪ್ಪನ್ನೂ ಕ್ಷಮಿಸುವುದಿಲ್ಲ. ಅಂದಹಾಗೆ ಕಾಲೀಪದನಂತಹ ವರೆಂದರೆ ಇನ್ನೂ ಯಾರ್ಯಾರು? ಕಾಲೀಪದ ಮತ್ತು ನೀವು. ಇನ್ಯಾರು?"

ವಿಜಯಳು ಕೊರಳು ಕೊಂಕಿಸಿ ಹೇಳಿದಳು—"ನಿಮ್ಮನ್ನು ಸ್ಟೇಷನ್ ನಲ್ಲಿ ನೋಡಿದವರೆಲ್ಲರೂ."

"ಆಮೇಲೆ ?"

"ಆ ಸುದ್ದಿಯನ್ನು ಕೇಳಿದವರೆಲ್ಲರೂ."

"ಹಾಗಾದರೆ ನನ್ನ ವಿಚಾರದಲ್ಲಿ ಪ್ರಪಂಚದ ಅಭಿಪ್ರಾಯವೇ ಹಾಗೆಂದು ಹೇಳಿ."

"ಹುಂ, ನಮ್ಮೆಲ್ಲರ ಅಭಿಪ್ರಾಯ ಅದೇ."

"ಹಾಗಾದರೆ ನಿಮಗೆ ಧನ್ಯವಾದಗಳು. ನಿಮ್ಮ ವಿಚಾರದಲ್ಲಿ ಜನರ ಅಭಿಪ್ರಾಯವೇನೆಂಬುದನ್ನು ಹೇಳಿ" ಎಂದು ಅವನು ನಗತೊಡಗಿದ.

ಅವನ ಇಂಗಿತವನ್ನು ತಿಳಿದು ವಿಜಯಳ ಮುಖ ನಸುಗೆಂಪಾಯಿತು. ಅವಳು ನಸುನಕ್ಕು ಹೇಳಿದಳು—"ನಮ್ಮನ್ನು ನಾವೇ ಹೊಗಳಿಕೊಳ್ಳಬಾರದು. ಅದು ಮಹಾಪಾಪ. ಆದ್ದರಿಂದ ಅದನ್ನು ನೀವೆ ಹೇಳಿ. ಆದರೆ ಈಗಲೇ ಬೇಡ. ಸ್ನಾನ-ಊಟ ಆದಮೇಲೆ." ಸ್ವಲ್ಪ ಹೊತ್ತು ಸುಮ್ಮನಿದ್ದು ಹೇಳಿದಳು

—"ಈಗ ಬಹಳ ಹೊತ್ತಾಗಿಗೆ....ಇಲ್ಲೀ ಈಗ ಎದ್ದು ಬಿಟ್ಟರೆ ವಾಸಿಯಲ್ಲವೆ?" ಎಂದು ನಳಿನಿಯ ಮುಖ ನೋಡಿದಳು.

"ಆದರೆ ಅತ್ತೆ ಹಾದಿ ನೋಡುತ್ತಿರತ್ತಾಳಲ್ಲ? ನಳಿನಿ ಹೇಳಿದಳು.

"ಅಲ್ಲಿಗೆ ಯಾರಿಂದಾದರೂ ಹೇಳಿಕಳುಹಿಸುತ್ತೇನೆ."

"ನಾನು ಇರುವುದಕ್ಕಾಗುವುದಿಲ್ಲ. ಅತ್ತೆಗೆ ಮೈಯಲ್ಲಿ ಸರಿಯಾಗಿಲ್ಲ. ಮಧ್ಯಾಹ್ನವೆಲ್ಲ ಅವಳ ಹತ್ತಿರ ಯಾರೂ ಇಲ್ಲದಿರುವುದು ಸರಿಯಲ್ಲ."

ಅವಳು ಹೇಳಿದ್ದು ನಿಜವಾದ್ದರಿಂದ ವಿಜಯಳು ಹೆಚ್ಚು ಬಲವಂತ ಮಾಡಲಿಲ್ಲ. ನಳಿನಿ ವಿಜಯಳ ಮುಖ ನೋಡಿ ಏನೋ ಯೋಚಿಸಿಕೊಂಡು ಹೇಳಿದಳು—"ನರೇಂದ್ರಬಾಬು, ನೀವು ಬೇಕಾದರೆ ಇಲ್ಲೇ ಸ್ನಾನ-ಊಟ ಮಾಡಿ. ನಾನು ಹೋಗಿ ಅತ್ತೆಗೆ ಹೇಳುತ್ತೇನೆ. ನೀವು ಹೋಗುವಾಗ ಒಂದುಸಲ ಭೇಟಿಯಾಗಿ ಹೋದರಾಯಿತು."

"ಇಂತಹ ಬಿಸಲಿನಲ್ಲಿ ನಿಮ್ಮೊಬ್ಬರನ್ನೇ ಕಳುಹಿಸುವಷ್ಟು ನನ್ನನ್ನು ಅಕೃತಜ್ಞನೆಂದು ತಿಳಿದಿರೇನು?"ಎಂದು ಅವನು ನಗುತ್ತಾ ವಿಜಯಳ ಕಡೆ ನೋಡಿ ಹೇಳಿದ—"ಒಂದು ದಿನ ನೀವು ಒಂದು ಒಳ್ಳೆಯ ಊಟ ಹಾಕಲೇ ಬೇಕಾಗಿದೆ. ಅವತ್ತು ಬೆಳಿಗ್ಗೆಯೇ ಬಂದು ಆ ಊಟವನ್ನು ಮುಗಿಸುತ್ತೇನೆ. ಬರುತ್ತೇನೆ ನಮಸ್ಕಾರ" ಎಂದು ನಳಿನಿಯ ಕಡೆತಿರಿಗಿ'ಇನ್ನು ಹೊತ್ತು ಮಾಡಬೇಡಿ ಹೊರಡಿ' ಎಂದು ಹೇಳಿ ಅವನು ಹ್ಯಾಟನ್ನು ತಲೆಯಮೇಲಿಟ್ಟು ಕೊಂಡ.

ನಳಿನಿ ಇಳಿದುಬಂದು ಅವನ ಹತ್ತಿರ ನಿಂತಳು. ಕಲ್ಲಿನಂತೆ ನಿಂತು ಇವರಿಬ್ಬರನ್ನೂ ಕ್ರೂರವಾಗಿ ದುರುಗುಟ್ಟಿಕೊಂಡು ನೋಡುತ್ತಿದ್ದ ವಿಜಯಳ ಮೇಲೆ ಇವರಿಬ್ಬರ ದೃಷ್ಟಿ ಬೀಳಲಿಲ್ಲ. ಬಿದ್ದಿದ್ದರೆ, ನರೇಂದ್ರ ಒಂದೆರಡು ಹೆಜ್ಜೆ ಮುಂದೆ ಬಂದು—"ಒಂದು ಕೆಲಸ ಮಾಡುತ್ತೀರಾ? ಮೊದಲಿಂದಲೂ ಇಷ್ಟು ಕಷ್ಟಕ್ಕೆ ಮೂಲವಾದ, ನನಗೆ ಇಷ್ಟು ಕೆಟ್ಟ ಹೆಸರನ್ನು ತಂದು ಕೊಟ್ಟಿದ್ದನ್ನು ನನಗೇಕೆ ಇಂತಹ ಸಂತೋಷದ ಸಮಾರಂಭದಲ್ಲಿ ಉಡುಗೊರೆ ಯಾಗಿ ಕೊಡಬಾರದು? ಆ ಇನ್ನೂರು ರುಪಾಯನ್ನು ನಾಳೆಯೋ ನಾಡಿದ್ದೋ ಕಳುಹಿಸಿಕೊಡುತ್ತೇನೆ" ಎನ್ನುತ್ತಿರಲಿಲ್ಲ. ಅವನು ಮತ್ತೊಮ್ಮೆ ನಗುವ ಯತ್ನಮಾಡಿದ. ಆದರೆ ಆ ಉತ್ಸಾಹಲಿಲ್ಲಿ ನಗಲಿಲ್ಲ. ಆದರೆ ವಿಜಯಳು ಇದಕ್ಕೆ ಬಹಳ ಕಟುವಾದ ಉತ್ತರ ಕೊಟ್ಟಳು—"ದುಡ್ಡು ತೊಗೊಂಡು

ಕೊಡುವುದಕ್ಕೆ ನಾನು ಬಿಕಾರಿಯೆನ್ನುತ್ತೇನೆ, ಉಡುಗೊರೆಯೆನ್ನುವುದಿಲ್ಲ. ಇಂತಹ ಉಡುಗೊರೆಯಿಂದ ನಿಮಗೆ ಸಂತೋಷವಾಗಬಹುದು. ಆದರೆ ನಾವು ಕಲಿತಿರುವ ಪಾಠವೇ ಬೇರೆ. ಆದ್ದರಿಂದ ಈ ಆನಂದದ ದಿನ ಅದನ್ನು ಮಾರುವ ಇಚ್ಛೆ ನನಗಿಲ್ಲ,"

ಈ ಕಟುವಾದ ಉತ್ತರದಿಂದ ನರೇಂದ್ರ ದಂಗಾದ. ಮೊದಲೇ ಅವನಿಗೆ ವಿಜಯಳ ಸ್ವಭಾವ ಅರ್ಥವಾಗಿರಲಿಲ್ಲ. ಅದರ ಮೇಲೆ ಇಂದು ಅಕಾರಣವಾಗಿ ಅವಳು ರೇಗಿದ್ದರ ಕಾರಣವಂತೂ ಸ್ವಲ್ಪವೂ ಅರ್ಥವಾಗ ಲಿಲ್ಲ. ಅವನು ಅವಳ ಕಠೋರ ಮುಖ ಮುದ್ರೆಯನ್ನು ಒಂದು ಕ್ಷಣ ನೋಡು ತ್ತಿದ್ದು ಬಹಳ ವ್ಯಥೆಯಿಂದ ಹೇಳಿದ—"ನನ್ನ ದೀನ ದೆಶೆಯನ್ನು ನಾನು ಯಾವಾಗಲೂ ಮರೆಯುವುದಿಲ್ಲ. ನೀವು ನನಗೆ ಜ್ಞಾಪಕಮಾಡಿಕೊಡುತ್ತಿರುವ ವಿಷಯವನ್ನು ನಾನೆಂದಿಗೂ ಮುಚ್ಚಿಡುವ ಹವ್ಯಾಸಕ್ಕೆ ಹೋಗಿಲ್ಲ."

ಅವನು ನಳಿನಿಯನ್ನು ತೋರಿಸಿ ಹೇಳಿದ—"ನಾನು ಇವರಿಗೂ ನನ್ನ ಕಥೆಯನ್ನೆಲ್ಲ ಹೇಳಿದ್ದೇನೆ. ತಂದೆಯವರು ಬಹಳ ಕಷ್ಟದಿಂದ ಬಡತನ ದಿಂದ ಬೆಂದು ತೀರಿಕೊಂಡರು. ಅವರು ಹೋದಮೇಲೆ ಇಲ್ಲಿ ಉಳಿದಿದ್ದ ಮನೆ ಮಠವೆಲ್ಲ ಸಾಲಕ್ಕೆ ಹೊರಟು ಹೋಯಿತು. ಅದೂ ಎಲ್ಲರಿಗೆ ಗೊತ್ತೇ ಇದೆ. ನಾನು ನಿಮಗೆ ಉಡುಗೊರೆ ಕೊಡುತ್ತೇನೆಂದು ಹೇಳಿಲ್ಲ. ನಾನು ನನ್ನ ವಿಷಯವನ್ನೆಲ್ಲ ನಿಮ್ಮ ಮುಂದೆ ಹೇಳಿಕೊಳ್ಳಲಿಲ್ಲವೇ."

"ಹೌದು ಹೇಳಿದ್ದಿರಿ. ನಳಿನಿ ನಾಚಿಕೆಯಿಂದ ಒಪ್ಪಿಕೊಂಡಳು. ವಿಜಯಳ ಮುಖ ವೇದನೆ, ಲಜ್ಜೆ, ಕ್ಷೋಭದಿಂದ ಸಪ್ಪಗಾಯಿತು.

ಅವಳು ಸುಮ್ಮನೆ ಅವರಿಬ್ಬರ ಮುಖವನ್ನು ನೋಡುತ್ತ ನಿಂತಳು. ಅವಳ ದುಗುಡ ಕಲಕಿದಂತಾದದ್ದನ್ನು ನೋಡಿ ನರೇಂದ್ರ ಸಪ್ಪೆಮೋರೆಯಿಂದ ಹೇಳಿದ—"ನನ್ನ ಮಾತಿನಿಂದ ನೀವು ಹೆಚ್ಚು ಅಸ್ಥಿರರಾಗುತ್ತೀರಿ. ನಾನು ನನ್ನ ಯೋಗ್ಯತೆಯನ್ನು ಮೀರಿ ನಿಮ್ಮ ಸಮಕಕ್ಷಿಯಾಗಬಯಸುವೆನೆಂದು ನೀವು ತಿಳಿದಿದ್ದೀರಿ. ನನ್ನ ಉದಾಸೀನ ಸ್ವಭಾವದಿಂದ ಪ್ರತಿಮಾತಿನಲ್ಲೂ ನಾನು ಎಚ್ಚರಿಕೆಯಿಂದ ಇರದಿರಬಹುದು. ಹುಂ, ಹೋಗಲಿ ನಿಮಗೆ ಅವಮಾನ ಮಾಡಿದ್ದರೆ ನನ್ನನ್ನು ಕ್ಷಮಿಸಿ" ಎಂದು ಅವನು ಹೊರಟುಬಿಟ್ಟ.

೨೨

ಹಾದಿಯಲ್ಲಿ ಇಬ್ಬರಿಗೂ ವಿಶೇಷ ಮಾತು ಕತೆಯೇನೂ ನಡೆಯಲಿಲ್ಲ. ನಳಿನಿ ಕೇಳಿದಳು—"ನೀವು ಉಡುಗೊರೆ ಕೊಡುವ ವಿಚಾರ ಹೇಳಿದ್ದಿರಾ?"

ನರೇಂದ್ರ ಒಣಗಿದ ದನಿಯಲ್ಲಿ ಹೇಳಿದ—"ಇನ್ನೊಂದಾದರೂ ಹೇಳುತ್ತೇನೆ....ಇವತ್ತು ಹೇಳುವುದಿಲ್ಲ."

ಆ ಬಿದರಿನ ಸೇತುವೆಯ ಹತ್ತಿರ ಹೋದಕೂಡಲೆ ನರೇಂದ್ರ ಇದ್ದಕ್ಕಿದ್ದಂತೆ ನಿಂತು ಹೇಳಿದ—"ಇಂದು ದಯವಿಟ್ಟು ನನ್ನನ್ನು ಕ್ಷಮಿಸಿ........ ನಾನು ವಾಪಸು ಹೋಗುತ್ತೇನೆ." ನಳಿನಿ ಬೆರಗಾಗಿ ನಿಂತಿದ್ದನ್ನು ನೋಡಿ ಅನನು ಹೇಳಿದ—"ಇದು ಬಹಳ ಅನ್ಯಾಯವೆಂಬುದು ನನಗೆ ಗೊತ್ತಿದೆ. ಆದರೂ ನೀವು ನನ್ನನ್ನು ಕ್ಷಮಿಸಬೇಕು. ನಾನಿನ್ನು ಬರುವುದಕ್ಕಾಗುವುದಿಲ್ಲ. ನಿಮ್ಮ ಅತ್ತೆಯವರಿಗೆ ಹೇಳಿಬಿಡಿ. ಇನ್ನೊಂದಾದರೂ........"

ಅವನು ಇದ್ದಕ್ಕಿದ್ದಂತೆ ಹೀಗೆ ಮನಸ್ಸು ಬದಲಾಯಿಸಿದ್ದರಿಂದ ನಳಿನಿಗೆ ಬಹಳ ಆಶ್ಚರ್ಯವಾಯಿತು. ಅವನ ದನಿ ಮತ್ತು ಅವನ ಮುಖ ನೋಡಿ ಅವಳು ಇನ್ನೂ ದಂಗಾದಳು. ಆದ್ದರಿಂದಲೇ ಅವಳು ಹೆಚ್ಚು ಆಗ್ರಹ ಮಾಡದೇ ಹೇಳಿದಳು—"ನಿಮ್ಮ ಭೋಜನವಿನ್ನೂ ಆಗಿಲ್ಲವಲ್ಲ.... ಮತ್ತೆ ಯಾವಾಗ ಬರುತ್ತೀರಿ?"

"ನಾಡಿದ್ದು ಬರುವ ಪ್ರಯತ್ನ ಮಾಡುತ್ತೇನೆ" ಎಂದು ಅವನು ಬಂದ ಹಾದಿಯಲ್ಲೇ ವಾಪಸು ತಿರುಗಿ ಸ್ಟೇಷನ್ನಿಗೆ ಜಾಗ್ರತೆಯಾಗಿ ಹೊರಟ.

ಮೈದಾನವನ್ನು ದಾಟುವಷ್ಟರಲ್ಲೇ ಒಬ್ಬ ಹುಡುಗ ಕೈಯನ್ನು ಎತ್ತಿ ಅವನ ಹತ್ತಿರವೇ ಓಡಿ ಬರುತ್ತಾ ಇದ್ದ. ಅವನು ತನ್ನ ಹತ್ತಿರವೇ ಓಡಿ ಬರುತ್ತಿದ್ದಾನೆ, ಮತ್ತು ತನ್ನನ್ನು ನಿಂತುಕೊಳ್ಳುವಂತೆ ಹೇಳುತ್ತಿದ್ದಾನೆಂದು ತಿಳಿದು ನರೇಂದ್ರ ನಿಂತುಕೊಂಡ. ಪರೇಶ ಓಡಿಬಂದು ಮೇಲುಸಿರು ಬಿಡುತ್ತಾ "ಅಮ್ಮಾವ್ರು ನಿಮ್ಮನ್ನು ಕರೆದುಕೊಂಡು ಬಾ ಎಂದು ಹೇಳಿದರು" ಎಂದ.

"ನನ್ನನ್ನೇ?"

"ಹೂಂ. ನಡೆಯಿರಿ."

ನರೇಂದ್ರ ಸ್ವಲ್ಪ ಹೊತ್ತು ನಿಶ್ಚಲನಾಗಿ ನಿಂತಿದ್ದು ಸಂಶಯದಿಂದ ಹೇಳಿದ—"ನಿನಗೆ ಗೊತ್ತಿಲ್ಲಕಣೋ. ನನಗೆ ಹೇಳಿ ಕಳುಹಿಸಿರಲಿಕ್ಕಿಲ್ಲ."

"ಇಲ್ಲ. ನಿಮ್ಮನ್ನೇ ಕರತರುವಂತೆ ಹೇಳಿದ್ದಾರೆ. ನಿಮ್ಮ ತಲೆಯ ಮೇಲೆ ಹ್ಯಾಟಿದೆಯಲ್ಲ."

ನರೇಂದ್ರ ಸ್ವಲ್ಪ ಹೊತ್ತು ಸುಮ್ಮನೆ ಇದ್ದು ಕೇಳಿದ—"ನಿಮ್ಮ ಅಮ್ಮಾವ್ರು ಏನು ಹೇಳಿದರು?"

"ಅಮ್ಮಾವ್ರು ಆ ಎತ್ತರವಾದ ಮಹಡಿಯಿಂದ ಓಡುತ್ತಾ ಇಳಿದು ಬಂದು 'ಪರೇಶ ಓಡಿ ಹೋಗಿ ಆ ಸಾಹೇಬರನ್ನು ಕರಕೊಂಡು ಬಾ. ತಲೆಯಮೇಲೆ ಹ್ಯಾಟಿಟ್ಟುಕೊಂಡಿದ್ದಾರಲ್ಲ ಅವರನ್ನು........ಹೋಗು ಓಡಿ ಹೋಗು........ನಿನಗೆ ಒಂದು ಒಳ್ಳೆಯ ಗಿರುಗಟ್ಲೆ ಕೊಡುತ್ತೇನೆಂದು ಹೇಳಿದರು."

ಅವನು ಅಷ್ಟು ಮೇಲುಸಿರಿನಿಂದ ಓಡಿ ಬರುತ್ತಿದ್ದುದರ ಕಾರಣ ಈಗ ತಿಳಿಯಿತು. ಆ ಗಿರುಗಟ್ಲೆಯ ಆಸೆಗಾಗಿ ಅವನು ಇಂತಹ ಬಿಸಲಿನಲ್ಲಿ ಇಷ್ಟು ದೂರ ಓಡಿಬಂದಿದ್ದ. ಅವನು ತನ್ನನ್ನು ಸುಲಭವಾಗಿ ಬಿಡುವುದಿಲ್ಲವೆಂದುಕೊಂಡ. ಅವನಿಗೆ ಗಿರುಗಟ್ಲೆಯ ದುಡ್ಡನ್ನು ಕೊಟ್ಟು ಕಳುಹಿಸೋಣವೆಂದು ಒಮ್ಮೆ ನರೇಂದ್ರ ಅಂದುಕೊಂಡ. ಆದರೆ ಇಂದೇ ಹಾಗೆ ಹೇಳಿ ಕಳುಹಿಸಲು ಕಾರಣವೇನಿರಬಹುದೆಂಬ ಕುತೂಹಲವನ್ನು ಅವನು ತಡೆಯಲಾರದೆ ಹೋದ. ಆದರೂ ಈಗ ಅಲ್ಲಿಗೆ ಹೋಗುವುದು ಉಚಿತವೋ ಅನುಚಿತವೋ ಎಂಬುದನ್ನು ಯೋಚಿಸಲು ಅವನಿಗೆ ಒಂದು ಕ್ಷಣ ಹಿಡಿಯಿತು. ಅದನ್ನು ಕೊನೆಯವರೆಗೂ ನಿಶ್ಚಯಿಸಲಾಗದಿದ್ದರೂ ಅವನ ಹೆಜ್ಜೆಗಳು ಮಾತ್ರ ಆ ಕಡೆ ಹೊರಟವು. ಏತಕ್ಕೆ ಕರದಿರಬಹುದೆಂಬುದನ್ನೇ ಅವನು ದಾರಿಯಲ್ಲಿ ಯೋಚಿಸುತ್ತ ಹೊರಟ. ಆದರೆ ಅವನಿಗೆ ಹೇಳಿ ಕಳುಹಿಸಿದ್ದೇ ಎಲ್ಲದಕ್ಕಿಂತ ದೊಡ್ಡ ಕಾರಣವೆಂಬುದು ಅವನ ಮನಸ್ಸಿಗೆ ಬರಲಿಲ್ಲ. ಹೊರಗಿನ ಕೋಣೆಯಲ್ಲಿ ಕಾಲಿಟ್ಟಕೂಡಲೇ ವಿಜಯಳು ಬಂದು ಎದುರಿಗೆ ನಿಂತಳು. ಅವಳು ನೀರು ತುಂಬಿದ ಕಣ್ಣಿನಿಂದ ಅವನ ಕಡೆ ನೋಡುತ್ತ ಹೇಳಿದಳು—"ನೀವು ಸ್ನಾನ ಊಟವಿಲ್ಲದೆ ಹೊರಟುಬಿಟ್ಟಿರಿ. ಬಹಳ ದೊಡ್ಡ ಮನುಷ್ಯರು ನಾನು ಸುಳ್ಳು ಸುಳ್ಳಾಗಿ ಸಿಟ್ಟಾಗುತ್ತೇನೆ. ಬಹಳ ಕೆಟ್ಟವಳು. ನೀವಿನ್ನೇನು?"

ನರೇಂದ್ರ ಬೆರಗಾಗಿ ಹೇಳಿದ—"ಇದೇನು ನೀವು ಕೆಟ್ಟವರೆಂದು ಹೇಳಿದವರು ಯಾರು? ಇದೆಲ್ಲ ನಿಮಗೆ ಯಾರು ಹೇಳಿದರು?"

ವಿಜಯಳ ತುಟಿಗಳು ನಡುಗುತ್ತಿದ್ದವು. ಅವಳು ಹೇಳಿದಳು—"ನೀವು ನಳಿನಿ ಎದುರಿಗೆ ನನ್ನನ್ನೇಕೆ ಅವಮಾನ ಮಾಡಿದಿರಿ? ನನ್ನನ್ನು ಅವಮಾನ ಮಾಡಿ, ನನಗೆ ಶಿಕ್ಷೆ ಕೊಡುವುದಕ್ಕಾಗಿಯೇ ಊಟ-ತಿಂಡಿ ಇಲ್ಲದೆ ಹೋಗುತ್ತಿದ್ದೀರೇನು? ನಾನೇನು ನಿಮಗೆ ಮಾಡಿದ್ದು?" ಎನ್ನುತ್ತಿದ್ದಂತೆ ಅವಳ ಕಣ್ಣುಗಳಿಂದ ನೀರು ಮಿಡಿಯಿತು. ಅದನ್ನು ಮುಚ್ಚಿಕೊಳ್ಳುವುದಕ್ಕಾಗಿಯೇ ಅವಳು ಬೇರೆ ಕಡೆ ಮುಖ ತಿರುಗಿಸಿಕೊಂಡಳು. ನರೇಂದ್ರನಿಗೆ ದಿಕು ತೋಚದಂತಾಗಿ ಅವನು ಬೆಪ್ಪಾಗಿ ಅವಳನ್ನು ನೋಡುತ್ತ ನಿಂತುಬಿಟ್ಟ. ಅವಳ ಈ ಆಪಾದನೆಗೆ ಏನುತ್ತರ ಕೊಡಬೇಕೆಂಬುದಾಗಲೀ ಅದಕ್ಕೆ ಕಾರಣ ಏನೆಂಬುದಾಗಲಿ ಅವನಿಗೆ ತಿಳಿಯಲಿಲ್ಲ.

ಸ್ನಾನಕ್ಕೆ ನೀರು ಸಿದ್ಧವಾಗಿದೆಯೆಂದು ಆಳು ಬಂದು ಹೇಳಿ ಹೋದ. ವಿಜಯಳು ನರೇಂದ್ರನ ಕಡೆ ತಿರುಗಿ ಶಾಂತರೀತಿಯಿಂದ "ಇನ್ನು ಹೊತ್ತು ಮಾಡಬೇಡಿ, ಹೋಗಿ." ಎಂದು ಮಾತ್ರ ಹೇಳಿದಳು.

ಸ್ನಾನ ಮುಗಿಸಿಕೊಂಡು ನರೇಂದ್ರ ಊಟಕ್ಕೆ ಕುಳಿತ. ವಿಜಯ ಒಂದು ಬೀಸಣಿಗೆ ಹಿಡಿದು ಅವನ ಹತ್ತಿರ ಕುಳಿತಳು. ಅವಳ ಲಜ್ಜೆಯೆಲ್ಲ ಮಾಯವಾಯಿತು. ಆವಳು ಗಾಳಿ ಹಾಕಲು ತೊಡಗಿದ್ದನ್ನು ನೋಡಿ ನರೇಂದ್ರ ಸಂಕೋಚದಿಂದ ಹೇಳಿದ—"ನನಗೆ ಗಾಳಿ ಬೇಕಾಗಿಲ್ಲ. ನೀವು ಬೀಸಣಿಗೆ ಇಟ್ಟುಬಿಡಿ."

ವಿಜಯಳು ನಸುನಕ್ಕು ಹೇಳಿದಳು—"ನಿಮಗೆ ಬೇಕಿಲ್ಲದಿದ್ದರೂ, ನನಗೆ ಬೇಕಾಗಿದೆ, ಹೆಂಗಸರು ಯಾವಾಗಲೂ ಬರಿಯ ಕೈಯಲ್ಲಿ ಕುಳಿತುಕೊಳ್ಳಬಾರದೆಂದು ತಂದೆಯವರು ಹೇಳುತ್ತಿದ್ದರು."

"ನಿಮ್ಮ ಊಟವಾಗಿಲ್ಲವೇ?"

"ಉಹುಂ, ಗಂಡಸರ ಊಟವಾಗದೆ ನಾವು ಊಟಮಾಡಬಾರದು."

"ಭೇಷ್! ನೀವು ಬ್ರಾಹ್ಮರಾದರೂ ನಿಮ್ಮ ನಡೆನುಡಿಗಳೆಲ್ಲ ನಮ್ಮಂತೆ ಇದೆ." ನರೇಂದ್ರ ಪ್ರಸನ್ನನಾಗಿ ಹೇಳಿದ.

"ಅನೇಕ ಬ್ರಾಹ್ಮರ ಮನೆಗಳಲ್ಲಿ ಹೀಗಿಲ್ಲ. ಇದಕ್ಕೆ ವಿರುದ್ಧವಾಗಿವೆ" ಯೆಂದು ವಿಜಯಳು ಹೇಳಲಿಲ್ಲ. ಅವಳ ತಂದೆಯೇ ಈ ಹಿಂದೂ ಆಚಾರ-ವ್ಯವಹಾರಗಳನ್ನೆಲ್ಲ ತಮ್ಮ ಮನೆಯಲ್ಲಿ ಏರ್ಪಡಿಸಿದ್ದಾನೆಂದೂ ತಿಳಿಸಲಿಲ್ಲ.

ಅವಳು—“ಇದರಲ್ಲಿ ಆಶ್ಚರ್ಯ ಪಡಬೇಕಾದ್ದೇನೂ ಇಲ್ಲವಲ್ಲ. ನಾವೇನೂ ವಿಲಾಯತಿಯಿಂದ ಬಂದಿಲ್ಲ. ನಮ್ಮ ನಡೆ ನುಡಿಗಳನ್ನು ಕಾಬೂಲಿನಿಂದ ಕಲಿಯಬೇಕಾಗಿಲ್ಲ. ನಮ್ಮ ನಡೆ ನುಡಿ ಹೀಗಿಲ್ಲದಿದ್ದರೆ ನೀವು ಆಶ್ಚರ್ಯ ಪಡಬೇಕಾಗಿತ್ತು.”

ಆಳು ಬಾಗಿಲ ಹತ್ತಿರ ಬಂದು ಹೇಳಿದ–“ಅಮ್ಮಾ, ಲೆಕ್ಕದ ಪುಸ್ತಕ ತೊಗೊಂಡು ಗುಮಾಸ್ತೆ ಕೆಳಗೆ ಬಂದಿದ್ದಾರೆ. ಹೊರಟುಹೋಗುವಂತೆ ಅವರಿಗೆ ತಿಳಿಸಲೇ?”

“ಹೂಂ. ನನಗೆ ಪುರುಸೊತ್ತು ಇಲ್ಲ. ನಾಳೆ ಬರುವಂತೆ ಅವನಿಗೆ ಹೇಳು.”

ಆಳು ಹೋದಮೇಲೆ ನರೇಂದ್ರ ಅವಳ ಕಡೆ ತಿರುಗಿ “ಇದರಿಂದ ನನಗೆ ಬಹಳ ಆನಂದವಾಯಿತು” ಎಂದ.

“ಯಾವುದರಿಂದ?”

“ಆಳುಗಳು ನಿಮ್ಮನ್ನು ಸಂಬೋಧಿಸಿದ ಬಗೆಯಿಂದ.” ಅವನು ನಕ್ಕು ಮತ್ತೆ ಹೇಳಿದ—“ನೀವು ಬ್ರಾಹ್ಮ........ಮಹಿಳೆ. ಜ್ಞಾನಪ್ರಕಾಶವನ್ನು ಕಂಡವರು. ಶ್ರೀಮಂತರು, ಈಚೆಗೆ ನಾನು ಹೀಗೆ ಸುಸಂಸ್ಕೃತರ ಮನೆಗೇ ಚಿಕಿತ್ಸೆಗೆ ಹೋಗಬೇಕಾಗುತ್ತೆ. ಅಲ್ಲಿ ಆಳು ಕಾಳುಗಳು ಹೆಂಗಸರನು ‘ಮೇಡಂ’ ಎನ್ನುತ್ತಾರೆ. ನಿಜವಾದ ‘ಮೇಡಂ’ ಗಳು ಅವರನ್ನು ಹೇಗೆ ನೋಡುತ್ತಾರೆಂಬುದು ಅವರಿಗೆ ಗೊತ್ತು. ಆದ್ದರಿಂದ ತಮ್ಮ ಸಂಬಳ ತಿನ್ನುವ ಆಳುಗಳಿಂದ ತಾವೂ ಹಾಗೆ ಕರೆಸಿಕೊಂಡು ಆತ್ಮ ಮರ್ಯಾದೆಯನ್ನು ಕಾಪಾಡಿಕೊಳ್ಳುತ್ತಾರೆ” ಎಂದು ಅವನು ಗಟ್ಟಿಯಾಗಿ ನಕ್ಕ. ವಿಜಯಳೂ ನಕ್ಕಳು. ನರೇಂದ್ರನ ನಗು ನಿಂತ ಮೇಲೆ ಅವನು ಮತ್ತೆ ಹೇಳಿದ—“ಮನೆಯ ಆಳುಕಾಳುಗಳು ತಾಯಿಯೆಂದು ಸಂಬೋಧಿಸುವುದಕ್ಕಿಂತ ‘ಮೇಡಂ’ ಎಂದರೆ ಹೆಚ್ಚು ಗೌರವವೆಂದು ಅವರ ಭಾವನೆಯೆಂದು ತೋರುತ್ತೆ. ಆಳು ಯಾರನ್ನ ‘ಮೇಡಂ’ ಎನ್ನುತ್ತಾನೆನ್ನುವುದೇ ಮೊದಲನೆಯ ದಿನ ತಿಳಿಯಲಿಲ್ಲ. ಅವನು ಏನು ಹೇಳುತ್ತಿದ್ದ ಗೊತ್ತೇ? “ನಾನು ಬಹಳ ಜನ ಪರಂಗಿಯವರ ಮನೆಯಲ್ಲಿ ಕೆಲಸ ಮಾಡಿದ್ದೇನೆ. ನಿಜವಾದ ಮೇಡಂಗಳನ್ನೆಲ್ಲಾ ನೋಡಿದ್ದೇನೆ. ಆ ಮನೆಯ ಒಬ್ಬ ಹೊಸ ಹಿಂದೂ ಆಳು ಯಜಮಾನಿಯನ್ನು ‘ತಾಯಿ’ ಎಂದ. ಅದಕ್ಕೆ ಆ ‘ಮೇಡಂ’ ಅವ

ನಿಗೆ ಒಂದು ರುಪಾಯಿ ದಂಡ ಹಾಕಿದಳು. ಅವನ ಕೆಲಸ ಉಳಿದದ್ದೇ ಅವನ ಪುಣ್ಯ. ಅವರಿಗೆ ಅಷ್ಟು ಸಿಟ್ಟು ಬಂದಿತ್ತು" ಎಂದ. "ನೀವೂ ಇಂತಹುದೆಷ್ಟೋ ನೋಡಿರಬಹುದಲ್ಲವೇ?"

ವಿಜಯಳು ನಕ್ಕು ತಲೆಯಲ್ಲಾಡಿಸಿದಳು.

"ಈ 'ಮೇಡಂ' ಗಳ ಮಕ್ಕಳು ಇವರನ್ನು 'ಅಮ್ಮಾ' ಅನ್ನುತ್ತಾರೋ ಅಥವಾ 'ಮೇಡಂ' ಎಂದೇ ಕರೆಯುತ್ತಾರೋ ನೋಡಬೇಕು." ಎಂದು ಅವನು ಮತ್ತೊಮ್ಮೆ ಗಟ್ಟಿಯಾಗಿ ನಕ್ಕ.

ವಿಜಯಳು ನಗುತ್ತಾ ಹೇಳಿದಳು—"ಊಟವಾದಮೇಲೆ ಹಗಲೆಲ್ಲ ಇಷ್ಟೊಬ್ಬರ ಚರ್ಚೆ ಮಾಡಿ, ನನ್ನದೇನೂ ಅಭ್ಯಂತರವಿಲ್ಲ. ನಾನಿವತ್ತು ಊಟಮಾಡಲು ಅವಕಾಶ ಕೊಡುತ್ತೀರೋ ಇಲ್ಲವೋ?"

ನರೇಂದ್ರ ಸಂಕೋಚದಿಂದ ಎರಡು ಮೂರು ತುತ್ತನ್ನು ಬೇಗ ಬೇಗ ತುರುಕಿಕೊಂಡ. ಆಮೇಲೆ ಮತ್ತೆ ಮೊದಲಿನಂತೆ ಹೇಳಿದ—"ನಾನು ನಾಲ್ಕೈದು ವರುಷ ವಿಲಾಯತಿಯಲ್ಲಿದ್ದೆ. ಆದರೆ ಈ ದೇಶಿ ಸಾಹೇಬರು.....

ವಿಜಯಳು ಬೆಟ್ಟು ತೋರಿಸಿ ಆಜ್ಞೆ ಮಾಡುವ ಅಭಿನಯದಿಂದ ಹೇಳಿದಳು—"ಮತ್ತೆ ಅದೇ ಪರಕೀಯರ ನಿಂದಾ!...."

"ಉಹುಂ. ಇನ್ನಿಲ್ಲ...." ಎಂದು ಅವನು ಊಟದ ಕಡೆ ಗಮನ ಕೊಟ್ಟು ಹೇಳಿದ—"ಇನ್ನು ಊಟ ಸಾಧ್ಯವಿಲ್ಲ."

"ಚೆನ್ನಾಗಿದೆ. ಸ್ವಲ್ಪವೂ ಊಟಮಾಡಲೇ ಇಲ್ಲ. ಇನ್ನೂ ಏಳ ಕೂಡದು. ಹೋಗಲಿ ಪರಕೀಯರ ನಿಂದೆ ಮಾಡುತ್ತಾ ಊಟಮಾಡಿ, ನಾನೇನೂ ಹೇಳುವುದಿಲ್ಲ."

ನರೇಂದ್ರ ನಗಬೇಕಾಗಿದ್ದವನು ಅತ್ಯಂತ ಗಂಭೀರನಾಗಿ ಹೇಳಿದ—"ಇಷ್ಟಾದರೂ ನಾನು ಊಟಮಾಡಿಲ್ಲವೆಂದು ನೀವು ಹೇಳುತ್ತಿದ್ದೀರಲ್ಲ! ನೀವು ನಿತ್ಯ ನಾನು ಕಲಿಕತ್ತೆಯಲ್ಲಿ ಊಟಮಾಡುವುದನ್ನು ನೋಡಿದರೆ ಆಶ್ಚರ್ಯ ಪಡುತ್ತೀರಿ. ಇಷ್ಟು ಸ್ವಲ್ಪ ದಿನಗಳಲ್ಲೇ ನಾನೆಷ್ಟು ಸೊರಗಿದ್ದೆನೆಂಬುದು ನಿಮಗೆ ಕಾಣುತ್ತಿಲ್ಲವೇ? ನಮ್ಮ ಮನೆಯ ಬ್ರಾಹ್ಮಣ, ಆಳು ಎಲ್ಲರೂ ನೀಚರು. ಬೆಳಿಗ್ಗೆ ಅಷ್ಟುಹೊತ್ತಿಗೆ ಅಡಿಗೆ ಮಾಡಿಟ್ಟು ಎಲ್ಲೋ ಹೊರಟುಹೋಗುತ್ತಾನೆ. ಒಂದೊಂದು ದಿನ ನಾನು ಮಧ್ಯಾಹ್ನ ಎರಡು ಗಂಟೆಗೆ ಮನೆಗೆ ಬರಬೇಕಾಗುತ್ತೆ. ಎಷ್ಟೋ ದಿನ ನಾಲ್ಕು ಗಂಟೆಯಾಗುತ್ತೆ. ಅವೇ ತಂಗಳನ್ನ, ಆರಿದ ಹಾಲು. ಎಷ್ಟೋ ದಿನ ಬೆಕ್ಕು ಕುಡಿದುಬಿಟ್ಟಿರುತ್ತೆ.

ಇಲ್ಲದಿದ್ದರೆ ಕಾಗೆ ಕಿಟಕಿಯಲ್ಲಿ ನುಗ್ಗಿ ಕೆಳಗೆ ಚೆಲ್ಲಿಬಿಡುತ್ತೆ. ಅದನ್ನು ನೋಡಿದರೆ ಅಸಹ್ಯವಾಗುತ್ತೆ. ತಿಂಗಳಿಗೆ ಹದಿನೈದು ದಿನ ಊಟವೇ ಇಲ್ಲ ವೆನ್ನಬಹುದು."

ಸಿಟ್ಟಿನಿಂದ ವಿಜಯಳ ಮುಖ ಕೆಂಪಗಾಯಿತು. ಅವಳು ಹೇಳಿದಳು– "ಅಂಥ ಆಳುಕಾಳುಗಳನ್ನು ದೂರ ಮಾಡಬಾರದೇಕೆ? ಇಷ್ಟು ಸಂಬಳ ಬಂದರೂ ಇಷ್ಟು ಕಷ್ಟಪಟ್ಟರೆ, ಕೆಲಸಮಾಡುವುದರಿಂದೇನು ಲಾಭ?"

ಒಂದು ರೀತಿಯಲ್ಲಿ ನೀವು ಹೇಳುವುದೇನೋ ಸರಿ. ಒಂದು ದಿನ ಪೆಟ್ಟಿಗೆಯಿಂದ ಯಾರೋ ಆರುನೂರು ರುಪಾಯಿ ಕಳವು ಮಾಡಿ ಬಿಟ್ಟಿದ್ದರು. ಇನ್ನೊಂದು ದಿನ ನಾನೇ ನೂರು ರೂಪಾಯಿನ ಎರಡು ನೋಟುಗಳನ್ನು ಎಲ್ಲೋ ಇಟ್ಟು ಕಳೆದುಕೊಂಡೆ. ಉದಾಸೀನದ ಸ್ವಭಾವದವರಿಗೆ ಹೆಜ್ಜೆ ಹೆಜ್ಜೆಗೂ ತೊಂದರೆಗಳಿರುತ್ತವೆ. ಸ್ವಲ್ಪ ಹೊತ್ತು ಸುಮ್ಮನಿದ್ದು ಹೇಳಿದ—"ಆದರೂ ನನಗೆ ದುಃಖ-ಕಷ್ಟಗಳನ್ನು ಸಹಿಸುವುದು ಬಹಳ ದಿನಗಳಿಂದ ಅಭ್ಯಾಸವಾಗಿ ಹೋಗಿದೆ. ಆದ್ದರಿಂದ ಅದೊಂದೂ ಮನಸ್ಸಿಗೆ ಬರುವುದಿಲ್ಲ. ಆದರೂ ಒಂದೊಂದು ದಿನ ತುಂಬ ಹಸಿವಾದರೆ ಊಟದ ತೊಂದರೆ ಬಹಳ ಆಗುತ್ತೆ."

ವಿಜಯ ಮುಖ ತಗ್ಗಿಸಿಕೊಂಡು ಸುಮ್ಮನೆ ಕುಳಿತಿದ್ದಳು. ನರೇಂದ್ರ ಹೇಳಿದ—"ನನಗೆ ನಿಜವಾಗಿಯೂ ಕೆಲಸವೆಂದರೆ ಆಗದು. ನನ್ನ ಕೈಯಲ್ಲಿ ಅದು ಸಾಧ್ಯವೂ ಇಲ್ಲ. ನನಗೆ ಹೆಚ್ಚಿನ ಅಗತ್ಯವೂ ಇಲ್ಲ. ನಿಮ್ಮಂತಹ ದೊಡ್ಡ ಮನುಷ್ಯರ್‍ಯಾರಾದರೂ ಎರಡು ಹೊತ್ತು ನಾಲ್ಕು ತುತ್ತನ್ನ ಹಾಕಿಬಿಟ್ಟಾರಾಯಿತು. ನನ್ನ ಕೆಲಸದಲ್ಲಿ ನಾಸಿರುತ್ತೇನೆ. ನನಗಿನ್ನೇನೂ ಬೇಡ. ಆದರೆ ಅಂತಹವರು ಈಗ—"ಎಂದು ಮತ್ತೊಮ್ಮೆ ಅವನು ಗಟ್ಟಿಯಾಗಿ ನಕ್ಕ. ವಿಜಯ ಮೊದಲಿನಂತೆ ತಲೆ ತಗ್ಗಿಸಿಕೊಂಡು ಕುಳಿತಿದ್ದಳು. ನರೇಂದ್ರ ಹೇಳಿದ—"ನಿಮ್ಮ ತಂದೆಯವರಿದ್ದರೆ ಈ ಸಮಯದಲ್ಲಿ ನನಗೆ ಬಹಳ ಉಪಕಾರವಾಗುತ್ತಿತ್ತು. ಅವರು ನನ್ನಿಷ್ಟಪ್ರಕಾರ ಇರಲು ಅನುಕೂಲ ಮಾಡಿ ಕೊಡುತ್ತಿದ್ದರು."

"ಅದು ಹೇಗೆ? ನಿಮಗೆ ಅವರ ಪರಿಚಯವೂ ಇರಲಿಲ್ಲವಲ್ಲ." ವಿಜಯ ಉತ್ಸುಕಳಾಗಿ ಕೇಳಿದಳು.

"ಉಹುಂ. ನಾನವರನ್ನು ಯಾವಾಗಲೂ ನೋಡಿರಲಿಲ್ಲ. ಅವರೂ

ನನ್ನನ್ನು ನೋಡಿರಲಾರರು. ಆದರೂ ಅವರಿಗೆ ನನ್ನಲ್ಲಿ ಬಹಳ ವಿಶ್ವಾಸ. ನನಗೆ ದುಡ್ಡು ಕೊಟ್ಟು ವಿಲಾಯತಿಗೆ ಕಳುಹಿಸಿದವರ್ಯಾರು ಗೊತ್ತೇ? ಅವರೇ. ಅವರು ನಮ್ಮ ಸಾಲದ ವಿಚಾರ ಏನೂ ಹೇಳಿರಲಿಲ್ಲವೇ."

"ಹೇಳಿರಬಹುದು, ಆದರೆ ನೀವು ಏನು ಅಭಿಪ್ರಾಯದಿಂದ ಹೇಳುತ್ತಿದ್ದೀರೆಂಬುದನ್ನು ಹೇಳದ ಹೊರತು ನಾನೇನೂ ಉತ್ತರ ಕೊಡಲಾರೆ."

ನರೇಂದ್ರ ಒಂದರಕ್ಷಣ ಮನಸ್ಸಿನಲ್ಲೇ ಯೋಚಿಸಿಕೊಂಡು ಹೇಳಿದ— "ಉಂ, ಹೋಗಲಿ ಬಿಡಿ. ಈಗ ಆ ಚರ್ಚೆ ಮಾಡುವುದು ಉಪಯೋಗವಿಲ್ಲ."

"ಉಹುಂ. ನನಗೆ ಬೇಕಾಗಿದೆ."

ನರೇಂದ್ರ ಇನ್ನೂ ಸ್ವಲ್ಪ ಹಿಂದು ಮುಂದೆ ನೋಡಿ ಹೇಳಿದ—"ಎಲ್ಲ ಮುಗಿದುಹೋದ ವ್ಯವಹಾರವನ್ನು ಕೇಳಿ ಉಪಯೋಗವೇನು ?"

ವಿಜಯಳು ಹಟಹಿಡಿದು ಹೇಳಿದಳು—"ಉಹುಂ. ಅದು ಸಾಧ್ಯವಿಲ್ಲ. ನನಗೆ ಕೇಳುವ ಇಚ್ಛೆ ಹೆಚ್ಚಾಗಿದೆ. ಹೇಳಿ."

ಅವಳ ಅತಿ ಆಗ್ರಹವನ್ನು ನೋಡಿ ನರೇಂದ್ರ ನಕ್ಕು ಹೇಳಿದ— "ಅದನ್ನು ಹೇಳುವುದು ವ್ಯರ್ಥವಷ್ಟೇ ಅಲ್ಲ, ನನಗೆ ಅದರಿಂದ ಬಹಳ ಹಿನಾಯವಾಗುತ್ತೆ. ನಾನು ಬುದ್ಧಿವಂತಿಕೆಯಿಂದ ನಿಮ್ಮ ಭಾವನೆಗೆ.... ಎಂದುಕೊಳ್ಳಬಹುದು."

"ನಾನಿನ್ನು ಹೆಚ್ಚು ಕೇಳಿಕೊಳ್ಳಲಾರೆ. ನಿಮ್ಮ ಕಾಲು ಕಟ್ಟಿಕೊಳ್ಳುತ್ತೇನೆ. ಹೇಳಿ."

"ಊಟವಾದಮೇಲೆ ಹೇಳಬಹುದೇ ?"

"ಉಹುಂ. ಈಗಲೇ...."

"ಆಗಲಿ. ಹೇಳುತ್ತೇನೆ ಆದರೆ ಒಂದು ಮಾತು ಕೇಳುತ್ತೇನೆ. ನಮ್ಮ ಮನೆಯ ವಿಷಯದಲ್ಲಿ ಅವರು ಏನೂ ಹೇಳಿರಲಿಲ್ಲವೇ ?"

ವಿಜಯಳ ಕುತೂಹಲ ಮಿತಿಮೀರಿತು, ಆದರೂ ಅವಳೇನೂ ಉತ್ತರ ಹೇಳಲಿಲ್ಲ. ನರೇಂದ್ರ ನಗುತ್ತ ಹೇಳಿದ—"ಹೂಂ,ಹೋಗಲಿ. ಸಿಟ್ಟಾಗಬೇಡಿ. ಹೇಳುತ್ತೇನೆ. ನಾನು ವಿಲಾಯತಿಗೆ ಹೋದಾಗ ನಿಮ್ಮ ತಂದೆಯವರೇ ನನ್ನನ್ನು ವಿಲಾಯತಿಗೆ ಕಳುಹಿಸುತ್ತಿದ್ದಾರೆಂದು ತಂದೆಯವರು ಹೇಳಿದ್ದರು. ದಯಾಳಬಾಬುಗಳು ಈಗ ಮೂರುದಿನಗಳ ಕೆಳಗೆ ನನಗೊಂದು ಕಾಗದದ

ಕಟ್ಟನ್ನು ಕೊಟ್ಟರು. ಹರಕು ಮುರಕು ಸಾಮಾನುಗಳಿದ್ದ ಕೋಣೆಯ ಒಂದು ಮೂಲೆಯಲ್ಲಿ ಒಂದು ಮುರಕ ಮೇಜಿನ ಖಾನೆಯಲ್ಲಿ ಆ ಕಟ್ಟಿತ್ತಂತೆ. ಅದು ತಂದೆಯವರ ಆಸ್ತಿಯಾದ್ದರಿಂದ ದಯಾಳಬಾಬುಗಳು ನನಗೆ ಕೊಟ್ಟರು. ಆ ಕಟ್ಟನಲ್ಲಿ ಎರಡು ಕಾಗದ ನಿಮ್ಮ ತಂದೆಯವರ ಕೈ ಅಕ್ಷರದ್ದು. ತಂದೆಯವರು ಕೊನೆಯ ವಯಸ್ಸಿನಲ್ಲಿ ಸಾಲದ ಹೊರೆ ತಡೆಯದೆ ಜೂಜಾಡುತ್ತಿದ್ದುದನ್ನು ನೀವು ಕೇಳಿರಬಹುದು. ಒಂದು ಕಾಗದದಲ್ಲಿ ಅದೇ ವಿಷಯವೇ ಆರಂಭದಲ್ಲಿ ಬರೆದಿತ್ತು. ಕೊನೆಗೆ ಒಂದು ಕಡೆ ತಂದೆಯವರಿಗೆ ಉಪದೇಶರೂಪವಾಗಿ ಕೆಲವು ಮಾತುಗಳನ್ನು ಬರೆದು ಕೊನೆಗೆ " ಮನೆಗಾಗಿ ಏನೂ ಯೋಚಿಸಬೇಕಾಗಿಲ್ಲ. ನರೇಂದ್ರ ನನಗೂ ಮಗನಿದ್ದಂತೆ. ಅವನಿಗೆ ನಾನು ಮನೆಯನ್ನು ಬಳುವಳಿಯ ರೂಪವಾಗಿ ಕೊಟ್ಟಿದ್ದೇನೆ."

" ಆಮೇಲೆ ? " ವಿಜಯಳು ಮುಖವೆತ್ತಿ ನೋಡಿ, ಕೇಳಿದಳು.

" ಆಮೇಲೆ ಇನ್ನೂ ಕೆಲವು ಮಾತುಗಳಿವೆ. ಆದರೆ ಆ ಕಾಗದ ಬಹಳ ಹಳೆಯದು. ಅದಾದಮೇಲೆ ಅವರ ಅಭಿಪ್ರಾಯ ಬದಲಾಗಿರಬಹುದು. ಆದ್ದರಿಂದ ನಿಮಗೆ ಯಾವ ಮಾತನ್ನು ಹೇಳುವುದೂ ಅವರಿಗೆ ಅಗತ್ಯವೆನಿಸಿರಲಿಕ್ಕಿಲ್ಲ."

ತಂದೆಯ ಕೊನೆಯ ಇಚ್ಛೆ ಅಕ್ಷರಶಃ ವಿಜಯಳಿಗೆ ನೆನಪಾಯಿತು. ಅವಳೊಂದು ನಿಟ್ಟುಸಿರುಬಿಟ್ಟು ಸ್ವಲ್ಪಹೊತ್ತು ಸುಮ್ಮನಿದ್ದು ಹೇಳಿದಳು—

" ಹಾಗಾದರೆ ಮನೆಗೆ ದಾವಾ ಹಾಕಿ ! " ಎಂದು ನಗತೊಡಗಿದಳು.

ನರೇಂದ್ರನೂ ನಕ್ಕ. ಇದು ದೊಡ್ಡ ಹಾಸ್ಯವೆಂದು ತಿಳಿದು ಅವನು ಹೇಳಿದ—" ದಾವಾ ಮಾಡುತ್ತೇನೆ. ನಿಮ್ಮನ್ನೇ ಸಾಕ್ಷಿಗೆ ಕರೆಯುತ್ತೇನೆ. ನೀವು ನಿಜವನ್ನೇ ಹೇಳುತ್ತೀರೆಂಬ ಭರವಸೆಯೂ ಇದೆ."

" ಓಹೋ, ನೀವು ನನ್ನ ಸಾಕ್ಷಿಯನ್ನೇಕೆ ಒಪ್ಪುತ್ತೀರಿ ? "

" ಇಲ್ಲದಿದ್ದರೆ ಇದು ನಿರ್ಣಯವಾಗುವ ಬಗೆ ಹೇಗೆ ? ಮನೆ ನಿಜವಾಗಿಯೂ ನನ್ನದೆಂಬುದು ಕೋರ್ಟಿನಲ್ಲಿ ನಿಶ್ಚಯವಾಗುವುದು ಹೇಗೆ ? "

ವಿಜಯಳು ಗಂಭೀರಳಾಗಿ ಹೇಳಿದಳು—" ನನಗೇನು ಬೇರೆ ಕೋರ್ಟು ಬೇಕಾಗಿಲ್ಲ. ತಂದೆಯವರ ಅಪ್ಪಣೆಯೇ ನನಗೆ ಕೋರ್ಟಿದ್ದಹಾಗೆ. ನಾನು ಆ ಮನೆ ನಿಮಗೆ ವಾಪಸು ಕೊಡಿಸುತ್ತೇನೆ."

ಅವಳ ಮಾತು ಮತ್ತು ಮುಖದಲ್ಲಿ ರಹಸ್ಯವೇನೂ ತೋರದಿದ್ದರೂ,

ಇದರ ವಿಷಯವೇನೆಂಬುದು ಅರ್ಥವಾಗಲಿಲ್ಲ. ಅವಳ ಹಾಸ್ಯ ಬಹಳ ಗಂಭೀರವಾಗಿದ್ದುದರಿಂದ ಬಾಯಿಬಿಟ್ಟು ಯಾವ ಮಾತಾಡುವುದೂ ಕಷ್ಟ ವಾಗಿತ್ತು. ಆದ್ದರಿಂದ ನರೇಂದ್ರನು ಗಂಭೀರವಾಗಿದ್ದವನಂತೆ ತೋರಿಸುತ್ತಾ ಹೇಳಿದ—" ಹಾಗಾದರೆ ಅವರ ಕಾಗದವನ್ನು ಕಣ್ಣಿಂದ ನೋಡದೆ ಮನೆ ಯನ್ನು ವಾಪಸು ಕೊಡಿಸುತ್ತೀರಾ ? "

" ಉಹೂ, ನಾನು ಕಾಗದ ನೋಡಬೇಕು. ಅದರಲ್ಲಿ ಈ ಮಾತೇ ಇದ್ದರೆ, ಅವರ ಆ ಅಪ್ಪಣೆಯನ್ನು ನಾನೆಂದಿಗೂ ಅಗೌರವ ಮಾಡುವುದಿಲ್ಲ"

" ಕೊನೆಯವರೆಗೂ ಅವರ ಅಭಿಪ್ರಾಯ ಹೀಗೇ ಇತ್ತೆಂಬುದನ್ನಾ ದರೂ ಹೇಳುವುದು ಹೇಗೆ ? "

" ಆ ಅಭಿಪ್ರಾಯವಿರಲಿಲ್ಲವೆಂಬುದಾದರೂ ಹೇಳುವುದು ಹೇಗೆ ? "

" ನಾನದನ್ನು ತೆಗೆದುಕೊಳ್ಳದಿದ್ದರೆ ? ನಾನು ದಾವಾ ಮಾಡದಿದ್ದರೆ ? "

" ಅದು ನಿಮ್ಮ ಇಷ್ಟ. ಆದರೆ ಅಂತಹ ಸಂದರ್ಭದಲ್ಲಿ ನಿಮ್ಮ ಅತ್ತೆಯ ಮಕ್ಕಳುಗಳಿದ್ದಾರಲ್ಲ. ಅವರಿಗೆ ಹೇಳಿದರೆ ಅವರು ದಾವಾ ಮಾಡಲು ಒಪ್ಪುತ್ತಾರೆ."

" ನನಗೂ ಅದರಲ್ಲಿ ವಿಶ್ವಾಸವಿದೆ. ಇದನ್ನು ಶಪಥಮಾಡಿ ಬೇಕಾದರೆ ಹೇಳಲು ಸಿದ್ಧ." ನರೇಂದ್ರ ನಕ್ಕು ಹೇಳಿದ.

ವಿಜಯಳು ಸುಮ್ಮನಿದ್ದಳು.

" ಅಂದರೆ ನಾನು ತೆಗೆದುಕ್ಕೊಳ್ಳಲಿ, ಬಿಡಲಿ, ನೀವಂತೂ ಕೊಟ್ಟೇ ಕೊಡುತ್ತೀರಲ್ಲವೇ ! "

" ತಂದೆಯವರು ದಾನ ಕೊಟ್ಟದ್ದನ್ನು ಕಸಿದುಕೊಳ್ಳಕೂಡದೆಂದು ನನ್ನ ಪ್ರತಿಜ್ಞೆ."

ಅವಳ ದೃಢಮನಸ್ಸನ್ನು ನೋಡಿ ನರೇಂದ್ರ ಆಶ್ಚರ್ಯದಿಂದ ಮುಗ್ಧ ನಾದ. ಸ್ವಲ್ಪಹೊತ್ತು ಸುಮ್ಮನಿದ್ದು ಮೃದುವಾಗಿ ಹೇಳಿದ—" ನೀವು ಆ ಮನೆಯನ್ನು ಸತ್ಕಾರ್ಯದಲ್ಲಿ ಉಪಯೋಗಿಸಿದಮೇಲೆ ಅದನ್ನು ಕಸಿದು ಕೊಂಡ ಪಾಪ ಬರುವುದಿಲ್ಲ. ಅಲ್ಲದೆ ಅದನ್ನು ತೆಗೆದುಕೊಂಡು ನಾನೇನು ಮಾಡಲಿ ಹೇಳಿ. ಅಲ್ಲಿ ಇರಲು ನನ್ನವರು ಯಾರಿದ್ದಾರೆ ? ನಾನು ಹೊರ ಗೆಲ್ಲಾದರೂ ಕೆಲಸ ಮಾಡಲೇಬೇಕು. ಅದರ ಬದಲು ಈಗ ಮಾಡಿರುವ

ವ್ಯವಸ್ಥೆ ಒಳ್ಳೆಯದು. ಅಲ್ಲದೆ ಈ ವಿಷಯದಲ್ಲಿ ನೀವು ವಿಲಾಸಬಾಬು ಗಳನ್ನು ಒಪ್ಪಿಸುವುದಕ್ಕಾಗುವುದಿಲ್ಲ."

ಈ ಕೊನೆಯ ಮಾತಿನಿಂದ ಅವಳು ರೇಗಿ ಹೇಳಿದಳು—"ನನ್ನ ಪದಾರ್ಥಕ್ಕೆ ಇನ್ನೊಬ್ಬರ ಒಪ್ಪಿಗೆಯನ್ನು ಪಡೆಯಲು ವ್ಯರ್ಥಮಾಡುವಷ್ಟು ನನಗೆ ಪುರಸೊತ್ತಿಲ್ಲ. ನೀವಿನ್ನೊಂದು ಕೆಲಸ ಮಾಡಿ. ನಿಮಗೆ ಮನೆ ಬೇಡವಾದರೆ, ಅದಕ್ಕೆ ತಕ್ಕ ಬೆಲೆಯನ್ನು ತೆಗೆದುಕೊಳ್ಳಿ. ಆಗ ನೀವು ಕೆಲಸವನ್ನು ಮಾಡಬೇಕಾಗಿಲ್ಲ. ನಿಮ್ಮ ಕೆಲಸವನ್ನು ಬೇಕಾದಹಾಗೆ ಮಾಡಿ ಕೊಳ್ಳಬಹುದು. ನೀವಿದಕ್ಕೆ ದಯವಿಟ್ಟು ಒಪ್ಪಿಕೊಳ್ಳಿ ನರೇಂದ್ರಬಾಬು." ಅವಳ ಈ ಅನುರೋಧದ ಮಾತು ಅವನ ಹೃದಯದಲ್ಲಿ ಬಾಣದಂತೆ ನೆಟ್ಟಿತು. ಅವನು ಚಂಚಲನಾದ. ಅವಳ ನಿಜವಾದ ಅಭಿಪ್ರಾಯ ತಿಳಿದುಕೊಳ್ಳ ದಿದ್ದರೂ, ಇದು ಹಾಸ್ಯವಲ್ಲವೆಂಬುದು ಅವನಿಗೆ ಅರ್ಥವಾಯಿತು. ತಂದೆಯ ಸಾಲಕ್ಕಾಗಿ ಆ ಮನೆಯನ್ನು ಸ್ವಾಧೀನಕ್ಕೆ ತೆಗೆದುಕೊಂಡಿದ್ದರಿಂದ ಅವಳಿಗೆ ಸುಖವೇನೂ ಆಗಿಲ್ಲವೆಂದೂ, ಇದರಿಂದ ಅವಳು ದುಃಖವನ್ನು ಅನುಭವಿಸು ತ್ತಿದ್ದಾಳೆಂದೂ, ಅವಕಾಶ ಸಿಕ್ಕಾಗ ಅವಳು ಅದರ ಭಾರವನ್ನು ಕಡಿಮೆ ಮಾಡಿಕೊಳ್ಳಬಯಸುತಿದ್ದಾಳೆಂದೂ ತಿಳಿದು ಅವನ ಹೃದಯ ತುಂಬಿ ಬಂದಿತು. ಆದರೆ ಈ ಕಾರಣದಿಂದಲೇ ಈ ಸಲಹೆಯನ್ನು ಒಪ್ಪಿಕೊಳ್ಳುವು ದಕ್ಕಾಗುವುದಿಲ್ಲ. ತನಗೆ ಅಧಿಕಾರವಿಲ್ಲದ್ದನ್ನು ಬೇಡಿ ಪಡೆಯುವುದು ಹೇಗೆ? ಅಲ್ಲದೆ ಇನ್ನೂ ಒಂದು ವಿಷಯ, ಹಿಂದೆ ಈ ಪ್ರಪಂಚದಲ್ಲಿ ಅವಳಿಗೆ ಇದ್ದ ಬಹಳ ದೊಡ್ಡ ಸಮಸ್ಯೆಗಳಲ್ಲಿ ಅನೇಕ ಸಮಸ್ಯೆಗಳು ಈಗ ಬಹಳ ಸರಳ ವಾಗಿದ್ದವು. ವಿಲಾಸನನ್ನು ಆವೇಶದಲ್ಲಿ ವಿಜಯಳು ಎಷ್ಟೇ ಕೆಟ್ಟ ಮಾತಾಡಿರಲಿ, ಅವಳು ಕೊನೆಯವರೆಗೂ ಅದನ್ನೆಂದಿಗೂ ಕಾರ್ಯರೂಪಕ್ಕೆ ತರಲಾರಳೆಂದೂ ಇದರಿಂದ ಅವಳ ಲಜ್ಜೆ ಮತ್ತು ದುಃಖ ಹೆಚ್ಚುತ್ತದೆಯೇ ಹೊರತು ಇನ್ನೇನೂ ಇಲ್ಲವೆಂದೂ ಅವನು ಮನಗಂಡಿದ್ದ.

ಸ್ವಲ್ಪ ಹೊತ್ತು ಅವಳ ತಗ್ಗಿದ್ದ ಮುಖವನ್ನು ಸ್ನೇಹದ ದೃಷ್ಟಿಯಿಂದ ನೋಡುತ್ತಿದ್ದು ಹಾಸ್ಯದ ಕಂಠದಿಂದ ಹೇಳಿದ—"ನಿಮ್ಮ ಮನಸ್ಸಿನ ವಿಷಯ ನನಗೆ ಅರ್ಥವಾಯಿತು. ಬಡವನಿಗೆ ಯಾವ ರೀತಿಯಿಂದಲಾದರೂ ಸ್ವಲ್ಪ ದಾನಮಾಡಬೇಕೆಂದು ನಿಮ್ಮ ಇಚ್ಛೆಯಲ್ಲವೇ ?"

ಹೀಗೆ ಇನ್ನೊಂದು ಸಲ ಅವನು ಹೇಳಿದ. ಮತ್ತೆ ಅದೇ ಮಾತನ್ನು

ಕೇಳಿ ವಿಜಯಳು ವ್ಯಥೆಯಿಂದ ಮುಖವೆತ್ತಿ ಹೇಳಿದಳು...."ಈ ಮಾತಿನಿಂದ ನನಗೆಷ್ಟು ದುಃಖವಾಗುತ್ತೆಂಬುದು ನಿಮಗೆ ಗೊತ್ತಿದೆಯೇ."

ನರೇಂದ್ರ ಮನಸ್ಸಿನಲ್ಲೇ ನಕ್ಕು ಹೇಳಿದ...."ಹಾಗಾದರೆ ನಿಜವಾದ ವಿಷಯವೇನು? ಹೇಳಿ."

"ನಾನು ಮೊದಲಿನಿಂದಲೂ ನಿಜವನ್ನೇ ಹೇಳುತ್ತಿದ್ದೇನೆ. ಆದರೆ ನಿಮ್ಮದು ಕೆಟ್ಟ ಮನಸ್ಸು. ಆದ್ದರಿಂದ ನೀವು ನಂಬುವುದಿಲ್ಲ. ನೀವು ಬಡನರಾಗಲಿ, ಭಾಗ್ಯವಂತರಾಗಲಿ, ಅದರಿಂದ ನನಗೇನು? ತಂದೆಯವರ ಅಪ್ಪಣೆಯನ್ನು ಪಾಲಿಸುವುದಕ್ಕಾಗಿಯೇ ನಾನು ಮನೆ ವಾಪಸು ಕೊಡಬೇಕೆನ್ನುತ್ತಿರುವುದು."

ನರೇಂದ್ರ ಬಹಳ ಗಂಭೀರನಾಗಿ ಹೇಳಿದ...."ಅದರಲ್ಲೂ ಒಂದು ಸುಳ್ಳಾಯಿತು. ಉಂ. ಅದು ಹೋಗಲಿ ಬಿಡಿ. ನೀವು ಬಹಳ ದೊಡ್ಡ ದೊಡ್ಡ ಪ್ರತಿಜ್ಞೆಗಳನ್ನು ಮಾಡುತ್ತಿದ್ದೀರಿ. ನಿಮ್ಮ ತಂದೆಯವರ ಅಪ್ಪಣೆಯಂತೆ ವಾಪಸು ಕೊಡುವುದಾದರೆ ಇನ್ನೂ ಎಷ್ಟು ಪದಾರ್ಥಗಳನ್ನು ಕೊಡಬೇಕಾಗುತ್ತೆಂಬುದನ್ನು ಬಲ್ಲಿರಾ ? ಆ ಮನೆಯೊಂದೇ ಅಲ್ಲವೆಂಬುದು ಗೊತ್ತಿದೆಯೇ !"

"ಆಗಲಿ. ನಿಮ್ಮ ಆಸ್ತಿಯನ್ನೆಲ್ಲ ತೆಗೆದುಕೊಳ್ಳಿ."

ನರೇಂದ್ರ ನಕ್ಕು ತಲೆಯಲ್ಲಾಡಿಸಿದ. ಅವನು ಹೇಳಿದ—"ದೊಡ್ಡದಾಗಿ ನನ್ನನ್ನು ದಾವಾ ಮಾಡೆಂದು ಹೇಳುತ್ತೀರಿ. ನಾನು ಮಾಡದಿದ್ದರೆ, ನನ್ನ ಅತ್ತೆಯ ಮಕ್ಕಳ ಕೈಲಿ ದಾವಾ ಮಾಡಿಸುತ್ತೇನೆಂದು ಬೇರೆ ಹೆದರಿಸುತ್ತೀರಿ. ಅವರ ಆವೇಶದ ಪ್ರಕಾರ ನನ್ನ ದಾವಾ ಎಲ್ಲಿಯವರೆಗೂ ಹೋಗುತ್ತೆಂಬುದು ಗೊತ್ತಿದೆಯೇ ? ಬರಿಯ ಈ ಮನೆ ಮತ್ತು ಕೆಲವು ಎಕರೆ ಜಮೀನುಗಳು ಮಾತ್ರವಲ್ಲ. ಅದಕ್ಕಿಂತ ಬಹಳ ಬರಬೇಕು."

ವಿಜಯಳು ಉತ್ಸುಕಳಾಗಿ ಕೇಳಿದಳು—"ತಂದೆಯವರು ಇನ್ನೇನೇನು ನಿಮಗೆ ಕೊಟ್ಟಿದ್ದಾರೆ ?"

"ಅದರಲ್ಲಿ ಇಷ್ಟೇ ಬಳುವಳಿ ಕೊಟ್ಟಿಲ್ಲ. ಆ ಕಾಗದವೂ ನನ್ನ ಹತ್ತಿರವಿದೆ. ಇಲ್ಲಿ ನೀವು ನೋಡುತ್ತಿರುವುದೆಲ್ಲ ಅದರಲ್ಲಿ ಸೇರಿದೆ. ಬರಿಯ ಆ ಮನೆಯ ಮೇಲೆ ಮಾತ್ರವಲ್ಲ....ಈ ಮನೆ, ಈ ಕೋಣೆ, ಈ ಕುರ್ಚಿ-ಮೇಜುಗಳು, ಕನ್ನಡಿ, ಪಠಗಳು. ಮಂಚ, ಮನೆಯ ಆಳು. ಕಾಳುಗಳು, ಕೆಲಸ

ಗಾರರು. ಯಜಮಾನಿ ಎಲ್ಲರ ಮೇಲೂ ನನ್ನ ದಾವಾ ಇದ್ದೇ ಇದೆ. ತಿಳಿಯಿತೆ? ತಂದೆಯ ಅಪ್ಪಣೆ....ತಂದೆಯ ಅಪ್ಪಣೆ....ಎಲ್ಲ ಕೊಡಬಲ್ಲಿರಾ ?"

ಕಾಲಿನಿಂದ ತಲೆಯವರೆಗೂ ವಿಜಯಳ ಮೈ ಚಲಿಸಿತು. ಅವಳೇನೂ ಉತ್ತರ ಕೊಡದೆ ತಲೆ ತಗ್ಗಿಸಿಕೊಂಡು ಮರದ ಗೊಂಬೆಯಂತೆ ಕುಳಿತ್ತಿದ್ದಳು. ನರೇಂದ್ರ ಗರ್ವದಿಂದ ಬಾಯಲ್ಲಿ ತುತ್ತನಿಟ್ಟುಕೊಳ್ಳುತ್ತಾ ಚಪ್ಪಾಳೆ ಹಾಕುತ್ತಾ ಹೇಳಿದ—"ಏನು ? ಕೊಡುತ್ತೀರೀ ? ಬೇಕಾದರೆ ಒಂದುಸಲ ವಿಲಾಸಬಾಬುಗಳೊಂದಿಗೆ ಯೋಚನೆ ಮಾಡಿ." ಎಂದು ಅವನು ಕೇಕೆಹಾಕಿ ನಕ್ಕ.

ಆದರೆ ವಿಜಯಳು ಮುಖವೆತ್ತಿದ ಕೂಡಲೆ ಅವನ ದೊಡ್ಡ ನಗು ನಿಂತುಹೋಯಿತು. ವಿಜಯಳ ಮುಖದಲ್ಲ ರಕ್ತವೆಲ್ಲ ಒಣಗಿಂದತಿತ್ತು. ಅವಳ ಬಿಳುಪೇರಿದ ಸಪ್ಪೆಮೋರೆಯ್ನು ನೋಡಿ ನರೇಂದ್ರ ಉದ್ವೇಗ ಮತ್ತು ವ್ಯಥೆಯಿಂದ ಹೇಳಿದ—"ನಿಮಗೇನಾದರೂ ಹುಚ್ಚು ಗಿಚ್ಚು ಹಿಡಿಯಿತೇ? ನಾನು ಇದಕ್ಕೆಲ್ಲ ದಾವಾ ಹಾಕುತ್ತೇನೆಯೇ ? ಹಾಕಿದರಾದರೂ ನನಗೆ ಎಲ್ಲ ಸಿಕ್ಕುತ್ತದೆಯೇ ? ಆಗ ನನ್ನನ್ನೇ ಹಿಡಿದು ಹುಚ್ಚರಾಸ್ಪತ್ರೆಗೆ ಸೇರಿಸಿಬಿಡುತ್ತಾರೆ,"

ವಿಜಯಳಿಗೆ ಇದೆಲ್ಲ ಕೇಳಿಸಲೇ ಇಲ್ಲ. ಅವಳು—"ಎಲ್ಲಿ ತಂದೆಯವರ ಕಾಗದ ನೋಡೋಣ ?" ಎಂದು ಕೇಳಿದಳು.

ನರೇಂದ್ರ ಆಶ್ಚರ್ಯದಿಂದ ಹೇಳಿದ—"ನಾನು ಕಾಗದಗಳನ್ನು ಜೇಬಿನಲ್ಲಿಟ್ಟುಕೊಂಡು ತಿರುಗುತ್ತಿರತ್ತೇನೆಯೇ ? ಅದನ್ನು ನೋಡಿದ್ದರಿಂದ ನಿಮಗೆ ಆಗುವ ಉಪಯೋಗವಾದರೂ ಏನು ?"

"ಉಪಯೋಗವೇನಾದರೂ ಆಗಲಿ. ಇವತ್ತೇ ಆಳಿನ ಜೊತೆಗೆ ಆ ಎರಡು ಕಾಗದಗಳನ್ನು ಕಳುಹಿಸುತ್ತೀರಾ ? ಅವನು ನಿಮ್ಮ ಜೊತೆಗೆ ಕಲಿಕತ್ತೆಗೆ ಬರುತ್ತಾನೆ-"

"ಇಷ್ಟು ಆತುರವಾಗಿಯೇ?"

" ಹೌದು."

೨೩

ರಾತ್ರಿಯೆಲ್ಲ ನಿದ್ದೆ ಇಲ್ಲದೆ ಆಯಾಸಗೊಂಡು ವಿಜಯಳು ಬೆಳಿಗ್ಗೆ ಅಷ್ಟು ಹೊತ್ತಿಗೆ ಕೆಳಗಿಳಿದು ಬಂದಾಗ ಗುಮಾಸ್ತ ಲೆಕ್ಕದ ಪುಸ್ತಕಗಳನ್ನು

ಮೇಜಿನ ಮೇಲಿಟ್ಟು ಹತ್ತಿರದಲ್ಲೇ ನಿಂತಿದ್ದ. ಅವನು ವಿನಯದಿಂದ ಹೇಳಿದ—"ತಾಯಿ, ಇವತ್ತೇ ಇದೆಲ್ಲ ಬೇಕು"

ಎರಡು ಗಂಟೆ ಬಿಟ್ಟು ಬರುವಂತೆ ಅವನಿಗೆ ಹೇಳಿಕಳುಹಿಸಿ, ಮೇಲಿನ ಖಾತೆಯನ್ನು ತೆರೆದು ಕಿಟಕಿಯ ಹತ್ತಿರ ಇದ್ದ ಕುರ್ಚಿಯ ಮೇಲೆ ಹೋಗಿ ಕುಳಿತಳು. ಆ ಖಾತೆಯನ್ನು ನೋಡುವ ಮನಸ್ಸಾಗಲಿಲ್ಲ. ಅವಳ ಉದ್ಭ್ರಾಂತ ದೃಷ್ಟಿ ಆ ಪುಸ್ತಕದಲ್ಲಿರುವ ಅಂಕೆಗಳ ಮೇಲೆ ಹೊರಳಿ ಮತ್ತೊಮ್ಮೆ ಕಿಟಕಿಯಿಂದ ಹೊರಗೆ ಹೋಗುತ್ತಿತ್ತು. ಕೆಳಗೆ ತೋಟದ ಒಂದಂಚಿನಲ್ಲಿ ಒಂದು ಮರದ ಕೆಳಗೆ ರಾಸಬಿಹಾರಿ ನಿಂತು ಪರೇಶನನ್ನು ಏನೋ ಕೇಳುತ್ತಿದ್ದುದು ಕಂಡಿತು. ಅವರು ಮೇಲಿನ ಕೋಣೆಯನ್ನು ಒಂದು ಸಲ ಕೆಳಗಿನ ಕೋಣೆಯನ್ನೊಂದು ಸಲ ತೋರಿಸುತ್ತಿದ್ದರು. ಅವರಿಬ್ಬರ ಮಾತು ಕೇಳಿಸದಿದ್ದರೂ, ಆ ಮುದುಕನ ಇಂಗಿತ ವಿಜಯಳಿಗೆ ಅರ್ಥವಾಯಿತು. ಸ್ವಲ್ಪ ಹೊತ್ತಿನ ಮೇಲೆ ರಾಸಬಿಹಾರಿ ಪರೇಶನನ್ನು ಬಿಟ್ಟು ಕಛೇರಿಯ ಕಡೆಗೆ ಹೊರಟ. ಪರೇಶ ಮನೆಯ ಕಡೆ ಹೊರಟಿದ್ದ. ವಿಜಯ ಕಿಟಕಿಯಿಂದ ಕೈಯಲ್ಲಾಡಿಸಿ ಅವನನ್ನು ಕರೆದು"ನಿನ್ನನ್ನು ಏನು ಕೇಳುತ್ತಿದ್ದರೋ?" ಎಂದು ಕೇಳಿದಳು.

ಪರೇಶ ಹೇಳಿದ—"ನೋಡಮ್ಮ, ಗುಮಾಸ್ತನ ಹತ್ತಿರ ದುಡ್ಡು ಇಸುಕೊಂಡು ನಾನು ಗಾಳಿಪಟ ಕೊಳ್ಳಲು ಹೋಗಿರಲಿಲ್ವೇನಮ್ಮ? ಡಾಕ್ಟರು ಊಟಮಾಡುವಾಗ ನಾನು ಮನೆಯಲ್ಲಿದ್ದೆನೇನಮ್ಮ?"

"ಇಲ್ಲವಲ್ಲ."

"ನೋಡು ಹಾಗಾದರೆ, ಏನೇನು ಮಾತಾಯಿತೋ ಹೇಳದಿದ್ದರೆ ನಿನ್ನನ್ನು ಕಂಬಕ್ಕೆ ಕಟ್ಟಿಸಿ ಹೊಡೆಸುತ್ತೇನೆಂದು ದೊಡ್ಡಬಾಬುಗಳು ಹೇಳಿದರು. ಹೊಸ ಆಳು ನಿಮಗೆ ಸುಳ್ಳು ಹೇಳಿರಬೇಕು. 'ಡಾಕ್ಟರನ್ನು ಕರೆದುಕೊಂಡುಬಾ, ನಿನಗೆ ಒಳ್ಳೆಯ ಗಾಳಿಪಟ ತರಿಸಿಕೊಡುತ್ತೇನೆಂದು ಅಮ್ಮ ಹೇಳಿದ್ದಳು.' ಆದ್ದರಿಂದ ನಾನು ಹೋಗಿರಲಿಲ್ಲವೇನಮ್ಮ? ನೀನು ಇದನ್ನು ದೊಡ್ಡಬಾಬುಗಳಿಗೆ ಹೇಳಬೇಡಮ್ಮ. ಅವರು ನಿನಗೆ ಹೇಳಬೇಡವೆಂದಿದ್ದಾರೆ."

"ಉಹುಂ, ಹೇಳುವುದಿಲ್ಲ"ವೆಂದು ಅವಳು ಪರೇಶನನ್ನು ಕಳುಹಿಸಿ ಕೊಟ್ಟು ತಿರುಗಿಬಂದು ಲೆಕ್ಕದಪುಸ್ತಕವನ್ನು ತೆಗೆದುಕೊಂಡು ಕುಳಿತಳು.

ಆದರೆ ಅದರಲ್ಲಿ ಬಗೆದುವೆಲ್ಲ ಈಗ ಕಲಸಿಹೋದಂತೆ ಕಂಡಿತು. ರಾತ್ರಿ ನಿದ್ದೆಯಿಲ್ಲದೆ ಕೆಂಪಾಗಿದ್ದ ಕಣ್ಣು ಸಿಟ್ಟನಿಂದ ಉರಿಯುತ್ತಿತ್ತು. ಸ್ವಲ್ಪ ಹೊತ್ತಿನಮೇಲೆ ರಾಸಬಿಹಾರಿ ಹೊರಗೆ ಚಿತ್ತದ ಶಬ್ದ ಮಾಡುತ್ತ ಮೆಲ್ಲಗೆ ಒಳಗೆ ಹೆಜ್ಜೆ ಇಟ್ಟು ವಿಜಯಳ ಗಮನವನ್ನು ಸೆಳೆಯುವುದ ಕ್ಕೋಸ್ಕರ ಅವನು ಸ್ವಲ್ಪ ಕೆಮ್ಮಿ . ಒಂದು ಕುರ್ಚಿಯನ್ನೆಳೆದುಕೊಂಡು ಕುಳಿತುಕೊಂಡ.

ವಿಜಯಳು ಪುಸ್ತಕದಿಂದ ಮುಖವೆತ್ತಿ "ಬನ್ನಿ, ಇವತ್ತು ಇಷ್ಟು ಬೇಗ ಏನು?"

ರಾಸಬಿಹಾರಿ ಅವಳ ಆ ಪ್ರಶ್ನೆಗೆ ಉತ್ತರಕೊಡದೆ ಬಹಳ ಉದ್ವೇಗದಿಂದ ಕೇಳಿದ—"ನಿನ್ನ ಕಣ್ಣುಗಳೆರಡೂ ಎಷ್ಟು ಕೆಂಪಾಗಿವೆ ಯಲ್ಲ ಮಗು? ಶೀತಗೀತವೇನೂ ಆಗಿಲ್ಲತಾನೆ?"

"ಏನೂ ಇಲ್ಲ." ವಿಜಯ ತಲೆಯಲ್ಲಾಡಿಸಿ ಹೇಳಿದಳು.

ರಾಸಬಿಹಾರಿ ಅದಕ್ಕೆ ಗಮನ ಕೊಡದೆ ಬಹಳ ಯೋಚನೆಮಾಡು ತ್ತಿದ್ದವನಂತೆ ಹೇಳಿದ—"ನೀನು ಹೇಳದಿದ್ದರೆ ಒಂದೂ ಗೊತ್ತಾಗುವು ದಿಲ್ಲ ಮಗು. ರಾತ್ರಿಯೆಲ್ಲೋ ನಿದ್ದೆ ಇಲ್ಲದಿರಬೇಕು; ಇಲ್ಲದಿದ್ದರೆ ಏನೋ........"

"ಉಹುಂ. ನನಗೇನೂ ಆಗಿಲ್ಲ"

"ಇಲ್ಲದಿದ್ದರೆ ಹೀಗೆ ಕಣ್ಣು ಕೆಂಪಗಾಗುವ ಕಾರಣ........"

ವಿಜಯಳು ಹೆಚ್ಚು ಉತ್ತರ ಹೇಳದೆ ಪುಸ್ತಕವನ್ನು ನೋಡುತ್ತಿ ದ್ದುದನ್ನು ನೋಡಿ ರಾಸಬಿಹಾರಿ ಸುಮ್ಮನಾದ. ಸ್ವಲ್ಪ ಹೊತ್ತಾದಮೇಲೆ ಅವನು ಹೇಳಿದ—"ಈ ಬಿಸಿಲಿನ ಭಯಕ್ಕಾಗಿ ಬೆಳಿಗ್ಗೆಯೇ ಬರಬೇಕಾ ಯಿತು. ಲೆಕ್ಕವೆಲ್ಲ ನೋಡಬೇಕಾಗಿದೆ. ಚೌಧುರಿಯ ಕಡೆಯವರು ಗೋಮಾಳದ ಗಡಿಯ ಸಂಬಂಧದಲ್ಲಿ ದಾವಾ ಮಾಡುತ್ತಾರೆ."

ಜಮೀನುದಾರಿಯ ಸಂಬಂಧದ ಅತಿ ಅವಶ್ಯಕ ಕಾಗದಪತ್ರಗ ಳನ್ನು ವನಮಾಲಿ ತನ್ನ ಹತ್ತಿರವೇ ಇಟ್ಟುಕೊಳ್ಳುತ್ತಿದ್ದ. ಅದು ಯಾವಾಗಲೂ ಬೇಕಾಗುವುದಿಲ್ಲ. ಅಲ್ಲದೆ ಅದು ಅಲ್ಲಿಲ್ಲಿಟ್ಟರೆ ಕಳೆದು ಹೋಗುತ್ತೆಂಬ ಭಯದಿಂದ ಅದನ್ನು ಹೊರಗೆ ಕೊಡುತ್ತಲೇ ಇರಲಿಲ್ಲ. ಕಲಿಕತ್ತೆಯಿಂದ ಬರುವಾಗ ವಿಜಯ ಅದನ್ನೆಲ್ಲಾ ಜೊತೆಗೆ ತಂದು ತನ್ನ

ಮಲಗುವ ಕೋಣೆಯಲ್ಲಿ ಕಬ್ಬಿಣದ ಪೆಟ್ಟಿಗೆಯಲ್ಲಿಟ್ಟುಕೊಂಡಿದ್ದಳು. ವಿಜಯ ಮುಖವೆತ್ತಿ ಕೇಳಿದಳು—"ಅವರು ದಾವಾ ಮಾಡುತ್ತಾರೆಂದು ಯಾರು ಹೇಳಿದರು?"

"ಯಾರು ಹೇಳುತ್ತಾರೆ ಮಗು. ನನಗೆ ಗಾಳಿವರ್ತಮಾನ ಬಂದಿದೆ. ಇಲ್ಲದಿದ್ದರೆ ಇಷ್ಟು ದೊಡ್ಡ ಜಮೀನುದಾರಿಯನ್ನು ಇಷ್ಟು ದಿವಸ ನಡೆಸುತ್ತಿದ್ದೆನೇ?" ರಾಸಬಿಹಾರಿ ತಿಳಿದವನಂತೆ ನಗುತ್ತಾ ಹೇಳಿದ.

"ಅವರು ಎಷ್ಟು ಜಮೀನಿಗೆ ದಾವಾ ಮಾಡುತ್ತಾರೆ?"

ರಾಸಬಿಹಾರಿ ಮನಸ್ಸಿನಲ್ಲೇ ಲೆಕ್ಕಾ ಹಾಕಿಕೊಂಡು ಹೇಳಿದ— "ಏನಿಲ್ಲವೆಂದರೂ ಎರಡು ಎಕರೆಗಿಂತ ಕಡಿಮೆ ಇರಲಾರದು."

"ಸರಿ ಹಾಗಾದರೆ! ಅವರೇ ತೆಗೆದುಕೊಳ್ಳಲಿ. ಸ್ವಲ್ಪ ಜಾಗಕ್ಕಾಗಿ ವ್ಯಾಜ್ಯ-ವ್ಯವಹಾರವೇಕೆ?"

ರಾಸಬಿಹಾರಿ ಬಹಳ ಆಶ್ಚರ್ಯದಿಂದ ಹೇಳಿದ—"ನಿನ್ನಂತಹ ಹುಡುಗಿ ಇಂತಹ ಮಾತಾಡುತ್ತಾಳೆಂದು ನಾನು ತಿಳಿದಿರಲಿಲ್ಲ. ಇವತ್ತು ಸುಮ್ಮನೆ ಎರಡೆಕರೆ ಬಿಟ್ಟುಬಿಟ್ಟರೆ ನಾಳೆ ಇನ್ನೂರೆಕರೆಯನ್ನೂ ಬಿಡಬೇಕಾಗಿ ಬರಬಹುದು."

ಇದಕ್ಕೂ ವಿಜಯ ವಿಚಲಿತಳಾಗದೆ ಸಹಜರೀತಿಯಲ್ಲೇ ಹೇಳಿದಳು —"ಈಗೇನು ಇನ್ನೂರೆಕರೆ ಕೊಡಬೇಕಾಗಿಲ್ಲವಲ್ಲ. ಸಣ್ಣ ವಿಚಾರಕ್ಕಾಗಿ ವ್ಯಾಜ್ಯ-ವ್ಯವಹಾರ ಬೇಡ."

ರಾಸಬಿಹಾರಿ ಮರ್ಮಾಹತನಾಗಿ ತಲೆಯಲ್ಲಾಡಿಸುತ್ತ ಹೇಳಿದ— "ಇದೆಂದಿಗೂ ಸಾಧ್ಯವಿಲ್ಲ ಮಗು; ಎಂದಿಗೂ ಸಾಧ್ಯವಿಲ್ಲ. ನಿಮ್ಮ ತಂದೆ ನನ್ನಮೇಲೇ ಎಲ್ಲ ಭಾರವನ್ನೂ ಹಾಕಿಹೋಗಿ, ನಾನಿನ್ನೂ ಬದುಕಿರುವಾಗ, ಎರಡು ಎಕರೆಯೇಕೆ? ಎರಡಂಗುಲ ಜಮೀನನ್ನು ಬಿಟ್ಟುಬಿಡುವುದೂ ಘೋರ ಅನ್ಯಾಯವಾದೀತು. ಅಲ್ಲದೆ ಇನ್ನೂ ಅನೇಕ ಕಾರಣಗಳಿಗಾಗಿ ಒಮ್ಮೆ ಹಳೆಯ ಕಾಗದ ಪತ್ರಗಳನ್ನು ನೋಡಬೇಕಾಗಿದೆ. ಸ್ವಲ್ಪ ತೊಂದರೆ ತೆಗೆದುಕೊಂಡು ಪೆಟ್ಟಿಗೆಯನ್ನು ತೊಗೊಂಡು ಬಾ ಮಗು."

ವಿಜಯ ಏಳುವ ಲಕ್ಷಣ ತೋರಿಸದೆ "ಇನ್ನೂ ಏನಾದರೂ ಕಾರಣವಿದೆಯೇ?" ಎಂದು ಕೇಳಿದಳು.

"ಹೌದು."

"ಏನದು" "

ರಾಸಬಿಹಾರಿಗೆ ಅಷ್ಟು ಹಿತವಲ್ಲವೆನಿಸಿದರೂ ಅದನ್ನು ತೋರಗೊಡಕೆ ಹೇಳಿದ—"ಬಾಯಿಬಿಟ್ಟು ನಿನಗೆ ಹೇಳಲು ಒಂದೇ ಕಾರಣವಲ್ಲ ಮಗು."

ಅಷ್ಟುಹೊತ್ತಿಗೆ ಸರಿಯಾಗಿ ಲೆಕ್ಕದ ಪುಸ್ತಕ ಒಯ್ಯಲು ಗುಮಾಸ್ತ ಒಳಗೆ ಬಂದ. ವಿಜಯ ದಾಕ್ಷಿಣ್ಯದಿಂದ ಹೇಳಿದಳು—"ಈಗ ಆಗಲಿಲ್ಲ ಮಧ್ಯಾನ್ಹ ಬಂದು ತೊಗೊಂಡುಹೋಗಿ."

"ಅಪ್ಪಣೆ" ಎಂದು ಗುಮಾಸ್ತ ಹಿಂದಿರುಗುತ್ತಿದ್ದ. ಅಷ್ಟರಲ್ಲೇ ವಿಜಯ ಅವನನ್ನು ಕರೆದು ಕೇಳಿದಳು—"ಈ ಹೊಸ ಆಳು ಎಷ್ಟು ದಿನ ದಿಂದ ಕೆಲಸದಲ್ಲಿದ್ದಾನೆಂದು ಗೊತ್ತಿದೆಯೇ ?"

"ಮೂರು ತಿಂಗಳಾಗಿರಬಹುದು."

"ಎಷ್ಟಾದರೂ ಆಗಿರಲಿ. ಇನ್ನು ಅವನು ಬೇಕಾಗಿಲ್ಲ. ಈ ತಿಂಗ ಳಲ್ಲಿ ಇನ್ನೂ ಇಪ್ಪತ್ತು ದಿನ ಬಾಕಿ ಇದೆ. ಅದರ ಸಂಬಳವನ್ನೂ ಸೇರಿಸಿ ಲೆಕ್ಕಾಚಾರ ಮಾಡಿ ಅವನನ್ನು ಕಳುಹಿಸಿಬಿಡಿ."

ಗುಮಾಸ್ತ ಆಶ್ಚರ್ಯದಿಂದ ನೋಡುತ್ತ ನಿಂತ. ಇದಕ್ಕೆ ಕಾರಣ ವೇನೆಂದು ಕೇಳಬೇಕೆನಿಸಿದರೂ, ಅವನಿಗೆ ಕೇಳುವ ಧೈರ್ಯವಾಗಲಿಲ್ಲ.

ವಿಜಯ ಇದನ್ನು ತಿಳಿದು ಹೇಳಿದಳು—"ತಪ್ಪೇನೂ ಇಲ್ಲದಿದ್ದರೂ ಅವನು ನನಗೆ ಸರಿಹೋಗುವುದಿಲ್ಲ. ಆದ್ದರಿಂದ ಬಿಟ್ಟಿದ್ದೇನೆ. ಸಂಬಳ ಮಾತ್ರ ಈ ತಿಂಗಳು ಪೂರಾ ಕೊಟ್ಟುಬಿಡಿ."

ರಾಸಬಿಹಾರಿಯ ಮುಖ ಕೆಂಪಾಯಿತು. ಆದರೂ ಕೂಡಲೆ ಅವನು ಸುದಾರಿಸಿಕೊಂಡು ನಗುತ್ತಾ ಹೇಳಿದ—"ಏನೂ ತಪ್ಪಿಲ್ಲದೆ ಒಬ್ಬರ ಅನ್ನ ಕಸಿದುಕೊಳ್ಳುವುದು ಸರಿಯೇ........ಮಗು ?"

ವಿಜಯ ಏನೂ ಉತ್ತರ ಹೇಳದೆ ಸುಮ್ಮನಿದ್ದಳು. ಇದನ್ನು ನೋಡಿ ಗುಮಾಸ್ತ ಹೇಳಿದ—"ಹಾಗಾದರೆ ಅವನನ್ನು........"

"ಹೂಂ, ಕಳುಹಿಸಿಬಿಡಿ........ಇವತ್ತೇ" ಎಂದು ವಿಜಯ ಲೆಕ್ಕ ನೋಡುತ್ತ ಕುಳಿತಳು. ಗುಮಾಸ್ತೆ ಇನ್ನೂ ಸ್ವಲ್ಪಹೊತ್ತು ನಿಂತಿದ್ದ. ಅವನು ಹೊರಟುಹೋದಮೇಲೆ ಸ್ವಲ್ಪಹೊತ್ತು ಸುಮ್ಮನಿದ್ದು ರಾಸಬಿಹಾರಿ ತಾನು ಕೇಳಿದ್ದನ್ನೇ ಇನ್ನೊಂದು ಸಲ ಕೇಳಿದ—"ಸ್ವಲ್ಪ ತೊಂದರೆ ತೊಗೊಂಡು ಮೇಲೆ ಹೋದ ಹೊರತು ಕೆಲಸ ನಡೆಯುವುದಿಲ್ಲ ಮಗು.

ಹಳೆಯ ಕಾಗದ ಪತ್ರಗಳನ್ನು ಮೊದಲಿನಿಂದ ಕೊನೆಯವರೆಗೂ ಒಮ್ಮೆ ಓದ ಬೇಕಾಗಿದೆ."

"ಏಕೆ ?" ವಿಜಯ ಮುಖವೆತ್ತದೆ ಕೇಳಿದಳು.

ರಾಸಬಿಹಾರಿ ಗಂಭೀರವಾಗಿ ಉತ್ತರ ಹೇಳಿದ—"ಏನೋ ವಿಶೇಷ ಕಾರಣವಿದೆಯೆಂದು ಹೇಳಿದೆನಲ್ಲ. ಮತ್ತೆ ಮತ್ತೆ ಅದೇ ಮಾತನ್ನು ಹೇಳಲು ನನಗೆ ಪುರಸೊತ್ತಿಲ್ಲ"

ಅದೇನೋ ಸರಿ. ಆದರೆ ನೀವು ಒಂದಾದರೂ ಸರಿಯಾದ ಕಾರಣ ಹೇಳಲೇ ಇಲ್ಲವಲ್ಲ ?" ಅವಳು ಮೊದಲಿನಂತೆಯೇ ಹೇಳಿದಳು.

"ಹೇಳದ ಹೊರತು ನೀನು ಹೇಳುವುದಿಲ್ಲವೇ ?" ಎಂದು ಅವನು ಒಂದು ಕ್ಷಣ ನೋಡಿ ನಿರಾಶನಾಗಿ ಹೇಳಿದ—"ಅಂದರೆ ನೀನು ನನ್ನನ್ನು ನಂಬುವುದಿಲ್ಲವೆಂದಹಾಗಾಯಿತು."

ವಿಜಯಳು ಏನೂ ಉತ್ತರ ಕೊಡದೆ ತನ್ನ ಕೆಲಸದಲ್ಲಿ ತೊಡಗಿದ್ದಳು. ಅವಳ ಮೌನ ಸ್ಪಷ್ಟವಾಗಿತ್ತು. ಸಿಟ್ಟಿನಿಂದ ರಾಸಬಿಹಾರಿಯ ಮುಖ ಕೆಂಪಗಾಯಿತು. ಅವನು ಕೋಲನ್ನು ಮೇಜಿನ ಮೇಲೆ ಕುಟ್ಟಿ ಹೇಳಿದ—"ಅದೇಕೆ ನನ್ನನ್ನು ಅವಮಾನಮಾಡುತ್ತೀ ವಿಜಯ? ನನ್ನಲ್ಲೇಕೆ ನಿನಗೆ ನಂಬಿಕೆಯಿಲ್ಲ ವಿಜಯ ?"

ವಿಜಯಳು ಶಾಂತಕಂಠದಿಂದ ಹೇಳಿದಳು—"ನಿಮಗೂ ನನ್ನಲ್ಲಿ ನಂಬಿಕೆ ಇಲ್ಲ. ನನ್ನ ದುಡ್ಡಿನಿಂದೇ ನನ್ನ ಮೇಲೇ ಗೂಢಚಾರರನ್ನಿಟ್ಟರೆ ನನ್ನ ಮನಸ್ಸು ಹೇಗಾಗಬಹುದೆಂದು ನಿಮಗೆ ಗೊತ್ತಿದೆ. ನನ್ನ ಆಸ್ತಿಯ ಮೂಲ ಕಾಗದ ಪತ್ರಗಳನ್ನು ಕೊಡಲು ನಾನು ಹಿಂದು ಮುಂದು ನೋಡಿದರೆ ಅದು ತಪ್ಪೆ? ಇದು ನಿಮ್ಮ ಅವಮಾನವೇ ?"

ರಾಸಬಿಹಾರಿ ಕೂಡಲೆ ಬೆಪ್ಪಾಗಿ ನಿಂತುಬಿಟ್ಟ. ಅವನ ಇಂತಹ ಚಾಲೂಕು, ಕಲಿಕತ್ತೆಯಂತಹ ಪಟ್ಟಣದಲ್ಲಿ ಬೆಳೆದ ಹುಡುಗಿಗೆ ತಿಳಿದು ಹೋಗುತ್ತೆಂಬುದು ಅವನ ಮೇಧಾವಿತನಕ್ಕೆ ತಿಳಿಯಲಿಲ್ಲ. ಇದನ್ನು ಇಷ್ಟು ನಿಸ್ಸಂಕೋಚವಾಗಿ ತನ್ನ ಎದುರಿಗೇ ಅವಳು ಹೇಳುತ್ತಾಳೆಂಬುದು ಅವನಿಗೆ ಸ್ವಪ್ನದಲ್ಲೂ ತಿಳಿದಿರಲಿಲ್ಲ.

ರಾಸಬಿಹಾರಿ ಬಹಳ ಹೊತ್ತು ದಿಙ್ಮೂಢನಾಗಿ ಸುಮ್ಮನೆ ಕುಳಿತಿದ್ದು ಮತ್ತೊಮ್ಮೆ ಯುದ್ಧಕ್ಕೆ ಟೊಂಕಕಟ್ಟಿ ಎದ್ದು ನಿಂತು, ಕೊನೆಯ ಅಸ್ತ್ರವನ್ನು

ಪ್ರಯೋಗಿಸಲು ಹೊರಗೆ ಹೋಗಿ ಗಟ್ಟಿಯಾಗಿ ಕೂಗಿ ಹೇಳಿದ—"ನನ ನೂಾ ಲಿಯ ಗೌರವವನ್ನು ಕಾಪಾಡುವುದಕ್ಕಾಗಿಯೇ ನಾನಿದೆಲ್ಲ ಮಾಡಿದೆ. ಹಿರಿಯ ನಾದ್ದರಿಂದಲೇ ನಿನ್ನ ನಡೆನುಡಿಯ ವಿಚಾರದಲ್ಲಿ ನಾನು ನಿಗಾ ಇಡಬೇಕಾ ಯಿತು. ಗುರುತು ಪರಿಚಯವಿಲ್ಲದೆ ಒಬ್ಬ ಹತಭಾಗ್ಯನನ್ನು ಮೈದಾನದಿಂದ ಕರೆಸಿ ಅವನ ಜೊತೆಗೆ ನೀನು ನೆಕ್ಕೆಯೆಲ್ಲ ಕಳೆದೆ. ಅದರ ರಹಸ್ಯವೇನೆಂ ಬುದು ನನಗೆ ತಿಳಿಯದೇ ? ಅಷ್ಟೇ ಅಲ್ಲ. ಅವತ್ತು ಅರ್ಧರಾತ್ರಿಯವರೆಗೂ ಅವನ ಜೊತೆಗೆ ಹಾಸ್ಯ-ಕುಚೋದ್ಯ, ಹರಟೆ ಹೊಡೆದರೂ ನಿನಗೆ ಸಾಕಾಗ ಲಿಲ್ಲ. ಅಂದು ರಾತ್ರಿ ಅವನು ಕಲಿಕತ್ತೆಗೆ ಹೋಗದೆ ಏನೋ ನೆಪ ತೆಗೆದುಕೊಂಡು ಇಲ್ಲೇ ಉಳಿದ. ಅದರಿಂದ ನಿಮಗೇನೂ ಅವಮಾನವಾಗ ದಿದ್ದರೂ, ನಮಗೆ ಹೊರಗೆ ಮುಖ ತೋರಿಸಲು ನಾಚಿಕೆಯಾಗುತ್ತೆ. ಹೊರಗೆ ತಲೆಯೆತ್ತುವಂತಿಲ್ಲ"

ಮಾತು ಇಷ್ಟು ಮರ್ಮಸ್ಪರ್ಶಿಯಲ್ಲದಿದ್ದರೆ, ವಿಜಯ ಅಪಮಾನ ಮತ್ತು ಸಿಟ್ಟಿನಿಂದ ಕೂಗಿ ಉತ್ತರ ಹೇಳುತ್ತಿದ್ದಳು. ಆದರೆ ಇದರ ಆಘಾತ ಬಲವಾಗಿ ಅವಳು ಜಡದಂತೆ ಕುಳಿತುಬಿಟ್ಟಳು.

ರಾಸಬಿಹಾರಿಗೆ ತನ್ನ ಬ್ರಹ್ಮಾಸ್ತ್ರದ ಮಹಿಮೆ ಅವಳ ಮೇಲೆ ಜಯ ಪ್ರದವಾಗಿ ಪರಿಣಾಮವಾದದ್ದು ತಿಳಿದು ಸಂತೋಷವಾಯಿತು! ಅವನು ಸ್ವಲ್ಪ ಹೊತ್ತು ಸುಮ್ಮನಿದ್ದು ಹೇಳಿದ—" ಹಾಗಾದರೆ ಇವೆಲ್ಲ ಒಳ್ಳೆಯದೇ? ಅಥವಾ ಇದನ್ನು ತಪ್ಪಿಸುವ ಪ್ರಯತ್ನ ಮಾಡುವುದು ನನ್ನ ಕರ್ತವ್ಯವಲ್ಲವೇ?

ವಿಜಯಳು ಸುಮ್ಮನಿದ್ದುದನ್ನು ನೋಡಿ ಅವನು ಮತ್ತೆ ಜೋರಾಗಿ ಹೇಳಿದ—" ಉಹುಂ. ಸುಮ್ಮನಿದ್ದರೆ ಸಾಧ್ಯವಿಲ್ಲ. ಇದಕ್ಕೆ ನೀನು ಉತ್ತರ ಕೊಡಲೇಬೇಕು."

ಇದಕ್ಕೂ ಅವಳು ಉತ್ತರ ಕೊಡದಿದ್ದುದನ್ನು ನೋಡಿ ಅವನು ಮೇಜಿನ ಮೇಲೆ ಕೋಲನ್ನು ತಟ್ಟಿ ಹೇಳಿದ—" ಉಹುಂ, ಸುಮ್ಮನಿದ್ದರೆ ಸಾಧ್ಯವಿಲ್ಲ. ಇವೆಲ್ಲ ಬಹು ಮುಖ್ಯವಾದ ವಿಷಯಗಳು........ಇದಕ್ಕೆ ಉತ್ತರ ಕೊಡಲೇ ಬೇಕು."

ಇಷ್ಟುಹೊತ್ತಿನಮೇಲೆ ವಿಜಯ ಮುಖವೆತ್ತಿ ನೋಡಿದಳು. ಅವಳ ಭುಜ ಮತ್ತು ತುಟಿಗಳು ನಡುಗಿದುವು. ಅವಳು ನಿಧಾನವಾಗಿ ಹೇಳಿದಳು-

“ವಿಷಯಗಳಿಷ್ಟೇ ಮುಖ್ಯವಾಗಲಿ, ಸುಳ್ಳು ಮಾತಿಗೆ ನಾನೇನು ಉತ್ತರ ಕೊಡಲಿ?”

ರಾಸಬಿಹಾರಿ ತೀವ್ರವಾಗಿ ಕೇಳಿದ—“ಹಾಗಾದರೆ ನೀನು ಇವೆಲ್ಲ ಸುಳ್ಳೆಂದು ಹಾರಿಸಿಬಿಡಬೇಕೆನ್ನುತ್ತೀಯೋ?”

ಉತ್ತರ ಹೇಳಿದಳು—“ನಾನೊಂದೂ ಹಾರಿಸಬೇಕೆನ್ನುವುದಿಲ್ಲ ಕಕ್ಕ; ಇವೆಲ್ಲ ಸುಳ್ಳೆಂದು ಹೇಳುತ್ತೇನೆ. ಇದಲ್ಲದೆ ಇದು ಶುದ್ಧ ಸುಳ್ಳೆಂಬುದು ನಿನಗೆ ತಿಳಿದಿದೆಯೆಂದೂ ಹೇಳಬಯಸುತ್ತೇನೆ.”

ರಾಸಬಿಹಾರಿ ಚಟಪಟಿಸಿದ. ಮೊದಲಿನ ಮಾತಿಗೆ ಅವನಿಗೇನೂ ಅನಿಸಲಿಲ್ಲ. ಕೊನೆಯ ಮಾತು ಅವನಿಗೆ ರೇಗಿಸಿತು. ವಿಜಯಳು ಯಾವಾಗಲೂ ತನ್ನೆದುರಿಗೇ ತನ್ನನ್ನು ಮಿಥ್ಯಾವಾದಿ, ಅಪಪ್ರಚಾರಕ ನೆನ್ನುತ್ತಾಳೆಂಬುದು ಅವನ ಕಲ್ಪನೆಯನ್ನೂ ಮೀರಿತ್ತು. ಅವನ ಮಾತು ಅವನ ಬಾಯಲ್ಲಿ ಬರದೆ, ವಿಜಯಳ ಮಾತನ್ನೇ ಅವನು ತಿರುಗಿಸಿ ಕೇಳಿದ “ಇದು ಸುಳ್ಳೆಂಬುದು ಎಲ್ಲರಿಗಿಂತ ಹೆಚ್ಚಾಗಿ ನನಗೇ ಗೊತ್ತಿದೆಯೇ?”

ವಿಜಯಳು ಎದ್ದು ನಿಂತು ಹೇಳಿದಳು—“ನೀವು ದೊಡ್ಡವರು. ಈ ವಿಷಯದಲ್ಲಿ ನಿಮ್ಮೊಂದಿಗೆ ಚರ್ಚೆಮಾಡುವ ಇಚ್ಛೆ ನನಗಿಲ್ಲ. ಕಾಗದ ಪತ್ರಗಳು ಈಗ ಬೇಡ. ವಾಜ್ಯ-ವ್ಯವಹಾರದ ಅಗತ್ಯ ಬಿದ್ದಾಗ ನಿಮಗೆ ಹೇಳಿಕಳಿಹಿಸುತ್ತೇನೆ” ಎಂದು ಪಕ್ಕದ ಬಾಗಿಲಿನಿಂದ ಅವಳು ಒಳಗೆ ಹೊರಟುಹೋದಳು.

೨೪

ಮರುದಿನ ಬೆಳಿಗ್ಗೆಯೇ ಹೇಗೋ ಮಾಡಿ ಕಲಿಕತ್ತೆಗೆ ಓಡಿಹೋಗಿ ಆತ್ಮರಕ್ಷಣೆ ಮಾಡಿಕೊಳ್ಳಬೇಕೆಂದು ಮೊದಲು ವಿಜಯಳಿಗನಿಸಿತು. ಆದರೆ ಆ ಉದ್ವೇಗ ತುಸು ಕಡಿಮೆಯಾದಕೂಡಲೆ ‘ಇದರಿಂದ ಸಮಸ್ಯೆ ಇನ್ನೂ ಜಟಿಲವಾಗುವುದೆಂದೂ, ಅಪವಾದ ಬೆಳೆದು ಕಲಿಕತ್ತೆಯ ವಾತಾವರಣವನ್ನು ಕೆಡಿಸಿಬಿಡುವುವೆಂದೂ’ ಯೋಚಿಸಿದಳು. ಆಗ ಕಲಿಕತ್ತೆಯ ಸಮಾಜದಲ್ಲಿ ಮುಖವೆತ್ತಿಕೊಂಡು ತಿರುಗಾಡುವುದಾದರೂ ಹೇಗೆ? ಈ ಹಳ್ಳಿಯಲ್ಲಂತೂ ಮನೆ ಬಿಟ್ಟು ಹೊರಗೆ ಹೋಗುವುದೂ ಸಾಧ್ಯವಿಲ್ಲ. ರಾಸಬಿಹಾರಿ ತನ್ನನ್ನು ಬಿಟ್ಟುಬಿಡಲು ಹೀಗೆ ಉಪಾಯ ಮಾಡಿಲ್ಲವೆಂದೂ, ತನ್ನನ್ನು ಸಂಗ್ರಹಿ ಸುವುದಕ್ಕೇ ಅಪವಾದವನ್ನು ಹುಟ್ಟಿಸಿದ್ದಾನೆಂದೂ, ಆದ್ದರಿಂದ ತನ್ನ

ಅಭೀಷ್ಟ ವ್ಯರ್ಥವಾಯಿತೆಂದು ತಿಳಿದ ಹೊರತು ಅವನು ಅದನ್ನು ಬಹಿರಂಗ ಪಡಿಸುವುದಿಲ್ಲವೆಂದೂ ಅವಳಿಗೆ ಚೆನ್ನಾಗಿ ಗೊತ್ತಿದ್ದರೂ, ಎರಡುದಿನದ ಮೇಲೆ ಲೆಕ್ಕದಪುಸ್ತಕಕ್ಕೆ ಸಹಿ ಹಾಕಿಸಿಕೊಂಡುಹೋಗಲು ಕಚೇರಿಯ ಗುಮಾಸ್ತೆ ಬಂದಾಗ, ತನಗೆ ಮೈಯಲ್ಲಿ ಸ್ವಸ್ಥವಿಲ್ಲವೆಂಬ ನೆಪಹೇಳಿ ಲೆಕ್ಕದ ಪುಸ್ತಕವನ್ನು ಮೇಲಕ್ಕೆ ತರಿಸಿಕೊಂಡಳು. ಒಬ್ಬ ಕೆಲಸಗಾರನಿಗೆ ಮುಖ ತೋರಿಸುವುದಕ್ಕೂ ಅವಳಿಗೆ ನಾಚಿಕೆಯಾಯಿತು. ಈ ಮಾತು ಅವನ ಕಿವಿಗೆಲ್ಲಿ ಬಿದ್ದು ತನ್ನನ್ನು ಉದಾಸೀನದೃಷ್ಟಿಯಿಂದ ನೋಡುತ್ತಾನೋ ಎಂದು ಅವಳು ಹೆದರಿದಳು.

ಅವಳಿಗೆ ಈ ಹೆದರಿಕೆ ಇದ್ದರೂ, ತನ್ನ ತಂದೆಯ ಕಾಗದವನ್ನು ತೆಗೆದುಕೊಂಡು ನರೇಂದ್ರ ಬರಲೆಂಬ ಹೆಬ್ಬಯಕೆಯೂ ಇತ್ತು. ಆದರೆ ಐದಾರು ದಿನಗಳಮೇಲೆ ಈ ಪತ್ರಗಳ ಕುತೂಹಲ ಕಡಿಮೆಯಾಯಿತು. ಏಕೆಂದರೆ ಕಾಗದಗಳು ಟಪಾಲು ಮೂಲಕ ಬಂದವು; ನರೇಂದ್ರ ಬರಲಿಲ್ಲ. ಅವನೇಕೆ ಬರಲಿಲ್ಲವೆಂಬುದನ್ನು ಊಹಿಸಲು ತಡವಾಗಲಿಲ್ಲ. ರಾಸಬಿಹಾರಿ ಏನಾದರೂ ನೆಪ ಮಾಡಿಕೊಂಡು ಈ ಮಾತನ್ನು ನರೇಂದ್ರನಿಗೆ ತಿಳಿಸಿ ಅವನು ಮತ್ತೆ ತನ್ನ ಮನೆಗೆ ಬರದಂತೆ ಮಾಡಿರುತ್ತಾನೆಂದು ಅವಳು ಸರಿಯಾಗಿ ಊಹಿಸಿದಳು. ಕಾಗದವನ್ನು ಕೈಯಲ್ಲಿ ಹಿಡಿದುಕೊಂಡು ವಿಜಯ ಯೋಚಿಸತೊಡಗಿದಳು: ಇಷ್ಟು ಸುಲಭವಾಗಿ ಅವನು ಈ ಮನೆಯ ಕಡೆ ಬರದಂತೆ ಆಗಿ, ಈ ಸುಳ್ಳುಅಪವಾದದ ಭಯವನ್ನು ಇಷ್ಟು ಅನಾಯಾಸವಾಗಿ ನರೇಂದ್ರನಿಗೆ ತೋರಿಸಿ ಅವನನ್ನು ದೂರ ಮಾಡಿದಮೇಲೆ, ಈ ಕೆಟ್ಟ ಹೆಸರಿನ ಹೊರೆಯನ್ನು........ಅದೆಷ್ಟೇ ಸಳ್ಳಾಗಿರಲಿ ........ಹೊತ್ತು ತಾನು ಕಾಲ ಕಳೆಯುವುದಾದರೂ ಹೇಗೆ ? ಅದು ನಿಜವಾದದ್ದಕ್ಕಿಂತ ಹೆಚ್ಚಾಗಿ ತನ್ನನ್ನು ಮಣ್ಣುಗೂಡಿಸುತ್ತೆ.

ಹೀಗೆ ಬೆಪ್ಪಾಗಿ ಕುಳಿತು ಅವಳೇನೇನೋ ಯೋಚಿಸತೊಡಗಿದಳು. ಮತ್ತೆ ಮತ್ತೆ ಕಣ್ಣೊರೆಸಿಕೊಂಡು ಎದ್ದು ನಿಂತು, ತನ್ನ ಪರಲೋಕವಾಸಿಯಾದ ತಂದೆಯ ಕಾಗದವನ್ನು ತಲೆಯಮೇಲಿಟ್ಟುಕೊಂಡು ಬಿಕ್ಕಿ ಬಿಕ್ಕಿ ಅಳತೊಡಗಿದಳು. ಅವಳು ಆ ಎರಡು ಕಾಗದಗಳನ್ನು ಓದಲು ಎಷ್ಟು ಪ್ರಯತ್ನ ಮಾಡಿದರೂ ಕಣ್ಣೀರಿನಿಂದ ಅವಳ ದೃಷ್ಟಿ ಮಸಕಾಗಿತ್ತು. ಕೊನೆಗೆ ಬಹಳ ಪ್ರಯತ್ನಮಾಡಿ ಓದಿ ಮುಗಿಸಿದಮೇಲೆ ತಂದೆಯ ಮನೋಗತ ಅವಳಿಗೆ ತಿಳಿ

ಯದಿರಲಿಲ್ಲ. ಇದಕ್ಕಾಗಿಯೇ ತಂದೆ ನರೇಂದ್ರನನ್ನು ಮನುಷ್ಯನನ್ನಾಗಿ ಮಾಡ ಬಯಸಿದನೆಂದೂ ಇದು ಇನ್ನಾರಿಗೆ ಗೊತ್ತಿಲ್ಲದಿದ್ದರೂ ರಾಸಬಿಹಾರಿಗೆ ತಿಳಿದಿತ್ತೆಂಬುದು ಅವಳಿಗೆ ಬಹಳ ಚೆನ್ನಾಗಿ ಅರ್ಥವಾಯಿತು.

ಇನ್ನೂ ಐದಾರು ದಿನಗಳು ಕಳೆದವು. ಒಂದು ದಿನ ಬೆಳಿಗ್ಗೆ ನಿದ್ದೆಯಿಂದ ಎಚ್ಚೆತ್ತ ಕೂಡಲೇ ಮನೆಯಲ್ಲಿ ಕೆಲಸಗಾರರು ಕೆಲಸಮಾಡುತ್ತಿದ್ದುದೂ, ಸುಣ್ಣ ಹಚ್ಚುತ್ತಿದ್ದುದೂ ಕಂಡಿತು. ಅದಕ್ಕೆ ಕಾರಣವನ್ನು ಯೋಚಿಸಿದ ಕೂಡಲೇ ಅವಳು ಚಡಪಡಿಸಿದಳು. ಪೂರ್ಣಿಮಾಕ್ಕೆ ಇನ್ನು ಕೆಲವೇ ದಿನಗಳು ಉಳಿದಿದ್ದವು. ಅವತ್ತೆಲ್ಲ ಬಹಳ ಚಟುವಟಿಕೆಯಿಂದ ಕೆಲಸಗಳು ನಡೆದವು. ಯಾರಪ್ಪಣೆಯಂತೆ ಈ ಕೆಲಸಗಳು ನಡೆಯುತ್ತಿವೆಯೆಂದಾಗಲೀ, ಅದಕ್ಕೆ ತನ್ನ ಒಪ್ಪಿಗೆಯನ್ನೇಕೆ ಪಡೆಯಲಿಲ್ಲವೆಂದಾಗಲೀ ಅವಳು ಯಾರನ್ನೂ ಕೇಳಲಿಲ್ಲ.

ಅಂದು ಸಂಜೆ ಅವಳು ಕನ್ನಯ್ಯಸಿಂಹನನ್ನು ಜೊತೆಗೆ ಕರೆದುಕೊಂಡು ನದೀತೀರದಲ್ಲಿ ತಿರುಗಾಡಲು ಹೋದಳು. ಅಕಸ್ಮಾತ್ ದಯಾಳರು ಬಂದರು. "ನಿನ್ನನ್ನೇ ಹುಡುಕುತ್ತಿದ್ದೆನಮ್ಮ" ಎಂದರು.

ವಿಜಯಳು ಆಶ್ಚರ್ಯವಾಗಿ ಅದೇಕೆಂದು ಕೇಳಿದಳು. ಅವರು ಹೇಳಿದರು—"ಮಗು, ಇನ್ನು ಕಾಲಾವಕಾಶವಿಲ್ಲ. ಆಹ್ವಾನಪತ್ರಿಕೆಗಳನ್ನು ಅಚ್ಚು ಮಾಡಬೇಕು. ನಿಮ್ಮ ಬಂಧುಬಳಗದವರನ್ನು ಆಹ್ವಾನಿಸಬೇಕಾಗಿದೆ. ಆದ್ದರಿಂದ ಅವರ ಹೆಸರು ವಿಳಾಸ ತಿಳಿದರೆ........"

ವಿಜಯಳು ಸ್ವಲ್ಪ ಕಟುವಾಗಿಯೇ ಕೇಳಿದಳು—"ನನ್ನ ಹೆಸರಿನಲ್ಲೇ ಲಗ್ನಪತ್ರಿಕೆಗಳನ್ನು ಅಚ್ಚುಹಾಕಿಸುತ್ತೀರೇನು?"

ಇದು ವಿಜಯಳಿಗೆ ಸುಖ ಕೊಡುವ ಲಗ್ನವಲ್ಲವೆಂಬುದು ದಯಾಳರಿಗೆ ಗೊತ್ತಿತ್ತು. ಅವರು ಸಂಕೋಚದಿಂದ ಹೇಳಿದರು—"ಇಲ್ಲ ಮಗು. ನಿನ್ನ ಹೆಸರಿನಲ್ಲೇಕೆ ಅಚ್ಚುಹಾಕಿಸಬೇಕು? ರಾಸಬಿಹಾರಿಗಳೇ ವಧೂವರರಿಬ್ಬರಿಗೂ ರಕ್ಷಕರು. ಅವರ ಹೆಸರಿನಲ್ಲೇ ಆಹ್ವಾನಮಾಡಬೇಕೆಂದು ವ್ಯವಸ್ಥೆಯಾಗಿದೆ."

"ಅವರೇನೋ ವ್ಯವಸ್ಥೆ ಮಾಡಿದವರು?"

"ಹೌದು, ಅವರೇ ವ್ಯವಸ್ಥೆ ಮಾಡಿದ್ದಾರೆ."

"ಹಾಗಾದರೆ ಇದನ್ನೂ ಅವರೇ ವ್ಯವಸ್ಥೆ ಮಾಡಲಿ. ನನಗೆ ಬಂಧು ಬಳಗದವರ್ಯಾರೂ ಇಲ್ಲ."

ದಯಾಳರಿಗೆ ಇದಕ್ಕೆ ಉತ್ತರ ಕೊಡಲು ಸಾಧ್ಯವಾಗಲಿಲ್ಲ. ನಡೆಯುತ್ತಿದ್ದಂತೆ ಮಾತುಕತೆಯಾಗುತ್ತಿತ್ತು. ವಿಜಯಳು ಕೇಳಿದಳು—"ನೀವು ನರೇಂದ್ರ ಬಾಬುಗಳಲ್ಲಿ ಕೊಟ್ಟ ಕಾಗದಗಳನ್ನು ಓದಿದ್ದೀರಾ ?"

"ಇಲ್ಲ ಮಗು. ಇನ್ನೊಬ್ಬರ ಕಾಗದವನ್ನು ನಾನೇಕೆ ಓದಲಿ? ನರೇಂದ್ರರ ತಂದೆಯ ಹೆಸರನ್ನು ನೋಡಿಯೇ 'ಇದು ಅವರಿಗೆ ಸೇರಿದ್ದು, ಅವರಿಗೆ ಕೊಡಬೇ'ಕೆಂದುಕೊಂಡೆ. ನಿನ್ನನೊಂದು ಮಾತು ಕೇಳೋಣವೇನೋ ಎನಿಸಿತು. ಆದರೂ........ಏಕೆ, ಏನಾದರೂ ತಪ್ಪಾಯಿತೇನಮ್ಮ?"

ಅವರು ದಾಕ್ಷಿಣ್ಯಪಟ್ಟುಕೊಂಡಿದ್ದನ್ನು ನೋಡಿ ವಿಜಯಳು ಸ್ನೇಹದ ದನಿಯಲ್ಲಿ ಹೇಳಿದಳು—"ಅವರ ತಂದೆಯ ಪದಾರ್ಥವನ್ನು ನೀವು ಅವರಿಗೆ ಕೊಟ್ಟದ್ದು ಸರಿಯಾಯಿತು. ಅವರು ಈ ಸಂಬಂಧದಲ್ಲಿ ನಿಮ್ಮೊಂದಿಗೇನಾದರೂ ಹೇಳಿದರೇನು ?"

"ಉಹುಂ, ಏನೂ ಹೇಳಲಿಲ್ಲ. ಆದರೆ ಏನಾದರೂ ಬೇಕಾದರೆ ನಾಳೆಯೇ ಅವರನ್ನು ಕೇಳಿ ಹೇಳುತ್ತೇನೆ."

ವಿಜಯಳು ಆಶ್ಚರ್ಯದಿಂದ ಕೇಳಿದಳು—"ನಾಳೆಯೇ ಹೇಗೆ ತಿಳಿಸುತ್ತೀರಿ?"

"ಅದು ಸಾಧ್ಯವೆಂದು ತೋರುತ್ತೆ. ಈಚೆಗೆ ಅವರು ಪ್ರತಿನಿತ್ಯವೂ ನಮ್ಮ ಮನೆಗೆ ಬರುತ್ತಾರಲ್ಲ."

"ನಿಮ್ಮ ಹೆಂಡತಿಯ ಖಾಯಿಲೆ ಮತ್ತೆ ಹೆಚ್ಚಾಯಿತೇನು ? ನೀವಿದನ್ನು ನನಗೆ ತಿಳಿಸಲೇ ಇಲ್ಲವಲ್ಲ."

ಉಹುಂ, ಇಲ್ಲ ಈಗವಳು ಆರೋಗ್ಯವಾಗಿದ್ದಾಳೆ. ನರೇಂದ್ರನ ಚಿಕಿತ್ಸೆ ಮತ್ತು ದೇವರ ದಯೆ" ಎಂದು ಅವರು ಎರಡೂ ಕೈಯೆತ್ತಿ ನಮಸ್ಕಾರ ಮಾಡಿದರು.

ವಿಜಯಳಿಗೆ ಬಹಳ ಆಶ್ಚರ್ಯವಾಗಿ ಅವಳೊಂದುಕ್ಷಣ ದಯಾಳರ ಮುಖವನ್ನು ನೋಡಿ"ಆದರೂ ಅವರು ನಿತ್ಯ ಬರುತ್ತಾರೋ?" ಎಂದು ಕೇಳಿದಳು.

ದಯಾಳರು ಪ್ರಸನ್ನರಾಗಿ ಹೇಳಿದರು—"ಅಗತ್ಯವಿಲ್ಲದಿದ್ದರೂ ಹುಟ್ಟಿ ಬೆಳೆದ ಸ್ಥಳದ ಅಭಿಮಾನ ಬಿಡುತ್ತದೆಯೇನಮ್ಮ? ಅಲ್ಲದೆ, ಈಚೆಗೆ ಅವರಿಗೆ ಕಲಿಕತ್ತೆಯಲ್ಲಿ ಕೆಲಸಕಾರ್ಯಗಳು ಕಡಿಮೆ. ಅಲ್ಲಿ ಅವರ ಬಂಧು-ಬಳಗ

ದವರು ಯಾರೂ ಇಲ್ಲ. ಆದ್ದರಿಂದ ಸಂಜೆಗೆ ಅವರು ಇಲ್ಲಿಗೆಬರುತ್ತಾರೆ. ನನ್ನ ಹೆಂಡತಿಗಂತೂ ಅವರೆಂದರೆ ಮಗನಿದ್ದಂತೆ....ಅದಕ್ಕೆ ಯೋಗ್ಯನಾದ ಹುಡುಗ. ಮಾತಾಡುತ್ತಾ ಎಷ್ಟುದೂರ ಬಂದುಬಿಟ್ಟೆವಲ್ಲ ಮಗು, ಮನೆಗೂ ಬಂದು ಹೋಗಬಾರದೇಕೆ?"

"ನಡೆಯಿರಿ" ಎಂದು ಅವಳು ಹೊರಟಳು.

ದಯಾಳರು ಹೇಳಿದರು—"ನಾನಂತೂ ನನ್ನ ವಯಸ್ಸಿನಲ್ಲಿ ಇಂತಹ ನಿಷ್ಕಪಟಿ, ಮತ್ತು ಇಷ್ಟು ದೊಡ್ಡಮನುಷ್ಯರನ್ನು ನೋಡಲೇ ಇಲ್ಲ. ನಳಿನಿ ಬಿ.ಎ. ಪಾಸುಮಾಡಿ ಡಾಕ್ಟರ್ ಪರೀಕ್ಷೆ ಓದಬೇಕೆಂದು ಮಾಡಿದ್ದಾಳೆ. ಈ ವಿಷಯದಲ್ಲಿ ಅವರು ಅವಳಿಗೆಷ್ಟು ಪ್ರೋತ್ಸಾಹ ಕೊಡುತ್ತಾರೆ, ಅದೆಷ್ಟು ಸಹಾಯ ಕೊಡುತ್ತಾರೆಂಬುದನ್ನು ಹೇಳುವಂತಿಲ್ಲ."

ವಿಜಯಳು ಚಕಿತಳಾದಳು. ಕಲಿಕತ್ತೆಯಿಂದ ಇಷ್ಟುದೂರಬಂದು ಪ್ರತಿದಿನ ಸಂಜೆಯನ್ನು ಇಲ್ಲಿ ಕಳೆಯುವುದಕ್ಕೆ ಈ ಸಂಶಯವೇ ಇದುವರೆಗೂ ಅವಳ ಮನಸ್ಸಿನಲ್ಲಿ ವಿಷದಂತೆ ಕೊರೆಯುತ್ತಿತ್ತು. ದಯಾಳರು ತಿರುಗಿ ನೋಡಿ ಸ್ನೇಹಾರ್ದ್ರ ಕಂಠದಲ್ಲಿ ಹೇಳಿದರು—"ಹಾಗಾದರೆ ಈಗ ಇನ್ನು ಹೋಗುವುದು ಬೇಡಮ್ಮ. ನೀನು ಬಹಳ ಆಯಾಸ ಗೊಂಡಿದ್ದೀ."

"ಉಹುಂ, ಇಲ್ಲ; ನಡೆಯಿರಿ."

ಅವಳ ನಡಿಗೆಯನ್ನು ನೋಡಿಯೇ ಅವಳಿಗೆ ಆಯಾಸವಾಗಿದೆಯೆಂದು ದಯಾಳರು ಭಾವಿಸಿದರು. ಅವಳ ಮುಖವನ್ನವರು ನೋಡಿದ್ದರೆ, ಈ ಮಾತು ಅವರ ಬಾಯಲ್ಲೇ ಬರುತ್ತಿರಲಿಲ್ಲ.

ಅವಳು ಪ್ರತಿ ಹೆಜ್ಜೆಯಲ್ಲೂ ಆ ಗಟ್ಟಿ ನೆಲವನ್ನು ಹೇಗೆ ದಾಟುತ್ತಿದ್ದಳೆಂಬುದರ ಅರಿವು ದಯಾಳರಿಗಿರಲಿಲ್ಲ. ಆದ್ದರಿಂದ ಅವರು ಹೇಳುತ್ತಾ ಹೊರಟರು—"ನರೇಂದ್ರನ ಸಹಾಯದಿಂದ ಇಷ್ಟು ಸ್ವಲ್ಪ ದಿನಗಳಲ್ಲೇ ನಳಿನಿ ಅನೇಕ ಪುಸ್ತಕಗಳನ್ನು ಓದಿ ಮುಗಿಸಿದ್ದಾಳೆ. ಓದು-ಬರಹದಲ್ಲಿ ಇಬ್ಬರಿಗೂ ಅಗಾಧ ಆಸಕ್ತಿ."

ಬಹಳ ಹೊತ್ತು ನಿಶ್ಶಬ್ದವಾಗಿ ನಡೆದಮೇಲೆ ವಿಜಯಳು ಬಹಳ ಪ್ರಯತ್ನದಿಂದ ತನ್ನನ್ನು ಸುಧಾರಿಸಿಕೊಂಡು ಕೇಳಿದಳು—"ನಿಮಗೆ ಇನ್ನೇನೂ ಸಂಶಯವಿಲ್ಲವೇ?"

ದಯಾಳರು ಹೆಚ್ಚು ಆಶ್ಚರ್ಯವನ್ನು ತೋರದೆ ಸಹಜರೀತಿಯಲ್ಲಿ ಕೇಳಿದರು—"ಎಂತಹ ಸಂಶಯ ಮಗು?"

ವಿಜಯ ಕೂಡಲೆ ಇದಕ್ಕೆ ಉತ್ತರಕೊಡದಾದಳು. ಅವಳ ಹೃದಯ ಬಡಿದುಕೊಳ್ಳುತ್ತಿತ್ತು. ಸ್ವಲ್ಪ ಹೊತ್ತಿನಮೇಲೆ ಸುದಾರಿಸಿಕೊಂಡು ಹೇಳಿದಳು —"ನಳಿನಿಯ ಸಂಬಂಧವಾಗಿ ಅವರ ಮನೋಭಾವವನ್ನು ಸ್ಪಷ್ಟವಾಗಿ ತಿಳಿದುಕೊಳ್ಳುವುದುಚಿತವೆಂದು ನನಗೆ ತೋರುತ್ತೆ."

ದಯಾಳರು ಅನುಮೋದಿಸುತ್ತಾ ಹೇಳಿದರು—"ಸರಿಯೇ, ಆ ಸಮಯವಿನ್ನೂ ಮೀರಿಲ್ಲಮ್ಮ. ಅವರಿಬ್ಬರ ಸಂಬಂಧ ಇನ್ನೂ ಸ್ವಲ್ಪ ಬೆಳೆ ಯುವವರೆಗೂ ಏನೂ ಮಾಡದಿರುವುದೇ ಸರಿ ಎಂದು ನನಗನಿಸುತ್ತದೆ."

ಇದು ದಯಾಳರ ಮನಸ್ಸಿನಲ್ಲೂ ಹುಟ್ಟಿದೆಯೆಂಬುದು ವಿಜಯಳಿಗೆ ಗೊತ್ತಾಯಿತು. ಸ್ವಲ್ಪಹೊತ್ತು ಸುಮ್ಮನಿದ್ದು ಅವಳು ಹೇಳಿದಳು—"ಆದರೆ ನಳಿನಿಗೆ ಹಾನಿಯಾಗುತ್ತೆ. ಅವರ ಮನಸ್ಸನ್ನು ಸ್ಥಿರಮಾಡುವುದಕ್ಕೆ ಸ್ವಲ್ಪ ಸಮಯಬೇಕಾಗುತ್ತೆ. ಅಷ್ಟರಲ್ಲೇ ನಳಿನಿಯ........"

ಸಂಕೋಚ ಮತ್ತು ವೇದನೆಯಿಂದ ಮುಂದಿನ ಮಾತು ಅವಳ ಬಾಯಿಂದ ಹೊರಡಲಿಲ್ಲ. ಆದರೆ ದಯಾಳರು ಈ ವಿಚಾರವನ್ನು ಅಷ್ಟಾಗಿ ಯೋಚಿಸಿರಲಿಲ್ಲವೆಂದು ತೋರುತ್ತೆ. ಅವರು ಸಂಶಯದಿಂದ ಹೇಳಿದರು— "ಸರಿಯೇ· ನನ್ನ ಹೆಂಡತಿ ಹೇಳಿದ್ದರಲ್ಲಿ....ನರೇಂದ್ರನಲ್ಲಿ ನಮ್ಮೆಲ್ಲರಿಗೂ ಪೂರ್ಣ ನಂಬಿಕೆ ಇದೆಯೆಂದು ನಾನು ಹೇಳಿದ್ದೆನಲ್ಲ ಅವರಿಂದ ಯಾರಿ ಗಾದರೂ ಹಾನಿಯಾಗುತ್ತೆಂದಾಗಲೀ, ಅವರು ಅಜ್ಞಾತವಾಗಿಯಾದರೂ ಯಾರಿಗೂ ಅನ್ಯಾಯಮಾಡುತ್ತಾರೆಂದಾಗಲೀ ನನಗನಿಸುವುದಿಲ್ಲ.

ಅವರಿಗೆ ಮನಸ್ಸಿಗೆ ಬರದಿದ್ದರೂ, ಅನ್ಯಾಯ ಎಲ್ಲಿ, ಎಷ್ಟು ದೂರ ಮುಟ್ಟತ್ತೆಂಬುದು ದೇವರಿಗೆ ಮಾತ್ರ ಗೊತ್ತಿತು."

ಇಬ್ಬರೂ ದಯಾಳರ ಕೋಣೆಯಲ್ಲಿ ಕಾಲಿಟ್ಟಾಗ ಸಂಜೆಯ ಮಸುಕು ಕವಿದಿತ್ತು. ಒಂದು ಮೇಜಿನ ಎದುರು ಬದರಿಗೆ ಎರಡು ಕುರ್ಚಿಯಮೇಲೆ ನಳಿನಿ ಮತ್ತು ನರೇಂದ್ರರು ಕುಳಿತ್ತಿದ್ದರು. ಎದುರಿಗಿದ್ದ ಪುಸ್ತಕದಲ್ಲಿ ಅಕ್ಷರ ಕಾಣದಿದ್ದುದರಿಂದಲೋ ಏನೋ, ಓದುವುದು ಮುಗಿದು ಚರ್ಚೆ ಆರಂಭ ವಾಗಿತ್ತು. ನಳಿನಿ ಬಾಗಿಲಕಡೆ ಮುಖ ಮಾಡಿ ಕುಳಿತಿದ್ದಳು. ಅವಳೇ ಮೊದಲು ಉಚ್ಚಸ್ವರದಲ್ಲಿ ಸ್ವಾಗತಿಸಿದಳು. ಆದರೆ ವೇದನೆಯಿಂದ ವಿಜಯಳ

ಮುಖ ವಿವರ್ಣವಾಡದ್ದು ಆ ಮಸುಕಿನಲ್ಲಿ ನಳಿನಿಗೆ ಕಾಣಲಿಲ್ಲ. ಕೂಡಲೆ ನರೇಂದ್ರ ಕುರ್ಚಿಯನ್ನು ಬಿಟ್ಟು ಎದ್ದುನಿಂತು ನಮಸ್ಕಾರಮಾಡಿ "ಆರೋಗ್ಯವೇ ?"ಎಂದು ಕೇಳಿದ.

ವಿಜಯಳು ಪ್ರತಿನಮಸ್ಕಾರವನ್ನೂ ಮಾಡಲಿಲ್ಲ, ಅವನ ಪ್ರಶ್ನೆಗೆ ಉತ್ತರವನ್ನೂ ಕೊಡಲಿಲ್ಲ. ಅವನಿಗೆ ಬೆನ್ನುಮಾಡಿ ಅವಳು" ನೀವೆಲ್ಲಿ ಮತ್ತೆಂದೂ ಬರಲೇಯಿಲ್ಲವಲ್ಲ?" ಎಂದು ನಳಿನಿಯನ್ನು ಕೇಳಿದಳು.

ನರೇಂದ್ರ ಎದುರಿಗೆ ಬಂದು ನಗುಮುಖದಿಂದ "ತನ್ನ ಗುರುತು ಹತ್ತ ಲಿಲ್ಲವೆಂದು ತೋರುತ್ತೆ" ಎಂದು ಕೇಳಿದ.

" ಗುರುತು ಹತ್ತಿದರೂ ಗುರುತಿಸುವ ಅಗತ್ಯವೇನು ?" ಅವಳು ಉದಾಸೀನದಿಂದಲೇ ಹೇಳಿ ನಳಿನಿಯ-ಕಡೆ ತಿರುಗಿ ಹೇಳಿದಳು—"ನಡೆಯಿರಿ ನಿಮ್ಮ ಅತ್ತೆಯನ್ನು ನೋಡಿಬರೋಣ."

ಎಂದು ಅವಳು ಇನ್ನೊಂದುಬಾರಿ ಈ ಕಡೆ ತಿರುಗಿ, ನಳಿನಿಯನ್ನು ಎಳೆದುಕೊಂಡು ಮೇಲೆ ಹೋದಳು. ನಳಿನಿ ಕೆಲವು ಮೆಟ್ಟಲುಗಳನ್ನು ಹತ್ತಿದ ಮೇಲೆ ಕೂಗಿ ಹೇಳಿದಳು.—"ಚಹ ಕುಡಿಯದೆ ಎಲ್ಲೂ ಓಡಿ ಹೋಗಬೇಡಿ ನರೇಂದ್ರಬಾಬು."

ನರೇಂದ್ರ ಇದಕ್ಕೇನೂ ಉತ್ತರ ಕೊಡಲಾರದೆ ಹೋದ. ಆಶ್ಚರ್ಯ ಮತ್ತು ಅವಮಾನದಿಂದ ಅವನು ಬೆಪ್ಪಾಗಿ ನಿಂತುಬಿಟ್ಟ. ದಯಾಳರೂ ಹಾಗೇ ನಿಂತುಬಿಟ್ಟರು. ಆದರೂ ಹೇಗೋ ಏನೋ ಮನಸ್ಸಿನಲ್ಲೇ" ಹೊರಗೆ ತೋರಿದ ಈ ಭಾವನೆಯೇ ನಿಜವಲ್ಲ........ಅಕಾರಣವಾಗಿ ಮಾಡಿದ ಈ ಅಪಮಾನದ ಅಂತರಂಗದಲ್ಲಿ ಕಣ್ಣಿಗೆ ಕಾಣದೇ ಏನೋ ಹುದುಗಿಕೊಂಡಿದೆ. ಅದು ಉದಾಸೀನಭಾವವಂತೂ ಅಲ್ಲ"ಎಂದು ಅವರು ಯೋಚಿಸಿದರು.

ಸ್ವಲ್ಪ ಹೊತ್ತಿನಮೇಲೆ ಚಹಕ್ಕೆ ಕರೆಬಂದಿತು. ಆದರೆ ನರೇಂದ್ರ ದಯಾಳರ ಪ್ರಾರ್ಥನೆಯನ್ನು ಕೇಳದೆ ಕೆಳಗೆ ನಿಂತುಬಿಟ್ಟ. ತನ್ನೊಬ್ಬ ನನ್ನೇ ಕೆಳಗೆಬಿಟ್ಟು ಅವರು ಮೇಲೆಹೋಗಲು ಹಿಂದೆಮುಂದೆ ನೋಡುತ್ತಿದ್ದು ದನ್ನರಿತು ನರೇಂದ್ರ ಹೇಳಿದ—" ನಾನು ಮನೆಯವನು. ನನ್ನ ವಿಚಾರ ಯೋಚಿಸಬೇಡಿ ದಯಾಳಬಾಬು. ನಿಮ್ಮ ಮಾನ್ಯ ಅತಿಥಿಗಳನ್ನು ಆದರಿಸು ವುದು ಅಗತ್ಯ. ಆದ್ದರಿಂದ ನೀವು ಮೇಲೆ ಹೋಗಿ."

ದಯಾಳರು ದುಃಖದಿಂದ ಮೇಲೆ ಹೊರಡುತ್ತಾ " ನೀವು ಹಾಗಾದರೆ ಇನ್ನು ಸ್ವಲ್ಪ ಹೊತ್ತು ಇಲ್ಲೇ ಇರುತ್ತೀರಾ? "

ಆಳು ದೀಪವನ್ನು ತಂದಿಟ್ಟ. ನರೇಂದ್ರ ಎದುರಿಗಿದ್ದ ಪುಸ್ತಕವನ್ನು ಹತ್ತಿರ ಎಳೆದುಕೊಂಡು ತಲೆಯಲ್ಲಾಡಿಸುತ್ತಾ "ಹೂಂ, ಖಂಡಿತ ಇರುತ್ತೇನೆ " ಎಂದ.

ಸುಮಾರು ಅರ್ಧಗಂಟೆಯಾದಮೇಲೆ ಮೂರು ಜನಗಳೂ ಕೆಳಗಿಳಿದು ಬಂದರು. ನರೇಂದ್ರ ಪುಸ್ತಕವನ್ನಿಟ್ಟು ಎದ್ದುನಿಂತ. ಅವನು ಹೊರಟು ಹೋಗಿದ್ದರೆ ಎಲ್ಲರಿಗೂ ಸುಖವಾಗಿತ್ತೋ ಏನೋ. ಏಕೆಂದರೆ ಅವನು ಹೀಗೆ ಒಬ್ಬನೇ ಕಾದು ಕುಳಿತಿದ್ದರಿಂದ ಮೂವರಿಗೂ ಬಹಳ ನಾಚಿಕೆಯಾಯಿತು.

ನಳಿನಿ ನಾಚಿಕೆಯಿಂದ ಮೃದುವಾಗಿ ಹೇಳಿದಳು—"ನಿಮಗೆ ಕೆಳಗೇ ಚಹ ತರುವಂತೆ ಹೇಳಿದ್ದೇನೆ. ಈಗ ತರುತ್ತಾನೆ ನರೇಂದ್ರಬಾಬು."

ವಿಜಯಳು ಅವನೊಂದಿಗೆ ಒಂದು ಮಾತನ್ನೂ ಕೂಡ ಆಡದೆ, ಅವನ. ಕಡೆ ತಿರುಗಿ ಸಹ ನೋಡದೆ ನಿಧಾನವಾಗಿ ಹೊರಗೆ ಹೋದಳು. ಕನ್ಯಯ್ಯಸಿಂಹ ಹೊರಗೆ ಬಾಗಿಲ ಹತ್ತಿರವೇ ಕುಳಿತಿದ್ದ. ಅವನು ಲಾಠಿಯನ್ನು ಹಿಡಿದು ಎದ್ದುನಿಂತ. ಹೊರಗೆ ಮೋಡಗಳು ಇರಲಿಲ್ಲ. ಆಕಾಶ ಶುಭ್ರವಾಗಿ ನವಮಿಯ ಚಂದ್ರ ಕಂಗೊಳಿಸುತ್ತಿದ್ದ. ತನ್ನ ಕಾಲಿನ ಕೆಳಗಿನ ಧೂಳಿನಿಂದ ಹಿಡಿದು ಕಣ್ಣಿಗೆ ಕಾಣುವ ಆಕಾಶ, ಮೈದಾನ, ಕಾಡು....— ಎಲ್ಲ ಈ ಚಂದ್ರಿಕೆಯಲ್ಲಿ ಅವಸಾನ ಹೊಂದುತ್ತಿದ್ದಂತೆ ವಿಜಯಳಿಗೆ ಭಾಸವಾಯಿತು. ಯಾವುದಕ್ಕೂ ಪರಸ್ಪರ ಸಂಬಂಧವೇ ಇಲ್ಲದಂತೆ, ಯಾರೋ ಅರೆನಿದ್ದೆಯಲ್ಲಿ ಎಚ್ಚೆತ್ತು ಈ ಪದಾರ್ಥಗಳನ್ನು ಬೇರೆ ಪ್ರಪಂಚದಿಂದ ಕಿತ್ತು ತಂದು ಅಲ್ಲಲ್ಲಿ ಎಸೆದುಬಿಟ್ಟಂತೆ, ಆ ನಿದ್ದೆ ಮುಗಿದಮೇಲೆ ಅವು ಪರಸ್ಪರ ನೋಡುತ್ತಿದ್ದಂತೆ ಅವಳಿಗೆ ತೋರಿತು. ಅವಳು ಮುಂದೆ ಹೋಗುತ್ತಾ ಅವಳ ಕಣ್ಣಿನಿಂದ ನೀರು ಧಾರೆಧಾರೆಯಾಗಿ ಹರಿಯತೊಡಗಿತು. ಅವಳದನ್ನು ಒರೆಸಿಕೊಳ್ಳುತ್ತ ಹೇಳಿಕೊಂಡಳು —"ಇನ್ನು ಸಹಿಸಲಾಗುವುದಿಲ್ಲ, ಇನ್ನು ಸೈರಿಸಲಾಗುವುದಿಲ್ಲ."

ಮನೆಗೆ ಬರುತ್ತಲೇ ರಾಸಬಿಹಾರಿ ಹೊರಗಿನ ಕೋಣೆಯಲ್ಲಿ ಕುಳಿತು ಸಂಜೆಯಿಂದ ತನ್ನನ್ನು ಪರೀಕ್ಷಿಸುತ್ತಿದ್ದಾರೆಂದು ತಿಳಿಯಿತು. ಅದನ್ನು ಕೇಳುತ್ತಲೇ ಅವಳ ಮನಸ್ಸು ಇನ್ನೂ ಕಟುಕವಾಗಿ, ಅವಳೇನೂ ಉತ್ತರ

ಹೇಳದೆ ಮಹಡಿಯಮೇಲೆ ಹೋದಳು. ಎಷ್ಟೇ ಹೋತ್ತಾಗಲೀ ರಾಸ ಬಿಹಾರಿಯ ಧೈರ್ಯ ಕುಗ್ಗುವುದಿಲ್ಲವೆಂಬುದೂ ಅವಳಿಗೆ ಗೊತ್ತಿತ್ತು. ಅವನು ಕಾದು ಕುಳಿತಮೇಲೆ ರಾತ್ರಿ ಎಷ್ಟು ಹೊತ್ತಾದರೂ ತನ್ನನ್ನು ಬೇಟಿಮಾಡದೆ ಹೋಗುವುದಿಲ್ಲವೆಂದು ಅವಳು ತಿಳಿದಿದ್ದಳು.

ಸ್ವಲ್ಪ ಹೊತ್ತಿನಲ್ಲೇ ಪರೇಶ ಬಾಗಿಲ ಹತ್ತಿರ ಬಂದು ದೊಡ್ಡಬಾಬುಗಳು ಬಂದಿದ್ದಾರೆಂದು ಹೇಳಿದ. ಅದರ ಜೊತೆಗೇ ರಾಸಬಿಹಾರಿಯ ಕೋಲು ಮತ್ತು ಚಪ್ಪಲಿಯ ಸದ್ದಾಯಿತು.

"ಬನ್ನಿ." ವಿಜಯಳು ಹೇಳಿದಳು.

ಕೋಣೆಯಲ್ಲಿ ಪ್ರವೇಶಮಾಡಿ ರಾಸಬಿಹಾರಿ ಕುರ್ಚಿಯ ಮೇಲೆ ಕುಳಿತು ಕೊಂಡು ಹೇಳಿದ—"ಅದಕ್ಕೇ ನಾನಿದುವರೆಗೂ 'ಇಲ್ಲಿ ಯಾವ ಆಳುಕಾಳುಗಳಿಗೂ ಲಾಟೀನು ತೆಗೆದುಕೊಂಡು ಹೋಗಬೇಕೆಂದು ತೋರಲಿಲ್ಲವೇ? ಎಂದು ಕೇಳುತ್ತಿದ್ದೆ. ಅದಕ್ಕೇ ನನ್ನದು ಪರಕೀಯರದೆಂಬುದಕ್ಕೆ ದೇವರೆಷ್ಟು ಭೇದ ಮಾಡಿದ್ದಾನೆಂದುಕೊಳ್ಳುತ್ತಿದ್ದೆ" ಎಂದು ಅವನು ಒಂದು ನಿಟ್ಟುಸಿರುಬಿಟ್ಟ. ವಿಜಯಳು ಏನೂ ಉತ್ತರ ಹೇಳದಿದ್ದುದನ್ನು ನೋಡಿ ಅವನು ಸ್ವಲ್ಪ ಕೆಮ್ಮಿ ಹಿಂದೆಮುಂದೆ ನೋಡಿ ಜೇಬಿನಿಂದ ಒಂದು ಕಾಗದ ತೆಗೆದು ಹೇಳಿದ— "ಇದಕ್ಕೆ ಮಾಡಬೇಕಾದ್ದನ್ನೆಲ್ಲ ನಾನು ಮಾಡಿದ್ದೇನೆ. ಅದಕ್ಕೆ ನಿನ್ನ ಹೆಸರನ್ನು ಮಾತ್ರ ಬರೆಯಬೇಕಾಗಿದೆ. ಅದನ್ನು ನಾಳೆಯೇ ಕಳುಹಿಸಬೇಕು,"ಎಂದು ಅವನು ಆ ಕಾಗದವನ್ನು ಅವಳ ಕೈಯಲ್ಲಿ ಕೊಟ್ಟ. ಅದನ್ನು ನೋಡುತ್ತಲೇ ಅದು ಬ್ರಾಹ್ಮ-ವಿವಾಹದ ಕಾನೂನಿನ ರೀತ್ಯಾ ರಿಜಿಸ್ಟರು ಮಾಡುವ ಪತ್ರವೆಂದು ವಿಜಯ ತಿಳಿದುಕೊಂಡಳು. ಅಚ್ಚುಮಾಡಿದ ಮತ್ತು ಕೈಬರಹದ ಆ ಪತ್ರವನ್ನು ಮೊದಲಿನಿಂದ ಕೊನೆಯವರೆಗೂ ಎರಡುಮೂರು ಸಲ ಓದಿದ ಮೇಲೆ ವಿಜಯ ಮುಖವೆತ್ತಿ ನೋಡಿದಳು. ಬಹಳ ಹೊತ್ತಾಗಿರಲಿಲ್ಲ. ಆದರೂ ಅಷ್ಟರಲ್ಲೇ ಅವಳ ಮನಸ್ಸಿನಲ್ಲಿ ದೊಡ್ಡ ಕೋಲಾಹಲವೆದ್ದಿತ್ತು. ಅವಳಲ್ಲಿ ಇದುವರೆಗೂ ಮೂಡಿದ್ದ ವೇದನೆ ಈಗ ಅಕಸ್ಮಾತ್ ಒಂದುರೀತಿ ಕಠೋರ ಉದಾಸೀನತೆ ಮತ್ತು ಬೇಸರದಲ್ಲಿ ಪರ್ಯವಸಾನಹೊಂದಿತ್ತು. ಅವಳಿಗೆ ಬಗೆಬಗೆಯ ಯೋಚನೆಗಳು ತೋರಿದವು. ಈ ಪ್ರಪಂಚದಲ್ಲಿ ಎಲ್ಲ ಗಂಡಸರೂ ಒಂದೇ ಪಡಿಯಚ್ಚಿನಲ್ಲಿ ಆದವರು. ರಾಸಬಿಹಾರಿ, ದಯಾಳ, ವಿಲಾಸ, ನರೇಂದ್ರ....ನಿಜವಾಗಿ ನೋಡಿದರೆ ಒಬ್ಬರಿಗೊಬ್ಬರಿಗೆ ಭೇದವೇ

ಇಲ್ಲ. ಬುದ್ಧಿ ಮತ್ತು ಯೋಗ್ಯತೆಯ ತಾರತಮ್ಯದಿಂದ ಕೆಲವರು ಹೊರಗೆ ತೋರಿಸುತ್ತಾರೆ, ಅಷ್ಟೇ ಭೇದ. ಅದು ಹೊರತು ತಂತಮ್ಮ ಸುಖ-ಸಂತೋಷ ಗಳ ಹವಣಿಕೆಗಾಗಿ ಕೀಳ್ತನಕ್ಕಿಳಿಯುವುದರಲ್ಲಿ, ಕೃತಘ್ನತೆಯಲ್ಲಿ, ನಿಷ್ಠುರತನ ದಲ್ಲಿ ಹೆಂಗಸರ ಪಾಲಿಗೆ ಎಲ್ಲರೂ ಒಂದೇ. ಇಂದು ದಯಾಳರ ಆಚರ ಣೆಯೇ ಅವಳಿಗೆ ಎಲ್ಲಕ್ಕಿಂತ ಹೆಚ್ಚು ಮನಸ್ಸಿಗೆ ತಗುಲಿತ್ತು. ತನ್ನ ಹೃದಯದ ಅಭಿಲಾಷೆ ಅವರಿಗೆ ಗೊತ್ತಿದೆ. ಆ ದಯಾಳರಿಗೆ ಅವಳೆಷ್ಟು ಮಾಡಿದ್ದಾಳೆ. ತನ್ನ ಪ್ರಾಣಕ್ಕಿಂತ ಹೆಚ್ಚು ವಿಶ್ವಾಸ ಮಾಡಿದ್ದಾಳೆ. ಗೌರವವಿಟ್ಟುಕೊಂಡಿ ದ್ದಾಳೆ, ತನ್ನವರೆಂದು ತಿಳಿದುಕೊಂಡಿದ್ದಾಳೆ. ಆದರೂ ತನ್ನ ಸೊಸೆಯ ಕಲ್ಯಾಣದ ಮುಂದೆ ಅವರು ಎಲ್ಲ ಗೊತ್ತಿದ್ದರೂ ತನ್ನ ಆ ವಿಶ್ವಾಸ-ಗೌರವ ಗಳ ಮರ್ಯಾದೆಯನ್ನು ಕಾಪಾಡಲಿಲ್ಲ. ಇವರ ಕಣ್ಣೆದುರಿಗೆ ಒಬ್ಬ ಪರಕೀಯ ಹೆಂಗಸಿನ ಮರ್ಮಾಂಕಿತ ವೇದನೆಯ ಅರಿವು ಆದರೂ ಇವರಿಗೆ ಅದರಿಂದ ಎಷ್ಟು ಮಾತ್ರ ದುಃಖ, ಎಷ್ಟು ಕರುಣೆ ಉಂಟಾಯಿತು! ಮೂಲತಃ ರಾಸ ಬಿಹಾರಿಗೂ ಇವರಿಗೂ ಯಾವ ವಿಷಯದಲ್ಲಿ ಎಷ್ಟು ಮಾತ್ರ ಭೇದ. ನರೇಂದ್ರನ ವಿಚಾರವನ್ನು ಅವಳು ಮೊದಲೇ ಹೃದಯದಿಂದ ಕಿತ್ತುಹಾಕಿ ದ್ದಳು. ಈಗಲೂ ಅವನ ವಿಷಯವನ್ನು ವಿಚಾರ ಮಾಡಲು ಅವಳು ಅಪೇಕ್ಷಿ ಸಲಿಲ್ಲ. ಅವಳಿಗೆ ಈಗ ಪುನಃ ಪುನಃ ಯೋಚನೆಗೆ ಬಂದಿದ್ದೇನೆಂದರೆ— 'ಎಲ್ಲರೂ ಒಂದೇ ಆದಮೇಲೆ ವಿಲಾಸನೊಬ್ಬನನ್ನೇ ದ್ವೇಷದೃಷ್ಟಿಯಿಂದ ನೋಡಲಧಿಕಾರವೇನು? ಅವನೇ ಎಲ್ಲರಿಗಿಂತ ನಿರ್ದೋಷಿ! ಅವನೇ ಎಲ್ಲರಿ ಗಿಂತ ಕಡಿಮೆ ಅಪರಾಧಮಾಡಿದ್ದಾನೆ! ನಡೆ ಮತ್ತು ನುಡಿಯಲ್ಲಿ ಅವನಲ್ಲೇ ಹೊಂದಿಕೆ ಇರುವುದು! ಅವನು ಮಾಡಿರುವ ಅಪರಾಧವೂ ನನಗಾಗಿಯೇ ಅಲ್ಲವೇ?' ಸ್ವಲ್ಪ ಮನಸ್ಸನ್ನು ಗಟ್ಟಿಮಾಡಿಕೊಂಡು ವಿಜಯ, 'ವಿಲಾಸನ ಪ್ರೇಮ ಸತ್ಯ ಮತ್ತು ಸಜೀವವಾದದ್ದು ಆದ್ದರಿಂದ ಅವನಿಗೆ ಸುಮ್ಮನಿರಲು ಸಾಧ್ಯವಾಗದೆ ವಿರುದ್ಧ ಶಕ್ತಿಯನ್ನು ತುಳಿಯಲು ಸರ್ವ ಪ್ರಯತ್ನ ಮಾಡಿದ ........'ಹೋಗು' ಎಂದಕೂಡಲೆ ಕೈಲಾಗದ ಒಳ್ಳೆಯತನವನ್ನು ಕಾಪಾಡಿ ಕೊಳ್ಳಲು ಸಿಟ್ಟುಮಾಡಿಕೊಂಡು ಹೋಗಲಿಲ್ಲ. ಇದೇ ಅಪರಾಧವಾದರೆ ಅದಕ್ಕೆ ಶಿಕ್ಷೆಕೊಡುವ ಅಧಿಕಾರ ಇನ್ಯಾರಿಗಿದ್ದರೂ, ನನಗಂತೂ ಇಲ್ಲ'ಎಂದು ಯೋಚಿಸಿದಳು. ಅವಳಿಗೆ ಈ ಕಠಿಣ ಜಗತ್ತಿನ ವಿಷಯ ಜ್ಞಾಪಕಕ್ಕೆ ಬಂದಿತು. ಅದನ್ನು ಯೋಚಿಸಿದ್ದರಲ್ಲಿ ಅವಳಿಗೆ ಎಲ್ಲರಿಗಿಂತಲೂ ವಿಲಾಸನೇ

ಉತ್ತಮನಾಗಿ ಕಂಡ! ಆ ಪದಾರ್ಥದ ಜೊತೆಗೆ ಹೋಲಿಸಿದರಂತೂ ಇವ ನನ್ನು ಯಾವರೀತಿಯಲ್ಲೂ ಉದಾಸೀನಮಾಡಬೇಕಾಗಿಲ್ಲವೆನಿಸಿತು.

ರಾಸಬಿಹಾರಿ ಅವಳ ಗಂಭೀರವಾದ ಮುಖವನ್ನು ನೋಡಿ ಬಹಳ ಆಶಂಕೆಯಿಂದ ಕುಗ್ಗಿ ಹೇಳಿದ—"ಹಾಗಾದರೆ ಮಗು, ಇಲ್ಲೇ ಲೇಖನಿ, ಮಸಿದೌತಿ ಇದೆಯೋ? ಕೆಳಗಿನಿಂದ ತರಿಸಬೇಕೋ!"

ವಿಜಯಳು ಚಕಿತಳಾಗಿ ನೋಡಿದಳು. ಕಳೆದುಹೋದ ಕುತ್ಸಿತ ನೆನಹಿನಮೇಲೆ ವಿಚಾರದ ಎಳೆಗಳು ನಿಧಾನವಾಗಿ ಬಂದು ಬಲೆಯಾಗಿ ಹೆಣೆದುಕೊಳ್ಳುತ್ತಿರುವಷ್ಟರಲ್ಲೇ ಈ ಸ್ವಾರ್ಥಾಂಧ ಮುದುಕನ ಆತುರದಿಂದ ಅವಳಿಗೆ ಹೊಟ್ಟೆಯಲ್ಲಿ ಚೂರಿ ತಿವಿದಂತಾಗಿ ಅವಳ ಮನಸ್ಸೆಲ್ಲ ಕದಡಿ ಹೋಗಿ, ಮರುಕ್ಷಣವೇ ಸಾಯಲು ಸಿದ್ಧರಾದವರಂತೆ ಅವಳು ನಿರ್ದಯಳಾಗಿ ಹೇಳಿದಳು—"ಕಾಕಾಜಿ, ಪಾಪವೆಷ್ಟೇ ದೊಡ್ಡದಾಗಲೀ ಅದನ್ನು ಹಣದ ಕೆಳಗೆ ದಬ್ಬಿಬಿಡಬಹುದಲ್ಲವೇ?"

ರಾಸಬಿಹಾರಿಗೆ ಪ್ರಶ್ನೆಯ ಇಂಗಿತ ಸರಿಯಾಗಿ ಅರ್ಥವಾಗದೆ ಗಾಬರಿಯಾಗಿ "ಏಕೆ ಮಗು?" ಎಂದು ಕೇಳಿದ.

ವಿಜಯ ದೃಢಸ್ವರದಲ್ಲೇ ಹೇಳಿದಳು—"ಇಲ್ಲದಿದ್ದರೆ, ನನ್ನ ಇಷ್ಟು ದೊಡ್ಡ ಅಪರಾಧವನ್ನೂ ನಿರ್ಲಕ್ಷಿಸಿ ನೀವು ನನ್ನನ್ನೇಕೆ ಸ್ವೀಕರಿಸಲು ಒಪ್ಪುತ್ತಿದ್ದಿರಿ?"

ಸಂಕೋಚದಿಂದ ಕುಗ್ಗಿ ರಾಸಬಿಹಾರಿ ಹೇಳಿದ—"ಅದೆಲ್ಲ ಸುಳ್ಳು. ಎಂತಹ ಶತ್ರುವೂ ನಿನ್ನ ಮೇಲೆ ಅಪವಾದ ಹೊರಿಸಲಾರ."

"ಶತ್ರು ಹೊರಿಸದಿರಬಹುದು. ಅದಿರಲಿ. ವಿಲಾಸಬಾಬುಗಳಿಗೆ ನನ್ನಲ್ಲಿ ಗೌರವವಿದೆಯೇ?"

"ಗೌರವವೇ? ನಿನ್ನಲ್ಲೇ? ವಿಲಾಸನಿಗೇ? ಸರಿ........" ಎಂದು ಅವನು—'ವಿಲಾಸ, ವಿಲಾಸ' ಎಂದು ಕೂಗಿದ.

ವಿಲಾಸ ಹತ್ತಿರವೆಲ್ಲೋ ಕಾದಿದ್ದವನಂತೆ ಅವನು ಕರೆದಕೂಡಲೆ ಒಳಗೆ ಬಂದ. ರಾಸಬಿಹಾರಿ ಹೇಳಿದ—"ಕೇಳಪ್ಪ ವಿಲಾಸ, ನೀನು ನಮ್ಮ ಈ ವಿಜಯಳಲ್ಲಿ ಗೌರವವಿಡಬಲ್ಲೆಯಾ? ಎಂದು ಕೇಳುತ್ತಿದ್ದಾಳೆ. ಸ್ವಲ ಹೇಳು........"

ಇದಕ್ಕೆ ವಿಲಾಸ ಕೂಡಲೆ ಉತ್ತರ ಕೊಡದೆ, ಒಂದೂ ಅರ್ಥವಾಗದವನಂತೆ ನೋಡುತ್ತ ನಿಂತ.

"ಅವತ್ತು ನಾನು ರಾತ್ರಿ ಬಹಳ ಹೊತ್ತು ಏಕಾಂತದಲ್ಲಿ ನರೇಂದ್ರ ಬಾಬುಗಳೊಂದಿಗೆ ಆಮೋದ ಪ್ರಮೋದ ಮಾಡಿದರೂ ನನಗೆ ತೃಪ್ತಿಯಾಗಲಿಲ್ಲವೆಂದು ಅಂದು ಕಾಕಾಜಿ ಹೇಳುತ್ತಿದ್ದರು. ಅವತ್ತು ರೈಲು ತಪ್ಪಿತೆಂಬ ನೆವದಿಂದ ಅವರು ರಾತ್ರಿ ಇಲ್ಲೇ ಕಳೆದು ಬೆಳಿಗ್ಗೆ ಹೋದರಂತೆ. ಇಂತಹ ಸ್ಥಿತಿಯಲ್ಲೂ........"

"ಎಂದಿಗೂ ಇಲ್ಲ! ಎಂದೆಂದಿಗೂ ಇಲ್ಲ! ಇದು ಅಸಂಭವ! ಶುದ್ಧ ಸುಳ್ಳು! ಇದು ಖಂಡಿತ...." ಇತ್ಯಾದಿ ರಾಸಬಿಹಾರಿಯ ಉಚ್ಚ ಕಂಠದ ಕೂಗಿನಲ್ಲಿ ಈ ಮಾತು ಅಡಗಿಹೋಯಿತು.

ವಿಲಾಸನ ಮುಖ ಕಪ್ಪಿಟ್ಟಿ "ಉಹುಂ, ನಾನು ಕೇಳಲಿಲ್ಲ" ಎಂದು ಅವನು ಹೇಳಿದ.

ರಾಸಬಿಹಾರಿ ಮತ್ತೆ ಕೂಗಿದ—"ನಿನಗೆ ಹೇಗೆ ತಿಳಿಯುತ್ತೆ ವಿಲಾಸ? ಇದು ಕೇವಲ ಸುಳ್ಳು! ಇದು ಘೋರ........ ಇದಕ್ಕೆ ನಾನು ಆ ಕೆಟ್ಟ ಆಳಿಗೆ........ನೀನೇ ನೋಡುತ್ತಿರು, ಆ ಪರೇಶನಿಗೆ ಎಂತಹ ಶಿಕ್ಷೆ ಕೊಡುತ್ತೇನೆ!........ನಾನು........"

"ಭೂಮಂಡಲದಲ್ಲಿರುವವರೆಲ್ಲ ಹೇಳಿದರೂ ನಾನದನ್ನು ನಂಬುವುದಿಲ್ಲ." ವಿಲಾಸ ಹೇಳಿದ.

ವಿಜಯಳು ಕಠಿಣಳಾಗಿ ಕೇಳಿದಳು—"ನಂಬುವುದಿಲ್ಲವೇ? ಅದೇಕೆ? ನನ್ನ ಆಸ್ತಿಗಾಗಿಯೋ?"

ರಾಸಬಿಹಾರಿ ಈ ಮಾತನ್ನೇ ಹಿಡಿದುಕೊಂಡು ಇನ್ನೂ ಕೂಗಲು ತೊಡಗುತ್ತಿದ್ದವನು ಮಗನ ಮುಖವನ್ನು ನೋಡಿ ಸುಮ್ಮನಾದ.

ವಿಲಾಸನ ಕಣ್ಣುಗಳೆರಡೂ ಕಿಡಿಕಾರಿದರೂ, ಅವನ ದನಿಯಲ್ಲಿ ಉದ್ವೇಗವಾಗಲೀ ಸಿಟ್ಟಾಗಲೀ ತೋರಲಿಲ್ಲ. ಅವನು ಶಾಂತ, ಸ್ಥಿರ ಧ್ವನಿಯಲ್ಲೇ ಉತ್ತರ ಹೇಳಿದ—"ಉಹುಂ. ನಿನ್ನ ಆಸ್ತಿಗಾಗಿ ನನಗೆ ಸ್ವಲ್ಪವೂ ಆಸಕ್ತಿ ಇಲ್ಲ."

ಕೋಣೆಯೆಲ್ಲ ನಿಸ್ತಬ್ಧವಾಯಿತು. ಇದುವರೆಗೆ ನಡೆದ ಆ ಅತಿ ತುಚ್ಛ ಘಟನೆ ಅದರಲ್ಲಿ ಪ್ರತಿಬಿಂಬಿತವಾಯಿತು. ಇದು ಪೇಟೆಯಲ್ಲಿ ಮಾರುವ

ಪದಾರ್ಥಕ್ಕಾಗಿ ಎರಡು ಪಕ್ಷಗಳಲ್ಲಿ ನಾಚಿಕೆ, ಗೌರವ, ಮಾನ ಮರ್ಯಾದೆ ಯಿಲ್ಲದೆ, ಇಬ್ಬರು ಮನುಷ್ಯರು ಸ್ವಾರ್ಥವನ್ನು ಹಿಡಿದು ಕಚ್ಚಾಡುತ್ತಿದ್ದಂತೆ ತೋರಿತು.

ವಿಲಾಸನ ಗಂಭೀರವಾದ, ನಿಯತವಾದ, ಕ್ರಮಬದ್ಧವಾದ ಮಾತಿನ ಮುಂದೆ ಇಷ್ಟು ದಿನದಿಂದ ಜಾಗರೂಕತೆಯಿಂದ ಸಂಪಾದಿಸಿಟ್ಟು ಕೊಂಡಿದ್ದ ರಾಸಬಿಹಾರಿಯ ಗಾಂಭೀರ್ಯವೆಲ್ಲ ಮಾಯವಾಗಿ ಕೂಗಾಟ, ಹಾರಾಟ, ಕಚ್ಚಾಟಗಳಿಂದ ಅವನ ಅಲ್ಪತೆ ಚೆನ್ನಾಗಿ ಸ್ಪಷ್ಟಪಟ್ಟಂತೆ ವಿಜಯಳ ಗಂಡು ಬೀರಿತನವೂ ಸ್ಪಷ್ಟವಾಯಿತು. ಅವಳದಕ್ಕಾಗಿ ತಲೆ ತಗ್ಗಿಸಿದಳು. ತೊಂದರೆ ಎಷ್ಟೇ ಪ್ರಬಲವಾದರೂ, ಗೌರವಯುತ ಸ್ತ್ರೀ ತನ್ನ ನಡತೆಯ ವಿಚಾರದಲ್ಲಿ ಗಂಡಸರೊಂದಿಗೆ ಇಷ್ಟು ಜೋರಾಗಿ ಚರ್ಚೆ ಮಾಡುವುದು ಶುದ್ಧ ಅಸಂಭವ ವೆಂದು ಅವಳ ತಲೆಯಲ್ಲಿ ಸುಳಿದುಹೋಯಿತು. ದಾಂಪತ್ಯಜೀವನದ ಮಾಧುರ್ಯ, ಪವಿತ್ರತೆಯೆಲ್ಲ ಅವಳಿಗೆ ಮಣ್ಣುಗೂಡಿದಂತೆ ಭಾಸವಾಯಿತು.

ವಾತಾವರಣದ ನೀರವತೆಯನ್ನು ಮುರಿದವನು ವಿಲಾಸ. ಅವನು ಹೇಳಿದ—"ವಿಜಯ, ತಂದೆಯವರು ಏನಾದರೂ ಮಾಡಲಿ, ಏನಾದರೂ ಹೇಳಲಿ, ನಮಗವರ ವಿಷಯ ತಿಳಿಯಲಿ ಬಿಡಲಿ........ಬ್ರಹ್ಮಪದದಲ್ಲಿ ಆತ್ಮ ಸಮರ್ಪಣೆ ಮಾಡಿದವರೆಂದಿಗೂ ಅನ್ಯಾಯ ಮಾಡುವುದಿಲ್ಲವೆಂಬುದನ್ನು ನಾವೆಂದಿಗೂ ಮರೆಯಕೂಡದು. ನಿನ್ನನ್ನು ಬಿಟ್ಟು ನಿನ್ನ ಆಸ್ತಿಗೆ ನಮಗೆ ಎಳ್ಳಷ್ಟೂ ಆಸೆಯಿಲ್ಲವೆಂದು ನಾನು ಹೇಳಬಲ್ಲೆ."

"ನಿಜ ಹೇಳುತ್ತೀರಾ?" ವಿಜಯ ಬಿಳುಪೇರಿದ ಮುಖವನ್ನು ಎತ್ತಿ ಕೇಳಿದಳು.

ವಿಲಾಸ ಮುಂದುವರಿದು ಅವಳ ಬಲಗೈಯನ್ನು ತನ್ನ ಕೈಯ್ಯಲ್ಲಿಟ್ಟು ಕೊಂಡು ಹೇಳಿದ—"ನಮ್ಮ ಅಂತರಂಗದಲ್ಲಿ ಸತ್ಯದ ಲೇಶಾಂಶವಿದ್ದರೆ, ನಾನೀಗ ಹೇಳುತ್ತಿರುವುದು ಸತ್ಯವೆಂದು ತಿಳಿ ವಿಜಯ."

ಒಂದು ಕ್ಷಣ ಇಬ್ಬರೂ ಹೀಗೆ ನಿಂತಿದ್ದ ಮೇಲೆ ವಿಜಯ ತನ್ನ ಕೈಯ್ಯ ನ್ನು ಬಿಡಿಸಿಕೊಂಡು ಮೇಜಿನ ಹತ್ತಿರ ಬಂದು ಲೇಖಣಿಯನ್ನು ತೆಗೆದು ಕೊಂಡಳು. ಮತ್ತೊಂದು ಕ್ಷಣ ಯೋಚಿಸಿದಳೋ ಇಲ್ಲವೋ........ಅಂತೂ ಕೊನೆಗೆ ದೊಡ್ಡದೊಡ್ಡ ಅಕ್ಷರಗಳಿಂದ ಸಹಿಮಾಡಿ "ತೆಗೆದುಕೊಳ್ಳಿ" ಎಂದು ರಾಸಬಿಹಾರಿಯ ಕೈಯ್ಯಲ್ಲಿ ಕೊಟ್ಟಳು.

ರಾಸಬಿಹಾರಿ ಪತ್ರವನ್ನು ಮಡಿಸಿ ಜೇಬಿನಲ್ಲಿಟ್ಟುಕೊಂಡು ನಿಂತುಕೊಂಡು ವನಮಾಲಿಯನ್ನು ನೆನೆಸಿಕೊಂಡು ವಿಶೇಷವಾಗಿ ಕಣ್ಣೀರು ಸುರಿಸಿ ಒಂದು ಕ್ಷಣ ಆ ನಿರಾಕಾರ ಪರಬ್ರಹ್ಮನ ಗುಣಗಳನ್ನು ಹೊಗಳಿ 'ರಾತ್ರಿಯಾಯಿತೆನ್ನುತ್ತಾ' ಹೊರಬಿದ್ದ.

ತಂದೆ ಹೊರಟುಹೋದಮೇಲೆ ವಿಲಾಸ ಗಂಭೀರನಾಗಿ, ಮರದಂತೆ ನೀರಸವಾಗಿ ಹೇಳಿದ—"ನೀನು ನನ್ನನ್ನು ಪ್ರೀತಿಸುವುದಿಲ್ಲವೆಂದು ನನಗೆ ಗೊತ್ತು. ಆದರೆ ಎಲ್ಲರಂತೆ ನಾನೂ ಈ ಪ್ರೇಮಕ್ಕೆ ಹೆಚ್ಚಿನ ಸ್ಥಾನ ಕೊಟ್ಟಿದ್ದರೆ, 'ನೀನು ಯಾರನ್ನು ಪ್ರೀತಿಸುತ್ತೀಯೋ ಅವರನ್ನು ವರಿಸು' ಎಂದು ನಾನೀಗಲೇ ಮುಕ್ತಕಂಠನಾಗಿ ಹೇಳಿಬಿಡುತ್ತಿದ್ದೆ. ನನ್ನಲ್ಲಿ ಆ ಶಕ್ತಿ, ಆ ಔದಾರ್ಯ, ಆ ತ್ಯಾಗವಿದೆ!........ತಂದೆಯವರ ಇಷ್ಟು ದಿನಗಳ ಶಿಕ್ಷಣ ಮಿಥ್ಯೆಯಲ್ಲ."

ಒಂದು ಕ್ಷಣ ಸುಮ್ಮನಿದ್ದು ಅವನು ಮತ್ತೆ ಹೇಳಿದ—"ಮನುಷ್ಯ ಪ್ರೇಮವೆಂದು ಮೋಸಹೋಗುವ ಈ ಸಕಾಮ ತೃಷ್ಣೆಯೇ ಬ್ರಾಹ್ಮ ವಧೂವರರ ಅಂತಿಮ ಗುರಿಯಾದೀತೇ?........ಉಹುಂ, ಅದೆಂದಿಗೂ ಅಲ್ಲ. ಅಸಂಭವ. ಇದರ ಮಹೋದ್ದೇಶ, ಸತ್ಯ! ಮುಕ್ತಿ! ಪರಬ್ರಹ್ಮನ ಪಾದಗಳಲ್ಲಿ ಎರಡು ಆತ್ಮಗಳ ಏಕಾಂತ ಸಮರ್ಪಣ! ಒಂದಿಲ್ಲೊಂದು ದಿನ ನಿನ್ನ ಹತ್ತಿರ ನಿನಗೀ ಸತ್ಯದ ಸಾಕ್ಷಾತ್ಕಾರವಾದೀತು! ಈ ನರೇಂದ್ರ ಬರದಿದ್ದುದಕ್ಕಿಂತ ಮುಂಚಿನ ವಿಷಯವನ್ನು ಜ್ಞಾಪಿಸಿಕೋ ವಿಜಯ."

ಏನೋ ಮಾತಾಡಲು ವಿಜಯ ಮುಖವೆತ್ತಿದಳು. ಆದರವಳ ತುಟಿಗಳು ಅದುರಿದವು. ಜೋರಾದ ನಿಟ್ಟುಸಿರಿನಿಂದ ಅವಳ ಮಾತು ನಿಂತುಹೋಯಿತು........ಬಾಯಿಂದ ಶಬ್ದಗಳೇ ಹೊರಡಲಿಲ್ಲ. ಅವಳು ಎರಡು ಕೈಗಳನ್ನೂ ಗಲ್ಲದಮೇಲಿಟ್ಟುಕೊಂಡು ನಮಸ್ಕಾರಮಾಡಿ ಪಕ್ಕದ ಬಾಗಿಲಿನಿಂದ ಜಾಗ್ರತೆಯಾಗಿ ಓಡಿಹೋದಳು.

೨೫

ತನ್ನನ್ನು ನಿಶ್ಚಿತರೂಪದಲ್ಲಿ ಸಮರ್ಪಣೆಮಾಡಿಕೊಳ್ಳುವವರೆಗೂ ವಿಜಯಳಿಗೆ ತನ್ನ ಮನಸ್ಸು ಪ್ರಬಲವಾದ ಸಂಶಯದಿಂದ ಎಷ್ಟು ಕದಡಿಹೋಗುತ್ತೆಂಬುದು ತಿಳಿಯಲಿಲ್ಲ. ಮರುದಿನ ಬೆಳಿಗ್ಗೆ ಏಳುವಾಗಲೇ ಅವಳ ಮನಸ್ಸಿನಲ್ಲಿ ಯಾವ ವಿಧವಾದ ಚಂಚಲತೆಯೂ ತೋರದೆ ಅವಳ ಮನಸ್ಸು

ಶಾಂತವಾಗಿದ್ದಂತೆ ಅವಳಿಗೆ ತೋರಿತು. ಹೊರಗೆ ನೋಡುತ್ತಲೇ ಶ್ರಾವಣ ಮಾಸದ ಪ್ರಭಾತಕಾಲದಂತೆ ಆಕಾಶದಲ್ಲಿ ಮೋಡಗಳು ಒತ್ತಾಗಿ ಸೇರಿ ಭೂಮಿಯಮೇಲೆ ಬೀಳುತ್ತಿದ್ದಂತೆ ಕಂಡಿತು. ಅಂತಹ ಸಮಯದಲ್ಲಿ ಹಾಸಿಗೆ ಯಮೇಲೆ ಮಲಗಿರುವುದೂ, ಏಳುವುದೂ ಎರಡೂ ಅವಳಿಗೆ ಒಂದಾಗಿ ಕಂಡಿತು. ಬಾಕಿ ದಿನಗಳಲ್ಲಿ ಏಳುವುದಕ್ಕೆ ಸ್ವಲ್ಪ ಹೊತ್ತಾದರೂ ಮನಸ್ಸಿಗೆ ಅದೇ ಬಹಳ ಸಂಕೋಚವಾಗುತ್ತಿತ್ತೆಂಬುದೇ ಇಂದು ಅವಳಿಗೆ ಗೊತ್ತಾಗ ಲಿಲ್ಲ. ತಾನು ಒಂದೆರಡು ಗಂಟೆ ಹಾಸಿಗೆಯಮೇಲೆ ಹೆಚ್ಚಾಗಿ ಮಲಗಿದ್ದ ರಿಂದ ನಿಂತುಹೋಗುವಂತಹ ಕೆಲಸವೇನು ? ಮನೆಯ ತುಂಬ ಆಳು-ಕಾಳು ಗಳಿದ್ದಾರೆ. ದೊಡ್ಡ ಜಮೀನುದಾರಿಯ ಆಡಳಿತವೆಲ್ಲ ಸುವ್ಯವಸ್ಥೆಯಿಂದ ನಡೆಯುತ್ತಿದೆ. ತನ್ನ ಭವಿಷ್ಯಜೀವನವೆಲ್ಲ ಹೀಗೆ ನಿರಾಯಾಸವಾಗಿ ಶಾಂತ ವಾಗಿ ನಡೆಯುವುದಾದರೆ ಇದಕ್ಕಿಂತ ಉತ್ತಮವಾದದ್ದಿನ್ನೇನು ? ಅವಳು ಕಿಟಕಿಯಿಂದ ಹೊರಗೆ ನೋಡಿದಳು ; ಇಂದು ಅದೇಕೋ ಗಿಡಮರಗಳ ಹಸಿರುಬಣ್ಣವೇ ಬದಲಾದಂತಾಗಿ, ಅವುಗಳ ಎಲೆಗಳು ಸ್ಥಿರ-ಗಂಭೀರವಾಗಿ ಭಾಸವಾದವು. ಇನ್ನು ಪ್ರಪಂಚದಲ್ಲಿ ಕಲಹ-ವಿವಾದ, ಚರ್ಚೆ, ಅಶಾಂತಿ-ಉಪದ್ರವಗಳೇ ಇಲ್ಲ: ಒಂದೇ ರಾತ್ರಿಯಲ್ಲೇ ಭೂಮಿ, ಋಷಿ-ಮುನಿಗಳ ತಪೋವನವಾಗಿದೆಯೆಂದೆನಿಸಿತು.

ಹೃದಯದ ಅಂತ್ಯ ಅವಸಾನವನ್ನೇ ಶಾಂತಿಯೆಂದು ತಿಳಿದು ವಿಜಯ, ಪಾರ್ಶ್ವವಾಯುವಿನ ರೋಗಿಯಂತೆ ನಿಸ್ತಬ್ಧಳಾಗಿ ಇನ್ನೂ ಸ್ವಲ್ಪ ಹೊತ್ತು ಮಲಗಿರುತ್ತಿದ್ದಳು. ಆದರೆ ಅಷ್ಟರಲ್ಲೇ ಪರೇಶನ ತಾಯಿ ಬಂದು ಅವಳ ಶಾಂತಿಯನ್ನು ಭಂಗಮಾಡಿದಳು. ಬೆಳಿಗ್ಗೆ ಅಷ್ಟು ಹೊತ್ತಿಗೇ ಏಳುವ ವಳು ಇಷ್ಟು ಹೊತ್ತಾದರೂ ಏಳದಿರಲು ಕಾರಣವೇನೆಂದು ಅವಳು ಗಟ್ಟಿ ಯಾಗಿ ಎಚ್ಚರಿಸಿದಳು.

ಮುಖ ತೊಳೆದುಕೊಂಡು, ಬಟ್ಟೆ ಬದಲಾಯಿಸಿಕೊಂಡು ಅವಳು ಕೆಳಗಿಳಿಯುತ್ತಿರುವಾಗಲೇ ಇಂದು ರಾಸಬಿಹಾರಿಯೇ ಕೆಲಸಗಾರರ ಮೇಲ್ವಿ ಚಾರಕನಾಗಿದ್ದುದು ಕಂಡುಬಂದಿತು. ಇನ್ನು ಕೇವಲ ಎರಡೇ ದಿನ ಬಾಕಿ ಉಳಿಯಿತು. ಅಷ್ಟರಲ್ಲೇ ಸುಣ್ಣಬಣ್ಣಗಳಿಂದ ಮನೆಯನ್ನು ಹೊಸದು ಮಾಡಬೇಕಾಗಿತ್ತು.

ಹಿಂದಿನದಿನ ಮುಗಿದುಹೋದ ಕಠಿಣ ಸಮಸ್ಯೆ ಮತ್ತಿವತ್ತು ಏಳಲಾರ

ದೆಂದೂ ಅದಕ್ಕೆ ವಿರುದ್ಧವಾಗಿ ಯಾರೂ ಏನೂ ಮಾಡಲಾರರೆಂಬುದೂ ಅವಳಿಗೆ ಸ್ಥಿರಪಟ್ಟಿತ್ತು. ಆದ್ದರಿಂದ ಅದರ ಒಳಿತು-ಕೆಡಕುಗಳನ್ನು ವಿಚಾರ ಮಾಡಲು ಅವಳು ಸಿದ್ಧಳಿರಲಿಲ್ಲ. ಆ ಮಂಗಳಮಯ ಭಗವಂತನ ಇಚ್ಛೆಯಿಂದಲೇ ಈ ಮಂಗಳ ಕಾರ್ಯಗಳೆಲ್ಲ ತಾನಾಗಿಯೇ ನಡೆದುಹೋಗುತ್ತೆಂಬ ನಂಬಿಕೆಯಲ್ಲಿ ಅವಳು ಸ್ವಲ್ಪವೂ ಸಂದೇಹಪಡಲು ಎಡೆಕೊಡುವುದಿಲ್ಲ. ಆದರೆ ಇವೆಲ್ಲ ಅಸಂಭವವಾಗಿ ತೋರಿತು. ರಾಸಬಿಹಾರಿ ಕೆಳಗೇ ಇದ್ದಾನೆ. ತಾನು ಕೆಳಗೆ ಹೋದಕೂಡಲೆ ಅವನ ಭೇಟಿಯಾಗುತ್ತೆಂಬುದು ಅವಳ ಮನಸ್ಸಿಗೆ ಬಂದಕೂಡಲೆ ಅವಳ ಮೈಯೆಲ್ಲ ಸಿಡುಗುಟ್ಟಿದಂತಾಯಿತು. ಇದ್ದಕ್ಕಿದ್ದಂತೆ ಅವಳು ವಾಪಸು ತಿರುಗಿ ಕೈಸಾಲೆಯಲ್ಲೇ ಬಹಳ ಹೊತ್ತು ತಿರುಗಾಡುತ್ತಿದ್ದಳು. ಆದರೂ ಹೊತ್ತು ಹೋಗಲಿಲ್ಲ. ಕೂಡಲೆ ಅವಳಿಗೆ ತನ್ನ ಬಾಲ್ಯ ಸ್ನೇಹಿತರ ಸ್ಮರಣೆ ಬಂದಿತು. ಬಹಳ ದಿನಗಳಿಂದ ಅವರೊಡನೆ ಭೇಟಿ ಇಲ್ಲ. ಕಾಗದ-ಪತ್ರಗಳೂ ಇಲ್ಲ. ಇಂದು ಅವರ ನೆನಪಾದೊಡನೆಯೇ ಅವಳು ಕೋಣೆಯಲ್ಲಿ ಹೋಗಿ ಕಾಗದ ಬರೆಯಲು ಕುಳಿತುಕೊಂಡಳು. ಅವಳ ಮನಸ್ಸಿನಲ್ಲಿ ಅಗಾಧ ದುಃಖ ಅಡಗಿತ್ತು. ಕಾಗದದಲ್ಲಿ ಅದನ್ನೆಲ್ಲ ತೋಡಿಕೊಳ್ಳಲು ಮಗ್ನಳಾದಳು. ಹೀಗೇ ಎಷ್ಟು ಹೊತ್ತು ಕಳೆಯಿತೆಂಬುದಾಗಲೀ, ಅವಳೆಷ್ಟು ಕಣ್ಣೀರು ಸುರಿಸಿದಳೆಂಬುದಾಗಲೀ, ಅವಳಿಗೇ ತಿಳಿಯಲಿಲ್ಲ. ಅಷ್ಟರಲ್ಲೇ ಪರೇಶನ ತಾಯಿ ಬಂದು—"ಒಂದು ಬಡಿಯಿತು ತಾಯಿ, ಊಟಕ್ಕೇಳುವುದಿಲ್ಲವೇ?" ಎಂದಳು.

ಗಡಿಯಾರವನ್ನು ನೋಡಿ ಅವಳು ಮತ್ತೆ ಬರೆಯುವುದಕ್ಕೆ ತೊಡಗಬೇಕೆನ್ನುವಷ್ಟರಲ್ಲೇ ಪರೇಶನ ತಾಯಿ—"ತಾಯಿ, ಡಾಕ್ಟರ್ ಬಾಬುಗಳು ಬರುತ್ತಿದ್ದಾರೆ" ಎಂದು ಅವಳು ಕಣ್ಮರೆಯಾದಳು. ವಿಜಯಳು ಚಕಿತಳಾಗಿ ನೋಡಿದಳು. ಕೈಸಾಲೆಯ ಆ ಮೂಲೆಯಲ್ಲಿ ಪರೇಶನ ಹಿಂದೆ ಡಾಕ್ಟರರು ಬರುತ್ತಿದ್ದರು.

ಇದಕ್ಕೆ ಮುಂಚೆ ಅವರೆಷ್ಟೋ ಬಾರಿ ಬಂದಿದ್ದರೂ, ಹೀಗೆ ಮುಂಚೆ ತಿಳಿಸದೆ ಬರುತ್ತಾರೆಂದು ಅವಳ ಕಲ್ಪನೆಗೂ ಬಂದಿರಲಿಲ್ಲ. ಅವಳ ಮುಖ ಬಾಡಿ, ಕೂದಲು ಅಲ್ಲಲ್ಲಿ ಹಾರಾಡುತ್ತಿತ್ತು. ಡಾಕ್ಟರರು ಕೋಣೆಯಲ್ಲಿ ಕಾಲಿಟ್ಟು—"ಅವತ್ತೇಕೆ ನನ್ನನ್ನು ಗುರುತಿಸಲಿಷ್ಟಪಡಲಿಲ್ಲ?" ಎಂದು ಒಂದು ಕುರ್ಚಿಯನ್ನೆಳೆದುಕೊಂಡು ಕುಳಿತ. ಅವನ ಕಂಠಸ್ವರದಿಂದ ಮತ್ತು ಅವನ

ಹೃದಯದಿಂದ ಹೊರಸೂಸಿದ ಆತ್ಮಗ್ಲಾನಿಗೆ ವಿಜಯಳು ಉತ್ತರ ಕೊಡುವುದಂತೂ ಇರಲಿ, ಅವಳ ಹೃದಯ ಅಸೀಮ ವೇದನೆಯಿಂದ ತುಂಬಿಹೋಯಿತು. ಅವಳು ವ್ಯಾಕುಲತೆ ಮತ್ತು ಉದ್ವೇಗದಿಂದ ಎದ್ದುನಿಂತು ಕೇಳಿದಳು—"ನಿಮಗೇನಾಗಿದೆ ನರೇಂದ್ರ ಬಾಬು? ದೇಹಸ್ಥಿತಿ ಚೆನ್ನಾಗಿಲ್ಲವೇ?"

ನರೇಂದ್ರ ತಲೆಯಲ್ಲಾಡಿಸಿ ಹೇಳಿದ—"ಈಗ ಸರಿಯಾಗಿದೆ; ಸಾಧಾರಣ ಜ್ವರ ಬಂದಿತ್ತು. ಅದರಿಂದಲೇ ಇಷ್ಟು ನಿಶ್ಯಕ್ತಿಯಾಗಿ ಇದಕ್ಕಿಂತ ಮೊದಲು ಬರಲಾಗಲಿಲ್ಲ........ಉಂ,ಅವತ್ತು ನಾನೇನು ಅಪರಾಧಮಾಡಿದ್ದೆ, ಹೇಳಿ ಈಗ."

ಪರೇಶ ನಿಂತಿದ್ದ, ವಿಜಯಳು ಅವನಿಗೆ ಹೇಳಿದಳು—"ನಿಮ್ಮಮ್ಮನಿಗೆ ಜಾಗ್ರತೆಯಾಗಿ ಸ್ವಲ್ಪ ಉಪಹಾರ ತೊಗೊಂಡು ಬರುವಂತೆ ಹೇಳು ಪರೇಶ" ಎಂದು ನರೇಂದ್ರನ ಕಡೆ ತಿರುಗಿ ಹೇಳಿದಳು—"ನೀವು ಬೆಳಗ್ಗಿನಿಂದ ಉಪವಾಸವಿರುವಂತಿದೆ."

"ಆದರೆ ಅದರ ಚಿಂತೆ ನನಗಿಲ್ಲ."

"ನನಗಿದೆಯಲ್ಲ" ಎಂದು ಅವಳು ಪರೇಶನ ಹಿಂದೆಯೇ ಕೆಳಗೆ ಹೋದಳು.

ಸ್ವಲ್ಪ ಹೊತ್ತಿನಮೇಲೆ ಅವಳು ಉಪಾಹಾರದ ತಟ್ಟೆಯಲ್ಲಿ ಒಂದು ಲೋಟ ಬಿಸಿಯಾದ ಹಾಲನ್ನೂ ಇಟ್ಟುಕೊಂಡುಬಂದು ,ನರೇಂದ್ರನ ಮುಂದಿಟ್ಟಳು. ನರೇಂದ್ರ ಅದಕ್ಕೆ ಗಮನಕೊಟ್ಟು ಹೇಳಿದ—"ನೀವು ವಿಚಿತ್ರ ವ್ಯಕ್ತಿ. ಇನ್ನೊಬ್ಬರ ಮನೆಯಲ್ಲಿ ಗುರುತಿಲ್ಲದವರಂತೆ ಇರುತ್ತೀರಿ, ನಿಮ್ಮ ಮನೆಯಲ್ಲಿ ಇಷ್ಟು ಉಪಚಾರ ಮಾಡುತ್ತೀರಿ. ಆಶ್ಚರ್ಯವಾಗುತ್ತೆ. ಅಂದಿನ ಘಟನೆಯನ್ನು ನೋಡಿ, ನಿಮಗೆ ಮುಂಚಿತವಾಗಿ ತಿಳಿಸಿದರೆ ನಿಮ್ಮ ಭೇಟಿಯಾಗುತ್ತೋ ಇಲ್ಲವೋ ಎಂದುಕೊಂಡಿದ್ದೆ. ಆದ್ದರಿಂದಲೇ ಮುಂಚೆ ತಿಳಿಸದೆ ಪರೇಶನ ಜೊತೆಗೆ ಬಂದು ನಿಮ್ಮನ್ನು ಹಿಡಿದೆ. ಈಗ ನೋಡಿದರೆ ಹೀಗಾಗಿದೆ."

ವಿಜಯಳೇನೂ ಮಾತಾಡಲಿಲ್ಲ. ನರೇಂದ್ರನೇ ಸ್ವಲ್ಪ ಹೊತ್ತು ಸುಮ್ಮನಿದ್ದು ಹೇಳಿದ—"ಸಾಮಾನ್ಯ ಜ್ವರ. ಆದರೆ ಅದರಿಂದ ಆಗಿರುವ ನಿಶ್ಯಕ್ತಿ ಅಷ್ಟಿಷ್ಟಲ್ಲ. ನನಗೆ ಅದರಿಂದ ಆಶ್ಚರ್ಯವಾಗುತ್ತದೆ. ಮತ್ತೆ ಶೀಘ್ರದಲ್ಲೇ ನಿಮ್ಮ ಬೇಟಿಯಾಗುವಂತಿದ್ದರೆ ನಾನಿವತ್ತು ಬರುತ್ತಲೇ ಇರ

ಲಿಲ್ಲ. ಈ ಹಾದಿಯಲ್ಲಿ ಬರುವುದಕ್ಕೇ ನನಗೆ ಬಹಳ ಕಷ್ಟವಾಗುತ್ತೆ." ವಿಜಯ ಸುಮ್ಮನೆ ಇದ್ದಳು. ಅವಳಿಗೊಂದೂ ಅರ್ಥವಾಗಲಿಲ್ಲ. ನರೇಂದ್ರ ಹಾಲಿನ ಲೋಟವನ್ನು ಬರಿದುಮಾಡಿಟ್ಟು ಹೇಳಿದ—"ನಾನಿಲ್ಲಿಯ ಕೆಲಸ ವನ್ನು ಬಿಟ್ಟುಬಿಟ್ಟದ್ದು ನಿಮ್ಮ ಕಿವಿಗೆ ಮುಟ್ಟಿರಲಾರದು. ಇವತ್ತು ಇಷ್ಟು ಜಾಗ್ರತೆಯಾಗಿ ಬರಲು ಇದೂ ಒಂದು ದೊಡ್ಡ ಕಾರಣ." ಜೇಬಿನಿಂದ ಒಂದು ಕೆಂಪುಬಣ್ಣದ ಲಕ್ಕೋಟೆಯನು ತೆಗೆದು ಹೇಳಿದ—"ನಿಮ್ಮ ಮದುವೆಯ ಆಹ್ವಾನಪತ್ರ ನನಗೆ ಮುಟ್ಟಿತು. ಆದರೆ ಮದವೆ ನೋಡಿ ಕೊಂಡು ಹೋಗುವ ಭಾಗ್ಯ ನನಗಿಲ್ಲ. ಅಂದು ಬೆಳಿಗ್ಗೆಯೇ ಕರಾಚಿ ಯಿಂದ ನಮ್ಮ ಹಡಗುಹೊರಡುತ್ತದೆ."

"ಕರಾಚಿಯಿಂದಲೇ? ನೀವೆಲ್ಲಿಗೆ ಹೊರಟಿದ್ದೀರಿ?" ವಿಜಯ ಗಾಬರಿ ಯಾಗಿ ಕೇಳಿದಳು.

"ದಕ್ಷಿಣ ಆಫ್ರಿಕಾಕ್ಕೆ. ಪಂಜಾಬಿನಲ್ಲೂ ಒಂದು ಕೆಲಸ ಸಿಕ್ಕು ವಂತಿತ್ತು. ಆದರೆ ಕೆಲಸಕ್ಕೆ ಹೋದಮೇಲೆ ದೊಡ್ಡ ಕೆಲಸಮಾಡುವುದೇ ಸರಿಯೆನಿಸಿತು. ನನಗೆ ಪಂಜಾಬು ಹೇಗೋ ಕೇಪ್ ಕಾಲೋನಿಯೂ ಹಾಗೇ ಅಲ್ಲವೇ? ಇನ್ನು ಯಾವಾಗಲೂ ನಮ್ಮ ಬೇಟಿಯಾಗಲಾರದಲ್ಲವೇ?"

ಕೊನೆಯ ಮಾತು ವಿಜಯಳ ಕಿವಿಗೇ ಬೀಳಲಿಲ್ಲ. ಅವಳು ಅತ್ಯಂತ ಉದ್ವೇಗದಿಂದ ಕೇಳಿದಳು—"ನಳಿನಿ ಒಪ್ಪಿಕೊಂಡಳೇ? ಒಪ್ಪಿದರೂ ನೀವಿಷ್ಟು ಜಾಗ್ರತೆ ಹೋಗುವುದಕ್ಕಾಗುವುದಿಲ್ಲ. ಅವಳಿಗೆ ನೀವೆಲ್ಲ ಬಿಡಿಸಿ ಹೇಳಿದ್ದೀರಾ? ಅಷ್ಟು ದೂರ ಹೋಗಲು ಅವಳು ಹೇಗೆ ಸಮ್ಮತಿಯಿತ್ತಳು?"

ನರೇಂದ್ರ ನಗುಮುಖದಿಂದ ಹೇಳಿದ—"ಸ್ವಲ್ಪ ತಡೆಯಿರಿ. ಇದು ವರೆಗೂ ಯಾರಿಗೂ ಎಲ್ಲ ವಿಷಯವನ್ನೂ ಬಿಡಿಸಿ ಹೇಳಿಲ್ಲ. ಆದರೆ...."

ಆ ಮಾತನ್ನು ಪೂರ್ತಿ ಕೇಳುವಷ್ಟು ಸಹನೆಯೂ ವಿಜಯಳಲ್ಲಿರಲಿಲ್ಲ. ಮಧ್ಯದಲ್ಲೇ ಅವಳು ಸಿಡುಗುಟ್ಟುತ್ತಾ ಹೇಳಿದಳು—"ಎಂದಿಗೂ ಕೂಡದು. ನಮ್ಮಿಷ್ಟವಿರಲಿ ಇಲ್ಲದಿರಲಿ, ಪೆಟ್ಟಿಗೆ ಹಾಸಿಗೆಯಂತೆ ಯಾವಾಗಬೇಕೋ ಆಗ ಹಗ್ಗದಿಂದ ಕಟ್ಟಿಹಾಕಿದರೆ ನಾವು ಹೋಗಬೇಕೆಂದು ತಿಳಿದಿರೇನು? ಅದೆಂದಿಗೂ ಸಾಧ್ಯವಿಲ್ಲ. ಅವಳ ಇಷ್ಟವಿಲ್ಲದೆ ಅವಳನ್ನೆಂದಿಗೂ ಅಷ್ಟು ದೂರ ಕರೆದೊಯ್ಯ ಕೂಡದು."

ನರೇಂದ್ರನ ಮುಖ ಚಿಕ್ಕದಾಯಿತು. ಅವನು ವಿಹ್ವಲನಾಗಿ

ನೋಡುತ್ತಾ ಕೇಳಿದ—"ಅದೇನು ವಿಷಯ ? ಅದನ್ನಾದರೂ ಹೇಳಿ. ಇಲ್ಲಿಗೆ ಬರುವುದಕ್ಕೆ ಮುಂಚೆ ದಯಾಳಬಾಬುಗಳ ಭೇಟಿಯಾಗಿತ್ತು. ನನ್ನ ಮಾತನ್ನು ಕೇಳಿ ಅವರು ಗಾಬರಿಯಾಗಿ ನಿಮ್ಮಂತೆ ಏನೇನೋ ಅಡ್ಡಿಗಳನ್ನು ಹೇಳಿದರು. ನನಗೊಂದೂ ಅರ್ಥವಾಗಲಿಲ್ಲ. ಇಷ್ಟು ಜನಗಳಲ್ಲಿ ನಾನು ಹೋಗುವುದು ಬಿಡುವುದು ನಳಿನಿಯೊಬ್ಬರ ಅಭಿಪ್ರಾಯವನ್ನೇಕೆ ಅವಲಂಬಿಸ ಬೇಕು?........ಅವರನ್ನೇಕೆ ಕಟ್ಟಿಹಾಕ ಬೇಕು ? ಇದೆಲ್ಲ ನನಗೊಂದು ಒಗಟಿ ಯಂತಿದೆ. ಏನು ವಿಷಯವೆಂಬುದನ್ನು ಸ್ವಲ್ಪ ಬಿಡಿಸಿ ಹೇಳಬಾರದೇ ?"

ವಿಜಯಳು ಸ್ಥಿರದೃಷ್ಟಿಯಿಂದ ಅವನ ಮುಖವನ್ನು ನೋಡಿತ್ತಿದ್ದು ನಿಧಾನವಾಗಿ ಕೇಳಿದಳು—"ಅವಳೊಂದಿಗೆ ನೀವು ಮದುವೆಯ ಪ್ರಸ್ತಾಪ ವೆತ್ತಿಲ್ಲವೇ ?"

ನರೇಂದ್ರನಿಗೆ ಆಕಾಶದಿಂದ ಕುಸಿದುಬಿದ್ದಂತಾಯಿತು. ಅವನು " ಉಹುಂ, ಎಂದೂ ಇಲ್ಲ," ಎಂದ.

ಕೂಡಲೆ ಒಂದರಕ್ಷಣ ವಿಜಯಳ ಮುಖ ಆರಕ್ತವಾಯಿತು. ಆದರೆ ಕೂಡಲೆ ಅವಳದನ್ನು ತೋರಗೊಡದೆ ಹೇಳಿದಳು—"ಮಾಡದಿದ್ದರೂ, ಅದನ್ನು ಮಾಡುವುದೂ ಉಚಿತವಾಗಿರಲಿಲ್ಲವೇ? ನಿಮ್ಮ ಮನೋಭಾವ ವೇನು ರಹಸ್ಯವಾಗಿಲ್ಲ."

ನರೇಂದ್ರ ಬಹಳ ಹೊತ್ತು ಸ್ತಂಭಿತನಾಗಿ ಕುಳಿತಿದ್ದು ಹೇಳಿದ"—ಈ ಅನಿಷ್ಟಕ್ಕೆ ಯಾರು ಮೂಲವೆಂಬುದೇ ತೋರದಾಗಿದೆ. ಅವರಂತೂ ಎಂದಿಗೂ ಇಂತಹ ಮಾತನ್ನು ಹೇಳಲಾರರು. ಏಕೆಂದರೆ ಇದು ಅಸಂಭವ ವೆಂದು ಅವರಿಗೆ ಮೊದಲೇ ತಿಳಿದಿತ್ತು. ಆದರೆ........"

"ಅಸಂಭವವೇಕೆ ?"

"ಹುಂ, ಹೋಗಲಿ ಬಿಡಿ. ಅದರಲ್ಲಿ ಒಂದು ಕಾರಣವೇನೆಂದರೆ ನಾನು ಹಿಂದು, ಅವರು ಬ್ರಾಹ್ಮ-ಮಹಿಳೆ. ಅಲ್ಲದೆ ನಮ್ಮ ಜಾತಿಯೂ ಬೇರೆಬೇರೆ."

"ನೀವು ಜಾತಿಯನ್ನು ನಂಬುತ್ತೀರಾ ?" ವಿಜಯಳು ಮಂಕಾಗಿ ಕೇಳಿದಳು.

"ನಂಬದೆ ಏನು? ಹಿಂದೂಸಮಾಜದಲ್ಲಿ ಒಂದು ಜಾತಿಯವರನ್ನು ಇನ್ನೊಂದು ಜಾತಿಯವರು ಲಗ್ನವಾಗುವುದಿಲ್ಲ........ಇದನ್ನು ನೀವು ನಂಬುವುದಿಲ್ಲವೇ ?"

"ಅದನ್ನು ನಂಬುತ್ತೇನೆ. ಆದರೆ ಅದು ಸರಿ ಎನ್ನುವುದಿಲ್ಲ. ನೀವಿಷ್ಟು ಸುಶಿಕ್ಷಿತರಾಗಿ ಅದು ಸರಿಯೆಂದು ಹೇಗೆ ನಂಬುತ್ತೀರಿ ?"

ನರೇಂದ್ರ ನಕ್ಕು ಹೇಳಿದ—"ಡಾಕ್ಟರ ಬುದ್ಧಿ ಸ್ವಲ್ಪ ಮಣ್ಣಿನ ಮುಷ್ಟಿ ಇದ್ದ ಹಾಗೆ. ಅದರಲ್ಲೂ ನನ್ನಂತಹವರಿಗೆ ಸೂಕ್ಷ್ಮದರ್ಶಿನಿಯಲ್ಲಿ ಜೀವಾಣುಗಳನ್ನು ಪರೀಕ್ಷೆ ಮಾಡುವುದರಲ್ಲೇ ಕಾಲ ಕಳೆದುಹೋಗುತ್ತೆ. ಆದ್ದರಿಂದ ಈ ವಿಚಾರದಲ್ಲಿ ನನ್ನನ್ನು ಕ್ಷಮಿಸಿಬಿಡಿ."

ನರೇಂದ್ರ ಉಪಾಯವಾಗಿ ಜಾತಿಭೇದದ ಕೋಟೆಯನ್ನು ಬಿಡಿಸಿದನೆಂದು ವಿಜಯ ಅಂದುಕೊಂಡಳು. ಆದ್ದರಿಂದ ಅವಳು ಬಾಡಿದ ಮುಖದಿಂದಲೇ ಉತ್ತರ ಹೇಳಿದಳು—" ಹೋಗಲಿ, ಜೇರೆ ಜಾತಿಯ ವಿಷಯ ಬಿಟ್ಟುಬಿಡಿ. ಜಾತಿ ಒಂದೇ ಆಗಿರುವಾಗಲೂ ಜೇರೆ ಧರ್ಮಾವಲಂಬಿಯಾದ ಮಾತ್ರಕ್ಕೆ ನೀವು ಲಗ್ನವಾಗುವುದು ಅಸಂಭವವೆನ್ನುತ್ತೀರೇನು ? ನೀವೆಂತಹ ಹಿಂದೂಗಳು ? ಆ ಸಮಾಜದಿಂದ ಬಹಿಷ್ಕೃತರು. ನಿಮ್ಮಂತಹವರಿಗೂ ಬ್ರಾಹ್ಮಕನ್ಯೆ ತಕ್ಕವಳಲ್ಲವೆಂದು ನಿಮ್ಮ ಅಭಿಪ್ರಾಯವೇನು ? ಅದೇಕೆ ನಿಮಗಿಷ್ಟು ಅಹಂಕಾರ ? ನಿಮ್ಮ ಅಭಿಪ್ರಾಯ ಹೀಗಿದ್ದರೆ, ನೀವು ಮೊದಲೇ ಏಕೆ ಹೇಳಲಿಲ್ಲ ? "

ಮಾತಾಡುತ್ತ ಅವಳ ಕಣ್ಣುಗಳಲ್ಲಿ ನೀರು ತುಂಬಿಬಂದಿತು. ಅದನ್ನು ಮುಚ್ಚಿಕೊಳ್ಳುವುದಕ್ಕಾಗಿ ಅವಳು ಮುಖ ತಿರುಗಿಸಿಕೊಂಡಳು. ಅದು ನರೇಂದ್ರನ ದೃಷ್ಟಿಗೆ ಬೀಳದಿರಲಿಲ್ಲ. ಅವನು ಆಶ್ಚರ್ಯದಿಂದ ಹೇಳಿದ— "ನೀವೀಗ ಹೇಳಿದ್ದು ನನ್ನ ಅಭಿಪ್ರಾಯವಲ್ಲ."

ವಿಜಯಳು ಮುಖ ತಿರುಗಿಸಿಕೊಂಡೇ ಬಿಗಿದ ಕಂಠದಿಂದಲೇ ಹೇಳಿದಳು—"ನಿಜವಾಗಿಯೂ ಇದೇ ನಿಮ್ಮ ಅಭಿಪ್ರಾಯ."

"ಅಲ್ಲ. ನೀವು ನನ್ನನ್ನು ಪರೀಕ್ಷೆ ಮಾಡಿದ್ದರೆ, ಇದು ನನ್ನ ನಿಜವಾದ ಅಭಿಪ್ರಾಯವೇಕೆ? ಸುಳ್ಳಭಿಪ್ರಾಯವೂ ಅಲ್ಲವೆಂದು ತಿಳಿಯುತ್ತಿದ್ದಿರಿ. ಅಲ್ಲದೆ ನಳಿನಿಯ ವಿಷಯ ಕಟ್ಟಿಕೊಂಡು ನೀವೇಕೆ ಇಷ್ಟು ಒದ್ದಾಡುತ್ತಿದ್ದೀರಿ ? ಅವರ ಮನಸ್ಸೆಲ್ಲಿದೆಯೆಂಬುದು ನನಗೆ ಗೊತ್ತಿದೆ. ನಾನೇಕೆ ಅಷ್ಟು ದೂರ ಓಡಿಹೋಗುತ್ತಿದ್ದೇನೆಂಬುದೂ ಅವರಿಗೆ ಗೊತ್ತಿದೆ. ಆದ್ದರಿಂದ ನಾನು ಹೋಗುವ ವಿಷಯಕ್ಕಾಗಿ ನೀವಿಷ್ಟು ದುಃಖಪಡಬೇಕಾಗಿಲ್ಲ."

ವಿಜಯ ಮಿಂಚಿನಂತೆ ತಿರುಗಿ ಹೇಳಿದಳು—"ಅವಳಿಗೆ ಒಪ್ಪಿಗೆಯಿದ್ದ ಮಾತ್ರಕ್ಕೇ ನೀವೆಲ್ಲಿಂದರಲ್ಲಿಗೆ ಹೋಗುತ್ತೀರೇನು ?"

ನರೇಂದ್ರನ ಹೃದಯದಲ್ಲಿ ಈ ಮಾತು ಮಿಂಚಿನಂತೆ ಮಿಡಿಯಿತು. ಕೂಡಲೆ ಅವನ ದೃಷ್ಟಿ ಮೇಜಿನಮೇಲಿದ್ದ ಆ ಕೆಂಪುಬಣ್ಣದ ಆಹ್ವಾನ ಪತ್ರಿಕೆಯ ಮೇಲೆ ಬಿದ್ದಿತು. ಅವನೊಂದು ಕ್ಷಣ ಸ್ಥಿರವಾಗಿದ್ದು ನಿಧಾನವಾಗಿ ಹೇಳಿದ—"ನಿಮಗೆ ಇಷ್ಟವಿಲ್ಲದಿದ್ದರೂ ನಾನೇನೂ ಮಾಡುವಂತಿಲ್ಲವೆಂಬುದೂ ಸರಿ. ಆದರೆ ನನ್ನ ವಿಷಯವೆಲ್ಲ ನಿಮಗೆ ಗೊತ್ತೇ ಇದೆ. ನನ್ನ ಜೀವನದ ಹಂಬಲವೂ ನಿಮಗೆ ತಿಳಿದಿದೆ. ಪರದೇಶದಲ್ಲಿ ಆ ಹಂಬಲ ಎಂದಾದರೂ ಪೂರ್ತಿಯಾಗಬಹುದು. ಈ ದೇಶದಲ್ಲಿ ಈ ಕೆಲಸಕ್ಕೆ ಬಾರದ ದೀನದರಿದ್ರರಿದ್ದರೂ ಒಂದೇ, ಇಲ್ಲದಿದ್ದರೂ ಒಂದೇ. ಅದರಿಂದ ದೇಶಕ್ಕೆ ಲಾಭನಷ್ಟಗಳೇನೂ ಇಲ್ಲ. ನಾನು ಹೋಗುವುದಕ್ಕೆ ಅಡ್ಡಿಪಡಿಸಬೇಡಿ."

ವಿಜಯಳು ತಲೆ ತಗ್ಗಿಸಿ ಮೌನವಾಗಿದ್ದು ಸ್ವಲ್ಪ ಹೊತ್ತಾದಮೇಲೆ ಹೇಳಿದಳು—"ನೀವು ದೀನದರಿದ್ರರೇನೂ ಅಲ್ಲ, ನಿಮಗೆಲ್ಲ ಇದೆ. ಇಷ್ಟಪಟ್ಟರೆ ಎಲ್ಲ ವಾಪಸು ಪಡೆಯಬಹುದು."

"ಇಷ್ಟಪಟ್ಟಕೂಡಲೆ ವಾಪಸು ಪಡೆಯಲಾಗುವುದಿಲ್ಲ. ನೀವು ಕೊಡ ಬಯಸಿದ್ದು ಮಾತ್ರ ನನಗೆ ಯಾವಾಗಲೂ ನೆನಪಿದೆ ........ ಮುಂದೆ ಯಾವಾಗಲೂ ನೆನಪಿರುತ್ತೆ. ಆದರೆ ನೀವೇ ನೋಡಿ, ತೆಗೆದುಕೊಳ್ಳುವುದಕ್ಕೂ ಅಧಿಕಾರ ಬೇಕು. ಆ ಅಧಿಕಾರ ನನ್ನಲ್ಲಿಲ್ಲ."

ವಿಜಯ ಮೊದಲಿನಂತೆ ತಲೆ ತಗ್ಗಿಸಿಕೊಂಡೇ ಉತ್ತರ ಹೇಳಿದಳು— "ಅಧಿಕಾರವೇಕಿಲ್ಲ? ಆಸ್ತಿಯೆಲ್ಲ ನನ್ನ ತಂದೆಯವರದು, ನನ್ನದಲ್ಲ. ಇಲ್ಲದಿದ್ದರೆ, ಅಂದು ನೀವು ದಾವಾ ಹಾಕುವ ವಿಷಯವನ್ನು ಹಾಸ್ಯಕ್ಕೂ ಹೇಳುವಂತಿರಲಿಲ್ಲ. ನಾನಾಗಿದ್ದರೆ ಇಷ್ಟಕ್ಕೇ ನಿಲ್ಲುತ್ತಿರಲಿಲ್ಲ. ಅವರು ಕೊಟ್ಟಿದ್ದೆಲ್ಲವನ್ನು ಬಲಾತ್ಕಾರದಿಂದ ಸ್ವಾಧೀನಕ್ಕೆ ತೆಗೆದುಕೊಳ್ಳುತ್ತಿದ್ದೆ. ಅದರಲ್ಲಿ ಎಳ್ಳಷ್ಟೂ ಬಿಡುತ್ತಿರಲಿಲ್ಲ."

ನರೇಂದ್ರನೇನೂ ಮಾತಾಡಲಿಲ್ಲ. ವಿಜಯಳೂ ಏನೂ ಹೇಳದೆ ಸುಮ್ಮನೆ ತಲೆ ತಗ್ಗಿಸಿಕೊಂಡೇ ಕುಳಿತಿದ್ದಳು. ಸುಮಾರು ಎರಡು ನಿಮಿಷ ಹೀಗೇ ನೀರವತೆ ಮೂಡಿತ್ತು. ಆಮೇಲೆ ಒಂದು ಬಿಸಿಯುಸಿರನ್ನು ಕೇಳಿ ಚಕಿತಳಾಗಿ ವಿಜಯ ಮುಖವೆತ್ತಿ ನೋಡಿದಳು. ನರೇಂದ್ರನ ಮುಖ ಏನೋ ಒಂದು ಬಗೆಯಾಗಿತ್ತು. ಇಬ್ಬರ ದೃಷ್ಟಿಯೂ ಒಂದಾಗುತ್ತಲೇ ಅವನು ಅಕಸ್ಮಾತ್ ಹೇಳಿದ—"ನಳಿನಿ ಸರಿಯಾಗಿ ಅರ್ಥಮಾಡಿಕೊಂಡಿದ್ದಳು,

ವಿಜಯಾ, ಆದರೆ ನಾನು ನಂಬಲಿಲ್ಲ. ನನ್ನಂತಹ ಹುರುಳಿಲ್ಲದ ಪೊಳ್ಳು ಮನುಷ್ಯನೂ ಕೆಲವರಿಗೆ ಬೇಕಾಗುತ್ತೇಂಬುದನ್ನು ನಾನು ಅಸಂಭವವೆಂದು ತಿಳಿದು ನಕ್ಕು ಹಾರಿಸಿಬಿಟ್ಟಿದ್ದೆ. ಆದರೆ ಈ ಅಸಂಗತೇಚ್ಛೆ ನಿನ್ನ ಮನಸ್ಸಿಗೆ ಬಂದಿದ್ದರೆ ನೀನು ಆಜ್ಞೆ ಏಕೆ ಮಾಡಲಿಲ್ಲ? ನನ್ನ ಪಾಲಿಗೆ ಇದರ ಸ್ವಪ್ನ ಕಾಣುವುದೂ ಹುಚ್ಚುತನವೆನಿಸಿತ್ತು ವಿಜಯ!"

ಇಂದು ಇಷ್ಟು ದಿನದಮೇಲೆ ಅವನ ಬಾಯಿಂದ ತನ್ನ ಹೆಸರನ್ನು ಕೇಳಿ ವಿಜಯಳು ನಡುಗಿದಳು. ಬಾಯಿಮೇಲೆ ಸೆರಗು ಹಾಕಿಕೊಂಡು ಚಿಮ್ಮಿ ಬರುತ್ತಿದ್ದ ಅಳುವನ್ನು ಅವಳು ತಡೆದಳು.

ನರೇಂದ್ರ ಹೆಜ್ಜೆಯ ಸದ್ದನ್ನು ಕೇಳಿ ತಿರುಗಿ ನೋಡಿದ. ದಯಾಳರು ಒಳಗೆ ಬರುತ್ತಿದ್ದರು.

ದಯಾಳರು ಬಾಗಿಲ ಹತ್ತಿರ ನಿಂತು ಒಂದು ಕ್ಷಣ ಇಬ್ಬರ ಮುಖವನ್ನೂ ನೋಡಿದರು. ಆಮೇಲೆ ಅವರು ವಿಜಯಳ ಹತ್ತಿರ ಹೋಗಿ ಸೋಫದ ಮೇಲೆ ಅವಳ ಪಕ್ಕದಲ್ಲಿ ಕುಳಿತು ಅವಳ ತಲೆಯಮೇಲೆ ಬಲಗೈಯನ್ನಿಟ್ಟು "ಅಮ್ಮ" ಎಂದರು.

ಅವಳು ಅವರ ಆಗಮನದಿಂದಲೇ ಉಕ್ಕಿಬರುತ್ತಿದ್ದ ದುಃಖವನ್ನು ಬಹಳ ಪ್ರಯತ್ನದಿಂದ ತಡೆದಿದ್ದಳು. ಆದರೆ ಅವರ ಮಮತೆಯ 'ಅಮ್ಮ' ಎನ್ನುವ ದನಿಯಿಂದ ಎಲ್ಲ ತಿರುಗುಮುರುಗಾಯಿತು. ತನ್ನ ತಂದೆಯ ನೆನಪಾದ್ದರಿಂದಲೇ ಅವಳ ಸ್ಥೈರಣೆ ಮೀರಿತೋ ಏನೋ! ಕೂಡಲೆ ಅವಳು ಅವರ ತೊಡೆಯಮೇಲೆ ಬೋರಲಾಗಿ ಮಲಗಿ ಮುಖ ಮುಚ್ಚಿಕೊಂಡು ಅತ್ತಳು.

ದಯಾಳರ ಕಣ್ಣುಗಳಲ್ಲೂ ನೀರು ಹನಿಯಿತು. ಈ ಪ್ರಪಂಚದಲ್ಲಿ ಅವಳ ಈ ಮರ್ಮಾಂತ ವೇದನೆಯ ರೋದನದ ಇತಿಹಾಸ ಮೊದಲಿನಿಂದ ಕೊನೆಯವರೆಗೂ ಅವರಿಗೆ ಮಾತ್ರ ತಿಳಿದಿತ್ತು. ವಿಜಯಳ ತಲೆಯಮೇಲೆ ಕೈಯಾಡಿಸುತ್ತಾ ಅವರು ಹೇಳಿದರು—"ನನ್ನ ತಪ್ಪಿನಿಂದಲೇ ಇಷ್ಟು ಭಾರೀ ಅನ್ಯಾಯವಾಯಿತಮ್ಮ. ನಾನೇ ಈ ದುರ್ಘಟನೆಯನ್ನು ಮಾಡಿದೆ. ನಳಿನಿಯೊಂದಿಗೆ ಇದುವರೆಗೂ ಅದೇ ಮಾತಾಡುತ್ತಿದ್ದೆ. ಅವಳಿಗೆಲ್ಲ ತಿಳಿದಿತ್ತು. ಆದರೆ ಯಾರಿಗೆ ಗೊತ್ತಿತ್ತು........ನರೇಂದ್ರ ಮನಸ್ಸಿನಲ್ಲೇ ನಿನ್ನನ್ನು........ ಆದರೆ ಒಂದೂ ತಿಳಿಯದ ನಾನು ಇದಕ್ಕೆ ವಿರುದ್ಧವಾಗಿ ನಿನಗೆ ಹೇಳಿ ಈ ದುಃಖವನ್ನು ತಂದೊಡ್ಡಿದೆ. ಈಗ ಇದಕ್ಕೆ ಇನ್ನೇನಾದರೂ ಉಪಾಯ ...."

ಗೋಡೆಯ ಮೇಲಿದ್ದ ಗಡಿಯಾರದಲ್ಲಿ ಮೂರು ಹೊಡೆಯಿತು. ಮೂವರೂ ಸ್ತಬ್ಧರಾದರು. ದಯಾಳರ ತೊಡೆಯಮೇಲೆ ಮಲಗಿದ್ದ ವಿಜಯಳ ದುಃಖ ಕ್ರಮವಾಗಿ ಶಾಂತವಾಗುತ್ತಿತ್ತು. ಇದನ್ನು ತಿಳಿದು ಬಹಳ ಹೊತ್ತಿನಮೇಲೆ ದಯಾಳರು ಅವಳ ಬೆನ್ನಿನಮೇಲೆ ಕೈಯಾಡಿಸುತ್ತಾ ಕೇಳಿದರು—"ಇದಕ್ಕಿನ್ನೇನೂ ಉಪಾಯವಿಲ್ಲವೇ ಮಗು ?"

ವಿಜಯ ಹಾಗೆ ಮುಖವಿಟ್ಟುಕೊಂಡು ಹೇಳಿದಳು—"ಉಹುಂ, ಇಲ್ಲ. ಸಾವಿನ ಹೊರತು ನನಗಿನ್ನು ಬೇರೆ ಮಾರ್ಗವಿಲ್ಲ."

ದಯಾಳರು ಹೇಳಿದರು—"ಛೀಛೀ, ಮಗು ಆದರೆ........"

ವಿಜಯ ತಲೆಯಲ್ಲಾಡಿಸುತ್ತಾ ಹೇಳಿದಳು— "ಉಹುಂ, ಇನ್ನು ಇದರಲ್ಲಿ 'ಆದರೆ' ಇಲ್ಲ. ನಾನು ಮಾತು ಕೊಟ್ಟಾಗಿದೆ. ಬದುಕಿರುವವರೆಗೂ ಅದನ್ನು ಮುರಿಯುವ ಹಾಗಿಲ್ಲ ದಯಾಳಬಾಬು. ನನ್ನ ಹೊರತು........"

ಮಾತಾಡುತ್ತಿದ್ದಂತೆ ಮತ್ತೆ ಅವಳ ಕಂಠ ಬಿಗಿದು ಬಂದಿತು. ದಯಾಳರ ಬಾಯಿಂದಲೂ ಏನೂ ಹೊರಡಲಿಲ್ಲ. ಅವರು ಸುಮ್ಮನೆ ಅವಳ ಕೂದಲಿನ ಮೇಲೆ ಕೈಯಾಡಿಸುತ್ತಿದ್ದರು.

"ತಾಯಿ ಮೂರು ಬಡಿಯಿತು." ಪರೇಶನ ತಾಯಿ ಹೊರಗಿನಿಂದ ಮಗನ ಕೈಲಿ ಹೇಳಿಸಿದಳು.

ಇದನ್ನು ಕೇಳಿ ದಯಾಳರು ಸ್ನೇಹಪೂರ್ವಕವಾಗಿ ಅವಳ ಮುಖ ಎತ್ತಲು ತೊಡಗಿದರು.

ಪರೇಶ ಮತ್ತೆ ಹೇಳಿದ—"ನಿನ್ನ ಊಟವಾಗದೆ ಯಾರೂ ಊಟ ಮಾಡುವಂತಿಲ್ಲ. "

ಆಗ ಕಣ್ಣೊರೆಸಿಕೊಂಡು ವಿಜಯ ಎದ್ದು ಕುಳಿತಳು. ಯಾರ ಕಡೆಗೂ ನೋಡದೆ ಎದ್ದು ನಿಧಾನವಾಗಿ ಹೊರಗೆ ಹೋದಳು.

"ನರೇಂದ್ರ, ನಿನ್ನ ಸ್ನಾನ-ಊಟ ಇನ್ನೂ ಆಗಿಲ್ಲವೇ?"

"ಉಹುಂ." ನರೇಂದ್ರ ಉದಾಸೀನನಾಗಿ ಏನೋ ಯೋಚಿಸುತ್ತ ಹೇಳಿದ.

"ಹಾಗಾದರೆ ನನ್ನ ಜೊತೆಗೆ ಬಾ."

" ನಡೆಯಿರಿ " ಎಂದು ಅವನು ಕೂಡಲೆ ಎದ್ದು ನಿಂತ, ಇಬ್ಬರೂ ಹೊರಹೊರಟರು.

೨೫

ಅಂದು ಸಂಜೆಯೇ ಮದುವೆಯ ಸಂಬಂಧವಾಗಿ ವಿಜಯಳಿಗೆ ಕೆಲವು ವಿಷಯ ಹೇಳಿ ರಾಸಬಿಹಾರಿ ಮತ್ತು ವಿಲಾಸ ಮನೆಗೆ ಹೋದರು. ಆಮೇಲೆ ವಿಜಯ ಓದುವ ಕೋಣೆಗೆ ಹೋದಳು. ಅಲ್ಲಿ ತನ್ಮಯರಾಗಿ ಕುಳಿತಿದ್ದ ದಯಾಳರನ್ನು ನೋಡಿ ಅವಳು ಬೆರಗಾದಳು. ಅವರು ಯಾವಾಗ ಬಂದರು? ಎಷ್ಟು ಹೊತ್ತಿನಿಂದ ಇಲ್ಲಿ ಕುಳಿತಿದ್ದಾರೆಂಬುದು ಅವಳಿಗೆ ಗೊತ್ತಿರಲಿಲ್ಲ. ಆದರೂ ಅವರ ತನ್ಮಯತೆಯನ್ನು ಭಂಗಮಾಡುವ ಇಚ್ಛೆ ಅವಳಿಗಾಗಲಿಲ್ಲ. ಅವಳು ಬಂದಹಾಗೇ ನಿಶ್ಶಬ್ದವಾಗಿ ಹೊರಟುಹೋದಳು. ಮತ್ತೊಂದು ಗಂಟೆ ಬಿಟ್ಟು ಬಂದು ನೋಡಿದಳು. ಆಗಲೂ ಅವರು ಹಾಗೇ ಕುಳಿತಿದ್ದರು. ಆಗ ಅವಳು ಅವರ ಹತ್ತಿರ ಹೋಗಿ ನಿಂತಳು.

ದಯಾಳರು ಚಕಿತರಾಗಿ ಹೇಳಿದರು— "ನಿನಗಾಗಿಯೇ ಕಾದಿದ್ದೇನಮ್ಮ?"

"ಹಾಗಾದರೆ ಏಕೆ ಹೇಳಿಕಳುಹಿಸಲಿಲ್ಲ?"

"ನೀವು ಮಾತಾಡುತ್ತಿದ್ದಿರಿ. ಆದ್ದರಿಂದ ನಾನು ಅಡ್ಡಿಪಡಿಸುವುದು ಸರಿಯಲ್ಲವೆಂದು ಸುಮ್ಮನಾದೆ. ನಾಳೆ ಮಧ್ಯಾಹ್ನ ನಿನಗೆ ಆಹ್ವಾನ ಕೊಡಲು ಬಂದಿದ್ದೇನೆ........ಇಲ್ಲವೆಂದು ಖಂಡಿತ ಹೇಳಕೂಡದು. ನೀನೆಲ್ಲಿ ಇಲ್ಲವೆನ್ನುತ್ತೀಯೋ ಎಂಬ ಭಯದಿಂದ ನಾನೇ ಇಷ್ಟುದೂರ ನಡೆದುಬಂದೆ. ಆದರೆ ಆ ಉರಿಬಿಸಿಲಿನಲ್ಲಿ ನಡೆದುಬರಬೇಡ. ನಾನು ಪಲ್ಲಕ್ಕಿಯನ್ನು ಏರ್ಪಾಡು ಮಾಡಿದ್ದೇನೆ. ಅವರು ಹೊತ್ತಿಗೆ ಸರಿಯಾಗಿ ಬಂದು ಕರೆದುಕೊಂಡು ಬರುತ್ತಾರೆ."

ಅವರ ಈ ಮಮತೆಯ ನುಡಿಗಳನ್ನು ಕೇಳಿ ಅವಳ ಕಣ್ಣಿನಲ್ಲಿ ನೀರೂರಿತು. ಅವಳು ಹೇಳಿದಳು—"ನೀವೊಂದು ಕಾಗದ ಬರೆದಿದ್ದರೂ ನಾನು ಇಲ್ಲವೆನ್ನುತ್ತಿರಲಿಲ್ಲ. ಇದಕ್ಕಾಗಿ ನೀವೇ ಏಕೆ ಬಂದಿರಿ?"

ದಯಾಳರು ಎದ್ದು ಬಂದು ಅವಳ ಕೈಹಿಡಿದು ಹೇಳಿದರು— "ನೆನಪಿರಲಿ. ಈ ಮುದುಕನಿಗೆ ಮಾತು ಕೊಡುತ್ತಿದ್ದೀ! ಬರದಿದ್ದರೆ ನಾನಿನ್ನೊಮ್ಮೆ ನಡೆದು ಬರಬೇಕಾಗುತ್ತೆ. ಖಂಡಿತವಾಗಿಯೂ ಬಿಡುವುದಿಲ್ಲ."

"ಆಗಲಿ." ವಿಜಯ ತಲೆಯಲ್ಲಾಡಿಸಿ ಹೇಳಿದಳು.

ಆದರೆ ಅವರು ಇಷ್ಟು ಒತ್ತಾಯಪಡಿಸಿದ್ದಕ್ಕೆ ಅವಳಿಗೆ ಮನಸ್ಸಿನಲ್ಲೇ ಆಶ್ಚರ್ಯವಾಯಿತು. ಇದಕ್ಕೆ ಮೊದಲು ಅವರೆಂದೂ ಆಹ್ವಾನ ಕೊಟ್ಟಿರಲಿಲ್ಲ.

ಅದರಲ್ಲೂ ಮಧ್ಯಾಹ್ನದ ಊಟಕ್ಕಾಗಿ ಇಷ್ಟು ಆಗ್ರಹ! ಇದೇನೋ ಸಾಧಾರಣವಿರಲಾರದು. ಅವಳಿಗೆ ಸಂಶಯ ಉಂಟಾಯಿತು. ಇಂದು ಮಧ್ಯಾಹ್ನದ ವರೆಗೂ ಈ ಆಹ್ವಾನದ ಸಂಕಲ್ಪ ಅವರ ಮನಸ್ಸಿಗೆ ಬಂದಿರಲಾರದು. ಆದರೂ ಅಷ್ಟರಲ್ಲೇ ಪಲ್ಲಕ್ಕಿ ಮುಂತಾದ್ದರ ಏರ್ಪಾಟು ಮಾಡಲು ಅವರು ಬಹಳ ಜಾಗರೂಕತೆ ವಹಿಸಿದ್ದರು.

ಮನಸ್ಸಿನ ಹೊಯ್ದಾಟವನ್ನು ಮುಚ್ಚಿಕೊಂಡು ಅವಳು ತುಸು ನಕ್ಕು ಕೇಳಿದಳು—"ಕಾರಣವೇನೆಂದು ಕೇಳಬಹುದೇ?"

ಅವರು ಸ್ವಲ್ಪವೂ ಹಿಂದೆಮುಂದೆ ನೋಡದೆ ಹೇಳಿದರು— "ಉಹುಂ ಮಗು, ಊಟಕ್ಕಿಂತ ಮುಂಚೆ ನಿನಗೆ ಅದನ್ನು ತಿಳಿಸಲಾರೆ."

"ಅದು ಹೋಗಲಿ. ಇನ್ನಾರಾರಿಗೆ ಆಹ್ವಾನ ಕೊಟ್ಟಿದ್ದೀರಿ? ಹೇಳಿ."

"ನಿನಗೆ ಎಲ್ಲರ ಪರಿಚಯವೂ ಇಲ್ಲ ಮಗು. ಅವರು ನನಗೆ ಇಲ್ಲಿಯ ಸ್ನೇಹಿತರೇ. ನಿನಗೆ ಪರಿಚಯವಿರುವವರ ಪೈಕಿ ಒಬ್ಬರು ರಾಸಬಿಹಾರಿ ಇನ್ನೊಬ್ಬರು ನರೇಂದ್ರ."

ದಯಾಳರು ಹೊರಟುಹೋದಮೇಲೆ ವಿಜಯ ಬಹಳ ಹೊತ್ತು ಸುಮ್ಮನೆ ಕುಳಿತು ಮನಸ್ಸಿನಲ್ಲೇ ಅದಕ್ಕೆ ಕಾರಣವನ್ನು ಹುಡುಕಿದಳು, ಆದರೆ ಅವಳು ಯೋಚಿಸಿದಂತೆಲ್ಲ, ಒಂದು ಅವ್ಯಕ್ತ ಸಂಶಯದಿಂದ ಅವಳ ಮನಸ್ಸು ಮಂಕಾಯಿತು.

ಆದರೆ ಮರುದಿನ ಮಧ್ಯಾಹ್ನ ಒಂದೂವರೆ ಗಂಟೆಯುವರೆಗೂ ಪಲ್ಲಕ್ಕಿ ಬರಲಿಲ್ಲ. ವಿಜಯಳು ಸಿದ್ಧಳಾಗಿ ದಾರಿ ಕಾಯುತ್ತಿದ್ದಳು. ಅವಳಿಗೊಂದು ಕಡೆ ಆಶ್ಚರ್ಯವಾಯಿತು. ಇನ್ನೊಂದುಕಡೆ ಹಾಯೆನಿಸಿತು. ಪರೇಶನ ತಾಯಿಯೂ ಜೊತೆಗೆ ಬರಬೇಕೆಂದು ನಿಶ್ಚಯವಾಗಿತ್ತು. ಅವಳು ನೂರಾರು ಹತ್ತಾರು ಸಲ ಏನಾದರೂ ಊಟ-ತಿಂಡಿ ಮಾಡುನಂತೆ ವಿಜಯಳಿಗೆ ಹೇಳಿದಳು. ದಯಾಳರು ಮುದುಕರು; ಅರಳು ಮರುಳಿನಲ್ಲಿ ಆಹ್ವಾನ ಕೊಟ್ಟಿದ್ದನ್ನೇ ಮರೆತುಬಿಟ್ಟರೋ ಏನೋ? ಆಳನ್ನು ಕಳುಹಿಸಿ ತಿಳಿದುಕೊಳ್ಳುವುದಕ್ಕೂ ಅವಳಿಗೆ ಸಂಕೋಚವೆನಿಸಿತು. ಏಕೆಂದರೆ ಅವರು ಏನಾದರೂ ಕಾರಣದಿಂದ ಕರೆಯುವುದನ್ನು ಮರೆತಿದ್ದರೆ ಇದರಿಂದ ಅವರನ್ನು ಬಹಳ ಸಂಕೋಚದಲ್ಲಿ ಹಾಕಿದಂತಾಗುತ್ತೆಂದುಕೊಂಡಳು ಹೀಗೆ ಅನಿಶ್ಚಿತವಾಗಿ ಅವಳಿಗೆ

ಏನು ಮಾಡುವುದಕ್ಕೂ ತೋರದಿರುವಾಗ ಪರೇಶ ಮೇಲುಸಿರು ಬಿಡುತ್ತಾ ಬಂದು ಪಲ್ಲಕ್ಕಿ ಬರುತ್ತಿದೆಯೆಂದು ಹೇಳಿದ.

ವಿಜಯಳು ಹೊರಟಾಗ ಆಗಲೇ ಸಂಜೆಯಾಗುತ್ತಿತ್ತು. ರಾಸಬಿಹಾರಿ ಕೆಲಸಗಾರರ ಜೊತೆಗೆ ಓಡಾಡುತ್ತಿದ್ದ. ಬೇಗ ಪಲ್ಲಕ್ಕಿಯ ಹತ್ತಿರ ಬಂದು ನಗುತ್ತ ಹೇಳಿದ—"ಈ ದಯಾಳನಿಗೆ ಭೋಜನ ಮಾಡಿಸುವ ಆಸಕ್ತಿ ಹೀಗೇಕೆ ಹೆಚ್ಚಾಯಿತೆಂಬುದೇ ಅರ್ಥವಾಗುವುದಿಲ್ಲ. ಸಂಜೆಯ ಹೊತ್ತಿಗೆ ನಾನೂ ಬರಬೇಕೆಂದು ಅವನು ಬಹಳ ಬಲವಂತ ಮಾಡಿದ್ದಾನೆ. ಆದರೆ ಪಲ್ಲಕ್ಕಿ ಕಳುಹಿಸಿದ್ದು ಕತ್ತಲಾದ್ದರಿಂದ ನನಗೆ ಬರಲು ಸಾಧ್ಯವಾಗಲಿಲ್ಲ ವೆಂದು ಹೇಳಿಬಿಡು ಮಗು."

ದಯಾಳರ ಮನೆಯ ಬಾಗಿಲಲ್ಲಿ ಮಾವಿನ ತೋರಣ ಕಂಗೊಳಿಸುತ್ತಿತ್ತು. ಎರಡು ಕಡೆಯೂ ನೀರಿನಿಂದ ತುಂಬಿದ ಕಲಶಗಳನ್ನಿಟ್ಟಿದ್ದರು. ವಿಜಯಳು ಬೆರಗಾದಳು. ದಯಾಳರು ಹಳ್ಳಿಯ ಕೆಲವು ದೊಡ್ಡ ಮನುಷ್ಯರೊಂದಿಗೆ ಮಾತಾಡುತ್ತಿದ್ದರು. ಅವಳು ಒಳಗೆ ಕಾಲಿಡುತ್ತಲೇ ಅವರು ಹಾರಿ ಬಂದು "ಅಮ್ಮ" ಎಂದು ಅವಳ ಕೈಹಿಡಿದುಕೊಂಡರು.

ಮೆಟ್ಟಲು ಹತ್ತುವಾಗ ವಿಜಯ ಸ್ವಲ್ಪ ಸಿಟ್ಟಿನ ಹಾಸ್ಯದಲ್ಲಿ ಹೇಳಿದಳು—"ಹಸಿವೆಯಿಂದ ಪ್ರಾಣ ಹೋಗುತ್ತಿದೆ. ಇದೇ ನಿಮ್ಮ ಮಧ್ಯಾಹ್ನದ ಭೋಜನವೆಂದು ತೋರುತ್ತೆ."

ದಯಾಳರು ಮೃದುವಾಗಿ ಹೇಳಿದರು—"ಇಂದು ನಿಮಗೆ ಊಟವಿಲ್ಲಮ್ಮ. ನರೇಂದ್ರನಂತೂ ನಿರ್ಜೀವನಂತೆ ಮಲಗಿದ್ದಾನೆ. ಇವತ್ತೊಂದು ದಿವಸವಾದರೂ ನಿನ್ನ ಒಕ್ಕಣ್ಣಭಟ್ಟಾಚಾರ್ಯರ ಅಪ್ಪಣೆಯನ್ನು ಕೇಳಲೇ ಬೇಕು."

ಪಡಸಾಲೆಯಲ್ಲಿ ಮದುವೆಯ ವ್ಯವಸ್ಥೆಯಾಗಿತ್ತು. ಇದೆಲ್ಲ ಏನೆಂಬುದು ಸರಿಯಾಗಿ ತಿಳಿಯದಿದ್ದರೂ, ವಿಜಯಳು ಮನಸ್ಸಿನಲ್ಲೇ ನಡುಗಿದಳು. ಬಾಯಿಬಿಟ್ಟು ಕೇಳಲೂ ಅವಳಿಗೆ ಧೈರ್ಯವಾಗಲಿಲ್ಲ."

ದಯಾಳರು ಸಹಜರೀತಿಯಲ್ಲ ಹೇಳಿದರು— "ಸಂಜೆಯಾದಮೇಲೇ ಮುಹೂರ್ತವಿರುವುದು........ ಇವತ್ತು ನಿನ್ನ ಮದುವೆ ವಿಜಯ. ಅದೃಷ್ಟದಿಂದ ಇವತ್ತು ಒಳ್ಳೆಯ ಮುಹೂರ್ತವೇ ಸಿಕ್ಕಿತು. ಸಿಕ್ಕದಿದ್ದರೂ ಇಂದೇ ಲಗ್ನ ಮಾಡಬೇಕಾಗಿತ್ತು; ತಪ್ಪಿಸಲಾಗುತ್ತಿರಲಿಲ್ಲ. ಎಲ್ಲ ಸರಿಹೋಯಿತು.

ಇಂದಿನ ಮುಹೂರ್ತವನ್ನು ಪಂಚಾಂಗದಲ್ಲಿ ದೇವರು ನಿಮಗಾಗಿಯೇ ಸೃಷ್ಟಿಸಿದ್ದಾನೆಂದು ಭಟ್ಟಾಚಾರ್ಯರು ಹೇಳಿದರು."

ವಿಜಯಳ ಮುಖ ಸಪ್ಪಗಾಗಿ ಅವಳು ಕೇಳಿದಳು—"ನೀವು ನನಗೆ ಹಿಂದೂ-ವಿವಾಹವನ್ನು ಮಾಡುತ್ತೀರಾ?"

"ಹಿಂದೂ ವಿವಾಹ ವಿವಾಹವಲ್ಲವೇ ಮಗು? ಸಾಂಪ್ರದಾಯಿಕವಾಗಿ ಬಂದದ್ದು ಮನುಷ್ಯನನ್ನು ಕುರುಡುಮಾಡಿಬಿಡುತ್ತದೆ. ನಿನ್ನೆಯೆಲ್ಲ ಇದಕ್ಕಾಗಿ ಯೋಚನೆ ಮಾಡಿದರೂ ಬಗೆಹರಿಯಲಿಲ್ಲ, ಆದರೆ ನಳಿನಿ ನನಗೆ ಸರಿಯಾಗಿ ಹೇಳಿದಳು—"ಮಾವ, ಅವಳ ತಂದೆ ಅವಳನ್ನು ಯಾರಿಗೆ ಒಪ್ಪಿಸಿಹೋಗಿದ್ದಾರೋ, ನೀನೂ ಅವರಿಗೇ ಒಪ್ಪಿಸು ಇಲ್ಲದೆ, ಬ್ರಾಹ್ಮ-ವಿವಾಹದ ಹಟದಿಂದ ಅಪಾತ್ರದಲ್ಲಿ ದಾನಮಾಡಿದರೆ, ಅನ್ಯಾಯ ಮಾಡಿದಂತಾಗುತ್ತೆ. ಮನಸ್ಸಿನ ಹೊಂದಿಕೆಯೇ ಸರಿಯಾದ ಮದುವೆಯಲ್ಲವೇ? ವಿವಾಹಮಂತ್ರವನ್ನು ಪ್ರಾಕೃತದಲ್ಲಿ ಹೇಳಿದರೇನು? ಸಂಸ್ಕೃತದಲ್ಲಿ ಹೇಳಿದರೇನು? ಭಟ್ಟಾಚಾರ್ಯರು ಹೇಳಿದರೇನು? ಆಚಾರ್ಯರು ಹೇಳಿದರೇನು? ಇದರಿಂದೆಲ್ಲ ಏನಾಗುತ್ತೆ ಮಾವ?" ಇಷ್ಟು ದೊಡ್ಡ ಸಮಸ್ಯೆ ಮಾತಾಡುತ್ತಿದ್ದಂತೆಯೇ ಬಗೆಹರಿಯಿತು. ನಾನು ಮನಸ್ಸಿನಲ್ಲೇ ಅಂದುಕೊಂಡೆ—"ಭಗವಂತ ನಿನ್ನಲ್ಲಿ ಯಾವುದೂ ಮುಚ್ಚುಮರೆ ಇಲ್ಲ. ನಾನಿವರ ಮದುವೆಯನ್ನು ಯಾವ ಮತದ ಪ್ರಕಾರ ಮಾಡಿದರೂ ನಿನಗೆ ನಾನಪರಾಧಿಯಾಗಲಾರೆ" ಆಷ್ಟಾದರೂ ನಾನು ನಳಿನಿಗೆ ಹೇಳಿದೆ—"ಆದರೆ ಇನ್ನೊಂದು ವಿಷಯ ನಳಿನಿ. ವಿಜಯ ಅವರಿಗೆ ಮಾತು ಕೊಟ್ಟಿದ್ದಾಳೆ. ಅವರು ಆದರಿಂದಲೇ ನಿಶ್ಚಿಂತರಾಗಿದ್ದಾರೆ. ಆ ಮಾತನ್ನು ಮೀರುವುದು ಹೇಗೆ?" ಅದಕ್ಕೆ ನಳಿನಿ ಹೇಳಿದಳು—"ಮಾವ, ವಿಜಯಳ ಆತ್ಮಸಾಕ್ಷಿ ಇದಕ್ಕೆ ಒಪ್ಪಿಗೆ ಕೊಟ್ಟಿಲ್ಲವೆಂಬುದು ನಿನಗೆ ಗೊತ್ತೇ ಇದೆ ಮಾವ. ಅದಕ್ಕಿಂತ ಅವಳ ಮಾತೇ ದೊಡ್ಡದೇ? ಅವಳ ಅಂತರಂಗದ ಸತ್ಯವನ್ನು ಮೀರಿ ಬಾಯ ಮಾತನ್ನೇ ದೊಡ್ಡದು ಮಾಡಬೇಕೆ?" ನನಗೆ ಆಶ್ಚರ್ಯವಾಗಿ "ನೀನಿದನ್ನೆಲ್ಲ ಹೇಗೆ ಕಲಿತೆ ಮಗು?" ಎಂದು ಕೇಳಿದೆ. ಅವಳು ಹೇಳಿದಳು—"ನಗೇಂದ್ರ ಬಾಬುಗಳಿಂದ ಕಲಿತೆ. ಸತ್ಯದ ಸ್ಥಾನ ಹೃದಯ, ಬಾಯಲ್ಲ ಎಂದು ಅವರು ಬಾರಿಬಾರಿಗೂ ಹೇಳುತ್ತಿರುತ್ತಾರೆ. ಬಾಯಿಂದ ಹೊರಬಿದ್ದ ಮಾತ್ರಕ್ಕೆ ಯಾವ ಮಾತೂ ಸತ್ಯವಾಗಿ ಬಿಡುವುದಿಲ್ಲ. ಆದರೂ ಅದನ್ನೇ ಎಲ್ಲಕ್ಕಿಂತ ಹೆಚ್ಚಾಗಿ, ಎಲ್ಲಕ್ಕಿಂತ ಮುಂದೆಂದು ತಿಳಿಯು

ವವರಿಗೆ ಸತ್ಯದಲ್ಲಿ ಶ್ರದ್ಧೆಯಿಲ್ಲ. ಅವರಿಗಿರುವ ಶ್ರದ್ಧೆ ಸತ್ಯಭಾಷಣವೆಂಬ ಡಂಭಾಚಾರದಲ್ಲಿ."

ಸ್ವಲ್ಪ ಹೊತ್ತು ಸುಮ್ಮನಿದ್ದು ಅವರು ಮತ್ತೆ ಹೇಳಿದರು—"ನಿನಗೆ ನರೇಂದ್ರನ ವಿಷಯ ಗೊತ್ತಿಲ್ಲಮ್ಮ. ಅವನಿಗೆ ನಿನ್ನೆಲ್ಲೆಷ್ಟು ಪ್ರೇಮವೆಂಬುದೂ ನಿನಗೆ ಸರಿಯಾಗಿ ತಿಳಿಯದು. ನಿನ್ನ ತಲೆಗೆ ಅಸತ್ಯದ ಭಾರವನ್ನು ಹೊರೆಸಿ ನಿನ್ನನ್ನು ಪಡೆಯಲು ಅವನೆಂದಿಗೂ ಒಪ್ಪುವುದಿಲ್ಲ. ನೀನೊಮ್ಮೆ ಮೊದಲಿನಿಂದ ಕೊನೆಯವರೆಗೂ ಅವನ ರೀತಿನೀತಿಗಳನ್ನು ಸ್ಮರಣೆಗೆ ತಂದುಕೊಂಡು ನೋಡು."

ವಿಜಯ ಒಂದು ಮಾತನ್ನೂ ಆಡದೆ, ಕಲ್ಲಿನಂತೆ ತಲೆ ತಗ್ಗಿಸಿಕೊಂಡು ನಿಂತಿದ್ದಳು.

ನಳಿನಿ ಒಳಗೆ ಕೆಲಸದಲ್ಲಿ ಮಗ್ನಳಾಗಿದ್ದಳು. ವಿಜಯಳು ಬಂದ ಸುದ್ದಿಯನ್ನು ಕೇಳಿ ಅವಳು ಓಡಿಬಂದು ವಿಜಯಳನ್ನು ಅಲ್ಲಾಡಿಸಿ ಹಿಡಿದುಕೊಂಡು, ಅವಳ ಕಿವಿಯಲ್ಲಿ ಹೇಳಿದಳು—"ನಿನ್ನನ್ನು ಸಿಂಗರಿಸುವ ಭಾರವನ್ನು ನರೇಂದ್ರಬಾಬು ನನಗೆ ಕೊಟ್ಟಿದ್ದಾರೆ........ ನಡೆ." ಎಂದು ಅವಳು ಬಲಾತ್ಕಾರದಿಂದ ವಿಜಯಳನ್ನು ಎಳೆದುಕೊಂಡು ಹೋದಳು.

ಎರಡು ಗಂಟೆಯಮೇಲೆ ಅವಳು ವಿಜಯಳನ್ನು ಹೂ ಮತ್ತು ಚಂದದಿಂದ ಸಿಂಗರಿಸಿ ವಧುವಿನ ಆಸನದ ಮೇಲೆ ಕೂಡಿಸಿದಳು. ಎದುರಿನ ಕಿಟಕಿಯನ್ನು ತೆರೆದರು. ಆಗ ಅವಳು ನಾಚಿಕೆಯ ಮುಖದ ಮೇಲೆ ದಕ್ಷಿಣ ಮಾರುತ ಮತ್ತು ಬೆಳದಿಂಗಳು ಅವಳ ತಂದೆ-ತಾಯಿಯರ ಆಶೀರ್ವಾದದಂತೆ ಬಿದ್ದಿತು.

ಕನ್ಯಾದಾನ ಮಾಡಲು ಕುಳಿತಿದ್ದವಳು ಒಂದು ರೀತಿಯಿಂದ ವಿಜಯಳಿಗೆ ದೂರದ ಅತ್ತೆಯಾಗಬೇಕೆಂದು ಹೇಳಿದರು. ಏಕಾಕ್ಷಿ ಭಟ್ಟಾಚಾರ್ಯರು ಮಂತ್ರ ಹೇಳುತ್ತ ತಾವೀ ಮನೆತನಕ್ಕೆ ಅನೇಕ ತಲೆಮಾರಿನಿಂದಲೂ ಪುರೋಹಿತರೆಂದು ಹೇಳಿಕೊಂಡರು. ಮದುವೆಯ ಕೆಲಸಗಳೆಲ್ಲ ಮುಗಿದು ವಧೂವರರನ್ನು ಎಬ್ಬಿಸಬೇಕೆಂದಿರುವಷ್ಟರಲ್ಲಿ ರಾಸಬಿಹಾರಿ ವಿವಾಹಮಂಟಪಕ್ಕೆ ಬಂದ. ದಯಾಳರು ಮರ್ಯಾದೆಯಿಂದ ಕೈಮುಗಿದು ಹೇಳಿದರು—"ಬನ್ನಿ. ಶುಭಕಾರ್ಯ ನಿರ್ವಿಘ್ನವಾಗಿ ನೆರವೇರಿತು........ಇನ್ನೇನೂ ಇಂದು

ಮನಸ್ಸಿಗೆ ದುಃಖ ಹಚ್ಚಿ ಕೊಳ್ಳಬೇಡ. ವಧೂ-ವರರಿಗೆ ಆಶೀರ್ವಾದ ಮಾಡಿ."

ರಾಸಬಿಹಾರಿ ಒಂದುಕ್ಷಣ ಸ್ತಬ್ಧನಾಗಿ ನಿಂತಿದ್ದು ಹೇಳಿದ—"ವನ ಮಾಲಿಯ ಮಗಳ ಲಗ್ನವನ್ನು ಕೊನೆಗೆ ಹಿಂದೂ ಪದ್ಧತಿಯಂತೆ ಮಾಡಿದೆಯಾ ದಯಾಳ. ನನಗೊಂದು ಮಾತು ಮೊದಲೇ ತಿಳಿಸಿದ್ದರೆ ಇದರ ಅಗತ್ಯವೇ ಇರಲಿಲ್ಲ."

"ಮದುವೆಯೆಲ್ಲ ಒಂದೇ ಅಲ್ಲವೇ?"

ರಾಸಬಿಹಾರಿ ಕಠೋರ ಸ್ವರದಲ್ಲಿ ಹೇಳಿದ—"ಅಲ್ಲ. ವನಮಾಲಿಯ ಮಗಳು ತನ್ನ ತಂದೆಯ ಗ್ರಾಮದಿಂದ ಬದುಕಿರುವವರೆಗೂ ಬಹಿಷ್ಕೃತಳಾಗಿರ ಬೇಕಾಗುತ್ತೆಂಬುದನ್ನಾದರೂ ಒಮ್ಮೆ ವಿಚಾರಮಾಡಲಿಲ್ಲವೇ?"

ನಳಿನಿ ಹತ್ತಿರದಲ್ಲೇ ನಿಂತಿದ್ದಳು. ಅವಳು ಹೇಳಿದಳು—"ಅವರ ಮಗಳು ತನ್ನ ತಂದೆಯ ನಿಜವಾದ ಆಜ್ಞೆಯನ್ನು ಪಾಲಿಸಿದ್ದಾಳೆ. ಆಚರಣೆಯ ವಿಷಯ ಯೋಚಿಸಲು ಅವಳಿಗೆ ಪುರುಸೊತ್ತಿರಲಿಲ್ಲ. ವನ ಮಾಲೀಬಾಬುಗಳ ಆಂತರಿಕ ಇಚ್ಛೆಯೇನೆಂಬುದು ನಿಮಗೆ ಚೆನ್ನಾಗಿ ಗೊತ್ತಿತ್ತು. ಅದರಲ್ಲೇನೂ ತಪ್ಪಾಗಲಿಲ್ಲ."

ರಾಸಬಿಹಾರಿ ನಳಿನಿಯ ಕಡೆ ನೋಡಿ ಹೂಂಕರಿಸಿ ಸುಮ್ಮನಾದ. ಅವನು ವಾಪಸು ಹೊರಟಿದ್ದ. ಅಷ್ಟರಲ್ಲೇ ನಳಿನಿ ಹೇಳಿದಳು—"ಭೇಷ್ ನೀವು ಮದುವೆಯ ಮನೆಯಿಂದ ಬರಿಗೈಯಲ್ಲಿ ಹೋಗುತ್ತೀರಾ? ಅದೆಂದಿಗೂ ಸಾಧ್ಯವಿಲ್ಲ. ನೀವು ಭೋಜನ ಮಾಡಿಕೊಂಡೇ ಹೋಗಬೇಕು. ನಾನು ಮಾವನಿಗೆ ಹೇಳಿ ಬಹಳ ಕಷ್ಟದಿಂದ ನಿಮಗೆ ಆಹ್ವಾನ ಕೊಡಿಸಿದ್ದೇನೆ.

ರಾಸಬಿಹಾರಿ ಬಾಯಿಂದ ಏನೂ ಹೇಳದೆ, ಅವಳನ್ನೊಮ್ಮೆ ಕಿಡಿ ಕಾರುವ ಕಣ್ಣಿನಿಂದ ನೋಡುತ್ತಾ ನಿಧಾನವಾಗಿ ಹೊರಹೊರಟ.



# ಪ್ರಕಟಣೆಗಳ ವಿವರ

---

## ಕಾದಂಬರಿಗಳು

| | | | |
|---|---|---|---|
| ೧. | ತಾಯಿಯ ಕರುಳು — | ಅ. ನ. ಕೃ. — | ೧-೮-೦ |
| ೨. | ಹೊಸಲುದಾಟಿದ ಹೆಣ್ಣು — | " — | ೧-೮-೦ |
| ೩. | ನಟಸಾರ್ವಭೌಮ - ಭಾಗ ೧ — | " — | ೧-೮-೦ |
| ೪. | " ಭಾಗ ೨ — | " — | ೧-೮-೦ |
| ೫. | " ಭಾಗ ೩ — | " — | ೧-೮-೦ |
| ೬. | ವಿಮೋಚನೆ — | ನಿರಂಜನ — | ೧-೮-೦ |
| ೭. | ಪುಟ್ಟತಾಯಿ — | ನರೇಂದ್ರಬಾಬು — | ೧-೮-೦ |
| ೮. | ನಾಲ್ಕನೆಯ ಮನೆ — | " — | ೧-೦-೦ |
| ೯. | ಚಿತ್ರನಥೆ — | " — | ೧-೮-೦ |
| ೧೦. | ಅವಳತಂಗಿ — | " — | ೧-೪-೦ |
| ೧೧. | ದೂರದ ಬೆಟ್ಟ — | ತ್ರಿವೇಣಿ — | ೧-೪-೦ |
| ೧೨. | ಅಪಜಯ — | " — | ೧-೮-೦ |
| ೧೩. | ಮುಚ್ಚಿದ ಬಾಗಿಲು — | " — | ೧-೮-೦ |
| ೧೪. | ಕೊನೆಯ ಭೇಟಿ — | ಸರೋಜಮ್ಮ — | ೧-೮-೦ |
| ೧೫. | ಒಡೆದ ಮುತ್ತು — | ದೇವುಡು — | ೧-೮-೦ |
| ೧೬. | ಗೃಹಿಣಿ — | ಶ್ರೀನಿವಾಸರಾವ್ ಕೊರಟಿ — | ೧-೮-೦ |
| ೧೭. | ಜೈತ್ರಯಾತ್ರೆ — | " — | ೦-೧೨-೦ |
| ೧೮. | ಪಾರಿಜಾತ — | ತ. ರಾ. ಸು. — | ೦-೧೨-೦ |
| ೧೯. | ದೌಲತ್ — | ವೀರಕೇಸರಿ — | ೨-೧೫-೦ |
| ೨೦. | ಪರೀಕ್ಷೆ — | ವೈ. ವಿ. ಇಂದಿರಾಬಾಯಿ — | ೧-೪-೦ |
| ೨೧. | ಬದುಕಿನ ಬೈರಾಗಿ — | ವಿಜಯನಾರಸಿಂಹ — | ೦-೧೨-೦ |
| ೨೨. | ಗೋರಿ-ಗೋಪುರ — | ಡಿ. ವಿ. ರಾಘವೇಂದ್ರ — | ೦-೧೨-೦ |
| ೨೩. | ಬಾಡಿದ ಬಳ್ಳಿ — | ಎಸ್. ಕಮಲಮ್ಮ — | ೦-೧೨-೦ |

| | | | | | |
|---|---|---|---|---|---|
| ೨೪. | ಬಿಡುಗಡೆ | — | ವಾಣಿ | — | ೧–೪–೦ |
| ೨೫. | ದತ್ತಾ | — | ಶರಚ್ಚಂದ್ರ | — | ೧–೮–೦ |
| ೨೬. | ವೈಕುಂಠನ ಉಯಿಲು | — | ” | — | ೧–೦–೦ |
| ೨೭. | ಬ್ರಾಹ್ಮಣರ ಹುಡುಗಿ | — | ” | — | ೦–೧೨–೦ |
| ೨೮. | ಚಂದ್ರನಾಥ | — | ” | — | ೧–೪–೦ |
| ೨೯. | ಸುಮತಿ | — | ” | — | ೦–೧೨–೦ |
| ೩೦. | ಅನುಪಮೆಯ ಪ್ರೇಮ | — | ” | — | ೦–೧೨–೦ |
| ೩೧. | ಅನುರಾಧ | — | ” | — | ೦–೬–೦ |
| ೩೨. | ಮಹೇಶ | — | ” | — | ೦–೪–೦ |

## ಸಣ್ಣ ಕಥೆಗಳು

| | | | | | |
|---|---|---|---|---|---|
| ೩೩. | ಬಯಕೆಯ ಬೇಲಿ | — | ಎಸ್. ಅನಂತನಾರಾಯಣ | — | ೧–೮–೦ |
| ೩೪. | ಬೆಳುದಿಂಗಳ ರಾತ್ರಿಯಲ್ಲಿ | — | ” | — | ೧–೮–೦ |
| ೩೫. | ಲತೆ | — | ವೈ. ವಿ. ಇಂದಿರಾಬಾಯಿ | — | ೧–೧೫–೦ |
| ೩೬. | ಕೊನೆಯ ಗಿರಾಕಿ | — | ನಿರಂಜನ | — | ೦–೧೦–೦ |
| ೩೭. | ಇಣಿಕು ನೋಟ | — | ಚದುರಂಗ | — | ೦–೧೫–೦ |
| ೩೮. | ಸಂಪಗೆ | — | ನರೇಂದ್ರಬಾಬು | — | ೦–೧೨–೦ |

## ನಾಟಕಗಳು – ಪ್ರಹಸನಗಳು

| | | | | | |
|---|---|---|---|---|---|
| ೩೯. | ಬಾಡಿಗೆ ಮೀಸೆ | — | ನರೇಂದ್ರಬಾಬು | — | ೦–೮–೦ |
| ೪೦. | ಓಟಿನ ರಾಜ | — | ” | — | ೦–೮–೦ |
| ೪೧. | ಗುರುಭಯಂಕರ | — | ” | — | ೦–೮–೦ |
| ೪೨. | ಸಿನಿಮಾ ಅಳಿಯ | — | ” | — | ೦–೬–೦ |
| ೪೩. | ವಧು ವಿಹೀನ | — | ” | — | ೦–೬–೦ |
| ೪೪. | ಸರ್ಕಾರಿ ನೌಕರಿ | — | ” | — | ೦–೧೨–೦ |
| ೪೫. | ಎನ್. ಜಿ. ಓ. | — | ಆತ್ರೇಯ | — | ೧–೦–೦ |
| ೪೬. | ಮಂಗಳಾರತಿ | — | ಎಸ್. ಅನಂತನಾರಾಯಣ | — | ೦–೪–೦ |
| ೪೭. | ಪ್ರೇಮ – ಬಲಿ | — | ” | — | ೦–೪–೦ |

೪೮. ಮರುಳು ಮದುವೆ — ಕೆ. ಎಸ್. ಕೃಷ್ಣಮೂರ್ತಿ — ೦–೧೦–೦
೪೯. ಸತ್ಯದ ಶ್ಲೋಕು — ಚದುರಂಗ — ೦–೮–೦
೫೦. ಕುರುಡರ ಮಾಯಣ್ಣ — ಶ್ರೀಧರ್ — (ಅಚ್ಚಿನಲ್ಲಿ)

## ಪತ್ತೇದಾರಿ ಕಾದಂಬರಿಗಳು

೫೧. ಪ್ರತೀಕಾರ — ಡಿ. ವಿ. ರಾಘವೇಂದ್ರ — ೦–೧೦–೦
೫೨. ಬಿರುಗಾಳಿ — ” — ೦–೧೦–೦
೫೩. ಜ್ವಾಲಾಮುಖಿ — ” — ೦–೧೦–೦
೫೪. ದ್ರೋಹಿ ಮತ್ತು ಅಪಹೃತ ಕನ್ಯೆ — ಅಣ್ಣಾಗಿರಿ — ೧–೮–೦

: ಅಚ್ಚಿನಲ್ಲಿ :

೧. ದಿವಂಗತ ಪಂಡಿತ ಜಯರಾಯಾಚಾರ್ಯ ವಿರಚಿತ
**‘ಕನ್ನಡ ವೇಣೀಸಂಹಾರ ನಾಟಕ’**
(ಭಟ್ಟ ನಾರಾಯಣನ ಪ್ರಖ್ಯಾತ ಸಂಸ್ಕೃತ ನಾಟಕದ ಭಾಷಾಂತರ)

೨. ಎಸ್. ಕೃಷ್ಣಪ್ಪ, ಎಂ.ಎ., ಬಿ.ಟಿ., ಅವರ
**‘ಬೋಧನಾ ನಿಯಮಗಳು ಮತ್ತು ಶಿಕ್ಷಣ ಸಮಸ್ಯೆಗಳು’**

: ಪ್ರಕಾಶಕರು :
**ಡಿ. ವಿ. ಕೆ. ಮೂರ್ತಿ**
**ಕೃಷ್ಣಮೂರ್ತಿಪುರಂ : : ಮೈಸೂರು.**